

# ಒಂಟಿ ಸೇತುವೆ

**ಕೊಂಡಪಲ್ಲಿ ಕೋಟೇಶ್ವರಮ್ಮ ಅವರ ಆತ್ಮಕಥನ.**
**ಚಳುವಳಿಗಾಗಿ ಒಬ್ಬ ಮಹಿಳೆ ಎಷ್ಟೆಲ್ಲವನ್ನು ತ್ಯಾಗ ಮಾಡಬಲ್ಲಳು ಎಂಬುದಕ್ಕೆ ಈ ತಾಯಿ ಒಂದು ಆದರ್ಶ ಮಾತ್ರವಲ್ಲದೆ ಸಾರ್ವಕಾಲಿಕ ಉದಾಹರಣೆಯಾಗಬಲ್ಲಳು.**

ಕಮ್ಯುನಿಸ್ಟ್ ಚಳವಳಿಯಲ್ಲಿ, ಮಹಿಳಾ ಹೋರಾಟಗಳಲ್ಲಿ, ಸಾಂಸ್ಕೃತಿಕ ಕ್ಷೇತ್ರದಲ್ಲಿ ನಿಸ್ವಾರ್ಥವಾಗಿ ಸೇವೆ ಸಲ್ಲಿಸಿರುವ, ಹಲವು ಕಷ್ಟಕೋಟಲೆಗಳನ್ನು ಅನುಭವಿಸಿರುವ ಹೆಣ್ಣಿನ ಆತ್ಮಕಥೆ ಇದು. ಆಂಧ್ರಪ್ರದೇಶದ ಕುಗ್ರಾಮವೊಂದರಲ್ಲಿ ಜನಿಸಿ, ಅರಿವು ಮೂಡುವ ಮೊದಲೇ ವೈಧವ್ಯ ಕಂಡು, ಮರುವಿವಾಹವಾಗಿ, ಸ್ವಪ್ರಯತ್ನದಿಂದ ಮೆಟ್ರಿಕ್‌ವರೆಗೆ ಓದಿ ಜೀವನವಿಡೀ ಹೋರಾಟದ ಬದುಕು ನಡೆಸಿದ ಕೊಂಡಪಲ್ಲಿ ಕೋಟೇಶ್ವರಮ್ಮ ತೊಂಬತ್ತೆರಡರ ಹರೆಯದಲ್ಲಿ ದಾಖಲಿಸಿರುವ ನೆನಪುಗಳು ಎಂಥ ಗಟ್ಟಿ ಮನಸ್ಸನ್ನೂ ಕಲಕುವಂಥವು.

ಕಮ್ಯುನಿಸ್ಟ್ ಪಕ್ಷ ಭಿನ್ನಾಭಿಪ್ರಾಯಗಳಿಂದ ಒಡೆದುಹೋದ ಮೇಲೆಯೂ ಅದು ಒಂದಾಗುವ ಕನಸನ್ನು ಇಂದಿಗೂ ಕಾಣುತ್ತಿರುವ ಆಶಾಜೀವಿ. ತನ್ನ ಮಗನನ್ನು ಕಳೆದುಕೊಂಡಾಗಲೂ ಹಾಗೆಯೇ ಮಗಳು, ಅಳಿಯ ತನ್ನ ಕಣ್ಣೆದುರಿಗೆ ಮರಣ ಹೊಂದಿದಾಗಲೂ ಪಕ್ಷದ ಹಿತದೃಷ್ಟಿಯಿಂದ ಆ ನೋವನ್ನು ನುಂಗಿಕೊಂಡ ಮಹಾಮಾತೆ. ಗಂಡ ಕೊಂಡಪಲ್ಲಿ ಸೀತಾರಾಮಯ್ಯ ತೊರೆದು ಹೋಗಿ 38 ವರ್ಷಗಳ ನಂತರ ಹಿಂದಿರುಗಿದಾಗ ಆತನನ್ನು ಸಹಿಸಿಕೊಂಡ ಈ ಹೆಣ್ಣು ಹೃದಯ ಕಡಲಿನಷ್ಟು ವಿಸ್ತಾರ. ಈಕೆಯೇ ಒಂದು ಉಪಮೆ ಎನ್ನಬಹುದು. ಚಳವಳಿಗಾಗಿ ಒಬ್ಬ ಮಹಿಳೆ ಎಷ್ಟೆಲ್ಲವನ್ನು ತ್ಯಾಗ ಮಾಡಬಲ್ಲಳು ಎಂಬುದಕ್ಕೆ ಈ ತಾಯಿ ಒಂದು ಆದರ್ಶ ಮಾತ್ರವಲ್ಲದೆ ಸಾರ್ವಕಾಲಿಕ ಉದಾಹರಣೆಯಾಗಬಲ್ಲಳು. ಅವರ ಬದುಕು, ಹೋರಾಟ, ತ್ಯಾಗಗಳ ಜೀವನಗಾಥೆಯನ್ನು ಎಲ್ಲರೂ ಅದರಲ್ಲೂ ಮುಖ್ಯವಾಗಿ ಕಮ್ಯುನಿಸ್ಟರು, ಮಹಿಳಾ ಹೋರಾಟಗಾರರು ಓದಲೇಬೇಕು.




₹ 90

ಮೂರು ವರ್ಷದ 'ಹೊಸತು' ಚಂದಾದಾರರಿಗೆ 20% ಸೋಡಿ. ಇತರರಿಗೆ 10% ಸೋಡಿ. ಅಂಚೆವೆಚ್ಚ ₹ 25 ಪ್ರತ್ಯೇಕ

ಹಣವನ್ನು ಡಿ.ಡಿ., ಎಂ.ಒ. ಮೂಲಕ ಕಳಿಸಿ ಅಥವಾ ನಮ್ಮ ಪುಸ್ತಕ ಮಳಿಗೆಗೆ ಭೇಟಿ ನೀಡಿ

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**

11, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ 5159, ಕುಮಾರ ಪಾರ್ಕ್ ಪೂರ್ವ ಬೆಂಗಳೂರು - 560 001. ಫೋನ್ : 080-22392460/61 ಮೊಬೈಲ್ : 9480686858
e-mail : navakarnataka@gmail.com http://navakarnataka.blogspot.in

ಆನ್‌ಲೈನ್ ಮೂಲಕವೂ ಲಭ್ಯ 

www.navakarnataka.com

ಶಾಖೆಗಳು : ಬೆಂಗಳೂರು ✆ 22251382 ✆ 22203106 :: ಮಂಗಳೂರು ✆ 2441016 ✆ 2425161 :: ಮೈಸೂರು ✆ 2424094 :: ಕಲಬುರಗಿ ✆ 224302

# ಹೊಸತು




## ನೆಮ್ಮದಿಯ ನಾಳೆ ನಮ್ಮದು


**ಭಗವದ್ಗೀತೆ : ಒಂದು ಅವಲೋಕನ**
**೪. ನಿಷ್ಕಾಮಕರ್ಮವೆಂಬ ಮಿಥ್ಯೆ** *ಜಿ. ರಾಮಕೃಷ್ಣ* …೧೧

**ಅಸ್ಮಿತೆಯ ಚಳುವಳಿಗಳು ಜನಪರ ಚಳುವಳಿಯ ಒಕ್ಕೂಟವಾಗಬೇಕು**
*ಸಂದರ್ಶಕರು : ಡಾ॥ ಎನ್. ಗಾಯತ್ರಿ*
*ಡಾ॥ ಸಿದ್ದನಗೌಡ ಪಾಟೀಲ* …೧೫

**ಕರ್ನಾಟಕ ಏಕೀಕರಣ ಅರವತ್ತರ ಸಂಭ್ರಮ** *ಪ್ರಕಾಶ ಗಿರಿಮಲ್ಲನವರ* …೧೯

**ನೋಟು ರದ್ದತಿ: ನಿರ್ದಿಷ್ಟ ದಾಳಿಯೋ ಅಥವಾ**
**ಗುಂಡುಪಿನ್ ಚುಚ್ಚುವಿಕೆಯೋ?** *ಮ. ಶ್ರೀ. ಮುರಳಿ ಕೃಷ್ಣ* …೨೯

**ನೀರ ಹೆಣ** *ಡಾ॥ ಶಿವರಾಮ ಅಸುಂಡಿ* …೩೯
**ಗುಬ್ಬಚ್ಚಿ ಕಲಿಸಿದ ಪಾಠ** *ಡಾ॥ ಎಚ್. ಕೆ. ರಾಮಚಂದ್ರಮೂರ್ತಿ* …೩೫

**ಕಾವ್ಯಲೋಕ :** ೧೭, ೨೦, ೩೭, ೫೧, ೫೮

**ನಂಬಿಕೆಯೋ, ಸಂಶೋಧನೆಯೋ?** *ಎಚ್. ಎಸ್. ಮಂಜುನಾಥ* …೪೭
**ನೊಬೆಲ್ ಪ್ರಶಸ್ತಿಯ ವಿಜ್ಞಾನ ತಾಣಗಳು (೨೦೧೬)**
*ಅಡ್ಯನಡ್ಕ ಕೃಷ್ಣ ಭಟ್* …೨೩

**ಪರಂಪರೆಯ ಶೋಧದಲ್ಲಿ** *ಮರಾಠಿ ಮೂಲ : ಗಣೇಶ್ ದೇವಿ*
*ಕನ್ನಡಕ್ಕೆ : ಚಂದ್ರಕಾಂತ ಪೋಕಳೆ* …೪೯

**ಜಾನಪದರಲ್ಲಿ ವಿನೋದಪ್ರಜ್ಞೆ** *ಶಂಕರ ಬೈಚಬಾಳ* …೫೩
**ಜಾತಿ ಸಮಾಜ; ಒಳ ಮೀಸಲಾತಿಯ ಪ್ರಶ್ನೆಗಳು**
*ಡಾ॥ ಕುಂಸಿ ಉಮೇಶ್* …೫೫

**ವೃತ್ತಿರಂಗಭೂಮಿಯಲ್ಲಿ ಉತ್ತರ ಕರ್ನಾಟಕದ ಸಂಗೀತಗಾರ್ತಿಯರು**
*ಡಾ॥ ದೇವಿಕಾ ಡಿ. ನಗರಕರ* …೬೦
**ಪ್ರಾರ್ಥನೆಯ ನಾಯಕ ಯಾರು?** *ಎನ್. ಬೋರಲಿಂಗಯ್ಯ* …೩೩

**ಕಪ್ಪತ್ತಗುಡ್ಡದ ಒಳಸುಳಿ ಮತ್ತು ಹೊರಸುಳಿ**
*ಎಂ. ಮಂಜುನಾಥ ಬಮ್ಮನಕಟ್ಟಿ* …೨೫

**ನಾನು ಓದಿದ ಪುಸ್ತಕ : ನಿಜಲಿಂಗ : ಭೂತ – ವರ್ತಮಾನದ ಸಂಕೀರ್ಣತೆಯ**
**ಅನ್ವೇಷಣೆ** *ಸಿ. ಎಸ್. ಭೀಮರಾಯ* …೪೩
**ವಿಶ್ವವೀಕ್ಷಣೆ : ಅಮೆರಿಕ ಚುನಾವಣೆ – ಟ್ರಂಪ್ ಅನಿರೀಕ್ಷಿತ ಜಯ !**
*ಸೀಯಾರ್ಕೆ* …೪೬
**ನಭಾವಲೋಕನ : ನೆಪ್ಚ್ಯೂನ್‌ಅನ್ನು ಗುರುತಿಸುವ ಅವಕಾಶ**
*ಡಾ॥ ಬಿ. ಎಸ್. ಶೈಲಜಾ* …೩೮
**ಹೊಸ ಓದು** *ಡಾ॥ ಎಂ. ವೆಂಕಟಸ್ವಾಮಿ, ಕಲ್ಲೇಶ್ ಕುಂಬಾರ್* …೩೨
**ಕ್ಷ–ಕಿರಣ** *ಸಾನ್ವಿ ಪಿ.* …೨೮



**ಚಿತ್ರಗಳು :** ಕಮಲಂ ಅರಸು, ಸುನಿಲ್ ಮಿಶ್ರಾ, ನಾಮದೇವ ಕಾಗದಗಾರ, ವಿ. ಗೋಪಾಲ್, ಗೋಪಿ ಹಿರೇಬೆಟ್ಟು, ಜಿ. ಎಂ. ಬೊಮ್ನಳ್ಳಿ
**ಮುಖಪುಟ :** ೮೨ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾದ ಡಾ॥ ಬರಗೂರು ರಾಮಚಂದ್ರಪ್ಪ
**ವಿನ್ಯಾಸ :** ನವಕರ್ನಾಟಕ ವಿನ್ಯಾಸ
**ಕಚೇರಿ ಸಹಕಾರ :** ಜಿ. ವಿ. ತೇಜೋವತಿ


## ಈ ತಿಂಗಳು

ಗ್ರಹಚಾರ ಅನ್ನೋದು ಏನಾದ್ರೂ ಇದ್ರೆ ಅದು ಮುಖ್ಯಮಂತ್ರಿ ಸಿದ್ದರಾಮಯ್ಯಗೆ ಅಂಟಿದ್ದು ಇರಬೇಕು. ಅಧಿಕಾರ ವಹಿಸಿಕೊಂಡಾಗಿನಿಂದ ಒಂದಲ್ಲ ಒಂದು ಫಜೀತಿಯಲ್ಲಿ ಸಿಕ್ಕಿಕೊಳ್ಳುತ್ತಿದ್ದಾರೆ. ಮುಖ್ಯಮಂತ್ರಿ ಗಾದಿ ಸಿಕ್ಕಿದ್ದೇ ದೊಡ್ಡದು, ಪರಮೇಶ್ವರನ ಕಾಟ ತಪ್ಪಿಸಿಕೊಂಡು. ಕಾಂಗ್ರೆಸ್ಸಿನಲ್ಲಿ ನಾಯಕರಿಗೇನೂ ಕೊರತೆ ಇಲ್ಲ. ಎಲ್ಲರೂ ಅರ್ಹರೆ ಸಚಿವರಾಗಲು. ಯಾರೋ ಕೊಟ್ಟ ಕೈಗಡಿಯಾರ ಸಿದ್ದರಾಮಯ್ಯಗೆ ಕಾಟ ಕೊಟ್ಟಿತು. ದುಬಾರಿ ಬೆಲೆಯ 'ರಿಸ್ಟ್ ವಾಚ್' ಅವರ 'ರಿಸ್ಟ್'ನಲ್ಲಿದ್ದುದು ಅಲ್ಪಕಾಲ ಅಷ್ಟೆ. ಆದರೆ ಅದು ತಂದ ಕಳಂಕ ಇನ್ನೂ ಹೋಗಿಲ್ಲ. ಅತ್ತೂ ಕರೆದು, ದೆಹಲಿಗೆ ಹಾರಿ, ಸೋನಿಯ–ರಾಹುಲ್ ಬಾಗಿಲು ಕಾದು ಕಾದು ಸುಸ್ತಾಗಿ ಮಾಡಿದ ಸಂಪುಟ ಪುನಾರಚನೆ ತಂದ ತಲೆನೋವು ಅಂತಿಂಥದ್ದಲ್ಲ. ಸಚಿವ ಸ್ಥಾನ ಕಳೆದುಕೊಂಡವರ ಅತೃಪ್ತಿ ಒಂದು ಕಡೆಯಾದರೆ, ಆಕಾಂಕ್ಷಿಗಳ ಗೋಳು ಇನ್ನೊಂದು ಕಡೆ. ಎಲ್ಲರೂ ಅತೃಪ್ತರೇ ಕಾಂಗ್ರೆಸ್ಸಿನಲ್ಲಿ. ಮುಂದಿನ ಚುನಾವಣೆ ಹೇಗೆ ಎದುರಿಸುತ್ತಾರೋ ನೋಡಬೇಕು. ಸಂಪುಟ ಪುನಾರಚನೆಯ ಹೈಡ್ರಾಮಾದಲ್ಲಿ ಅಂಬರೀಷ್ ಮತ್ತು ಶ್ರೀನಿವಾಸ ಪ್ರಸಾದರು ಸಿಡಿಸಿದ ಪಟಾಕಿ ದೊಡ್ಡದೆ. ಕಡೆಗೂ ಮೀನಾಮೇಷ ಎಣಿಸಿ ಪ್ರಸಾದ್ ಪಕ್ಷಕ್ಕೆ, ಶಾಸಕ ಸ್ಥಾನಕ್ಕೆ ರಾಜೀನಾಮೆ ಕೊಟ್ಟು ಈಗ ಭಾಜಪ, ಜೆಡಿಎಸ್ ಬಾಗಿಲು ಕಾಯುತ್ತಿದ್ದಾರೆ. ಈತ ಸಿದ್ದರಾಮಯ್ಯಗೆ ಸಾಕಷ್ಟು ನಿದ್ರೆಗೆಡಿಸಿದ್ದು ನಿಜ. ಇನ್ನು ಪರಮಾಪ್ತ ಜಾರ್ಜ್ ಬೆನ್ನುಹತ್ತಿರುವ ಬೇತಾಳ. ಸಾಕಷ್ಟು ವಿವಾದಗಳಿಗೆ ಆಹಾರವಾದ ಈತ ರಾಜೀನಾಮೆ ನೀಡಿದ್ದೂ ಆಯಿತು ಮತ್ತೆ ಸಂಪುಟ ಸೇರಿಯೂ ಆಯಿತು. ಈಗ ಈತ ವಿಮಾನ ನಿಲ್ದಾಣಕ್ಕೆ ಉಕ್ಕಿನ ಸೇತುವೆ ಕಟ್ಟಲು ಹೊರಟಿದ್ದಾನೆ ವಿರೋಧಗಳ ನಡುವೆ. ರಾಜಧಾನಿ ಬೆಂಗಳೂರಿನ ಜವಾಬ್ದಾರಿ ಹೊತ್ತಿರುವ ಜಾರ್ಜ್ ರಾಶಿ ಬೀಳುತ್ತಿರುವ ಕಸ ವಿಲೇವಾರಿ ಮಾಡಿದರೆ ಸಾಕು, ಅದು ಬಿಟ್ಟು ಸಾವಿರಾರು ಕೋಟಿ ಖರ್ಚು ಮಾಡಿ ಉಕ್ಕಿನ ಸೇತುವೆ ಬೇರೆ ಕೇಡು. ಈ ಎಲ್ಲದರ ಮಧ್ಯೆ ಈಗ ತನ್ವೀರ್ ಸೇಠ್ ಎಂಬ ವಿದ್ಯಾ ಸಚಿವ ಏನೋ ನೋಡ ಹೊರಟು, ಬೇರೇನೋ ನೋಡಿ ಸಿಕ್ಕಿಬಿದ್ದಿದ್ದಾನೆ. ಟಿಪ್ಪು ಜಯಂತಿ ಆಚರಣೆ ಸಂದರ್ಭದಲ್ಲಿ ಸಮಾರಂಭ ನಡೆಯುತ್ತಿದ್ದಾಗ ಈತ ಮೊಬೈಲ್‌ನಲ್ಲಿ ಅಶ್ಲೀಲ ಚಿತ್ರ ವೀಕ್ಷಿಸುತ್ತಿದ್ದನಂತೆ. ಇದೊಂದು ದೊಡ್ಡ ಹಗರಣ. ಮುಖ್ಯಮಂತ್ರಿ ಏನು ಮಾಡುತ್ತಾರೋ ನೋಡಬೇಕು. ಅಂತೂ ಅಹಿಂದ ನಾಯಕನ ಹಿಂದೆ ವಿವಾದಗಳ ಸುನಾಮಿಯೇ ಏಳುತ್ತಿದೆ.

* * *

ಅಂದಹಾಗೆ ಟಿಪ್ಪು ಜಯಂತಿ ಆಚರಣೆ ಹೋದ ವರ್ಷದಿಂದ ಸರಕಾರ ಆಚರಿಸಲು ಹೊರಟಿರುವುದು ರಾಜ್ಯದಲ್ಲಿ ದೊಡ್ಡ ಅವಾಂತರ ಸೃಷ್ಟಿಸಿದೆ. ಕಳೆದ ವರ್ಷವೇ ಭಾಜಪ ಬೇಕಾದಷ್ಟು ಗದ್ದಲ ಎಬ್ಬಿಸಿತ್ತು. ಕೊಡಗಿನಲ್ಲಿ ದೊಡ್ಡ ಹೋರಾಟವನ್ನೇ ಅದು ನಡೆಸಿತು. ಈ ವರ್ಷ ಆಚರಣೆಯೂ ಅಷ್ಟೇ ವಿವಾದಾತ್ಮಕವಾಗಿತ್ತು. ಕಾಟಾಚಾರಕ್ಕೆ, ರಾಜಕೀಯ ಮಾಡುವುದಕ್ಕೆ ಆಡಳಿತ ಹಾಗೂ ವಿರೋಧ ಪಕ್ಷಗಳೆರಡೂ ಹೊರಟಿರುವುದು ಮೂರ್ಖತನ. ದಿಢೀರ್ ಎಂದು ಕಾಂಗ್ರೆಸ್ಸಿಗೆ ಟಿಪ್ಪು ದೇಶಭಕ್ತ, ಭಾಜಪಗೆ ಮತೀಯವಾದಿ. ಇಬ್ಬರಿಗೂ ಇತಿಹಾಸದ ಜ್ಞಾನವಿಲ್ಲ. ರಾಜಕೀಯ ಲಾಭ ಪಡೆದುಕೊಳ್ಳಲು ಟಿಪ್ಪುವನ್ನು ಬಳಸಿಕೊಳ್ಳುತ್ತಿರುವುದು ಖಂಡನೀಯ. ಏನೂ ಮಾಡದೆ ಸುಮ್ಮನಿದ್ದರೆ ಸಾಕು ರಾಜಕಾರಣಿಗಳು, ಟಿಪ್ಪುವನ್ನು ಇತಿಹಾಸಕಾರರಿಗೆ ಬಿಟ್ಟುಬಿಡಿ.

* * *

ಉಡುಪಿಯ ಪೇಜಾವರ ಮಠದ ವಿಶ್ವೇಶ್ವರ ತೀರ್ಥ ಎಂಬ ಮಠಾಧಿಪತಿ ಸದಾ ಸುದ್ದಿಯಲ್ಲಿರುವ ವ್ಯಕ್ತಿ. ದಲಿತೋದ್ಧಾರಕ್ಕೆ ಹೊರಟು ದಲಿತ ಕೇರಿಗಳಲ್ಲಿ ಅಲೆದಾಡಿ, ಸ್ನಾನ ಮಾಡಿ ಪುಣ್ಯ ಕಟ್ಟಿಕೊಂಡ ಸ್ವಾಮಿ ಈತ. ಈತನ ದಲಿತ ಪ್ರೀತಿ ಚರ್ಮದ ಮೇಲಷ್ಟೇ, ಇಂಗ್ಲಿಷಿನಲ್ಲಿ 'ಸ್ಕಿನ್ ಡೀಪ್' ಅಂತಾರಲ್ಲ ಹಾಗೆ. ಅಡ್ಡಗೋಡೆಯ ಮೇಲೆ ದೀಪ ಇಟ್ಟಹಾಗೆ ಮಾತಾಡುವುದರಲ್ಲಿ ನಿಸ್ಸೀಮ. ಈಚೆಗೆ

(೬ನೇ ಪುಟಕ್ಕೆ)



ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ


ಸಂಪುಟ-೧೮ ಸಂಚಿಕೆ-೫ ಡಿಸೆಂಬರ್ ೨೦೧೬

■ **ಗೌರವ ಸಂಪಾದಕ**

ಜಿ. ರಾಮಕೃಷ್ಣ

■ **ಸಂಪಾದಕ-ಮುದ್ರಕ-ಪ್ರಕಾಶಕ**

ಸಿದ್ದನಗೌಡ ಪಾಟೀಲ

■ **ಸಹಸಂಪಾದಕರು**

ಇಂದಿರಾ ಕುಮಾರಿ

ಸಿ. ಆರ್. ಕೃಷ್ಣರಾವ್

ಎನ್. ಗಾಯತ್ರಿ

ಕೆ. ಎಲ್. ಗೋಪಾಲಕೃಷ್ಣಯ್ಯ

ರಾಮಲಿಂಗಪ್ಪ ಟಿ. ಬೇಗೂರು

ಎಸ್. ಸುರೇಂದ್ರ

■ **ವ್ಯವಸ್ಥಾಪಕ**

ಎ. ರಮೇಶ ಉಡುಪ

■ **ಮುದ್ರಣ**

**ಶ್ರೀ ವಿನಾಯಕ ಪ್ರಿಂಟರ್ಸ್**

೭೩೮/೧೧, ೬೦ನೇ ಅಡ್ಡರಸ್ತೆ

೫ನೇ ಬ್ಲಾಕ್, ರಾಜಾಜಿನಗರ

ಬೆಂಗಳೂರು - ೫೬೦ ೦೧೦

■ **ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**

೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ , ಅಂ. ಪೆ. ೫೧೯೫

ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧

ದೂರವಾಣಿ : ೨೨೯೨೪೭೩, ೨೨೨೦೩೫೮೨

**e-mail : navakarnataka@gmail.com**

**hosathu@gmail.com**

**hosathu.nkp@gmail.com**

**URL : www.navakarnataka.com**

**http : //navakarnataka.blogspot.in**

**http : //hosathumonthly.blogspot.in**




# ಸಂಪಾದಕೀಯ

## ಧನವಂತರು ಮಾಡಿದ ಸಾಲ ತೀರಿಸಲು ಸಾಲುಗಟ್ಟಿ ನಿಂತ ಬಡವರು

**ನ**ವೆಂಬರ್ ೮ರಂದು ಪ್ರಧಾನಿ ನರೇಂದ್ರ ಮೋದಿಯವರು ಸಾವಿರ, ಐದು ನೂರು ಮುಖಬೆಲೆಯ ನೋಟುಗಳ ಚಲಾವಣೆಯನ್ನು ರದ್ದುಪಡಿಸಿ ದೇಶವನ್ನುದ್ದೇಶಿಸಿ ಭಾಷಣ ಮಾಡಿದರು. ಇದನ್ನು 'ಮೋಭ'ಗಳು ಅಂದರೆ ಮೋದಿ ಭಕ್ತರು ಆರ್ಥಿಕ ಕ್ರಾಂತಿ ಎಂದೂ, ಮೋದಿ ಮಹಾತ್ಮನ ಪವಾಡವೆಂದೂ ಸಾರುತ್ತಿದ್ದಾರೆ. ಬಿ.ಜೆ.ಪಿ., ಕೇಂದ್ರ ಸರಕಾರ, ಹಣಕಾಸು ಸಚಿವರು, ರಿಸರ್ವ್ ಬ್ಯಾಂಕ್ ಗವರ್ನರ್ ಎಲ್ಲರನ್ನೂ ದೂರವಿಟ್ಟು ಇದು ಮೋದಿ ಮಿದುಳಿನ ಪ್ರತಿಫಲ ಎಂದು ಮೋಭ ಮಂಡಲಿ ಸಾರುತ್ತಿರುವುದರಿಂದ, ಸ್ವತಃ ಮೋದಿಯವರೂ ಇದು ತಾವು ಸಾರಿದ ಯುದ್ಧ ಎಂದೇ ಬಿಂಬಿಸುತ್ತಿರುವುದರಿಂದ ಈ ನೋಟು ಹಣಾಹಣಿಯ ರಾಜಕೀಯ, ಆರ್ಥಿಕ ವಿಶ್ಲೇಷಣೆಗೂ ಮೋದಿ ಅವರೇ ಕೇಂದ್ರವಾಗುತ್ತಾರೆ.

ಕಪ್ಪುಹಣ ನಿಯಂತ್ರಿಸಲು, ನಕಲಿ ನೋಟಿನ ಹಾವಳಿ ತಡೆಯಲು, ಭಯೋತ್ಪಾದಕರ ಆರ್ಥಿಕ ಬೆನ್ನೆಲುಬು ಮುರಿಯಲು ಈ ಸಾವಿರ, ಐದುನೂರರ ನೋಟುಗಳನ್ನು ನಿಷೇಧಿಸುವುದಾಗಿ ಪ್ರಧಾನಿ ಮೋದಿಯವರು ಹೇಳಿದ್ದಾರೆ. ಇದು ನಮ್ಮ ಪ್ರಧಾನಿಯವರ ಪ್ರಾಮಾಣಿಕ ಕಾಳಜಿ, ಕಳಕಳಿಯಾಗಿದ್ದರೆ ಖಂಡಿತ ಸ್ವಾಗತಿಸಬಹುದಿತ್ತು. ಆದರೆ ಈ ನೋಟುಗಳ ರದ್ದತಿಯ ನಂತರ ದೇಶಾದ್ಯಂತ ಮೂಡಿರುವ ಪ್ರಶ್ನೆ, ಶಂಕೆ, ಅನುಮಾನಗಳ ಹುತ್ತವೇ ಬೆಳೆಯುತ್ತಿದೆ. ಈ ಶಂಕೆ, ಅನುಮಾನ, ಪ್ರಶ್ನೆಗಳಿಗೆ ಮೋದಿ ಹಾಗೂ ಮೋಭ (ಮೋದಿ ಭಕ್ತ) ಮಂಡಲಿ ಉತ್ತರಿಸಲೇಬೇಕಾಗುತ್ತದೆ. ಆದರೆ ಅವರು ಪ್ರಶ್ನೆ ಕೇಳಿದವರನ್ನು ಕಪ್ಪುಹಣ ಹೊಂದಿದವರೆಂದೂ ಉಗ್ರಗಾಮಿಗಳ ಪರವಾಗಿರುವವರೆಂದು ಹಣೆಪಟ್ಟಿ ಕಟ್ಟುವ ಹೀನ ಕ್ರಿಯೆಗೆ ಇಳಿದಿದ್ದಾರೆ. ಇದು ಪ್ರಜಾಸತ್ತೆಯನ್ನೇ ದಮನಿಸುವ ಕ್ರಿಯೆ.

ಪ್ರಧಾನಿ ಮೋದಿಯವರೇ ಹೇಳುವ ಹಾಗೆ ಒಂದು ಸಾವಿರ ಮತ್ತು ಐದುನೂರು ನೋಟುಗಳ ಚಲಾವಣೆ ರದ್ದುಪಡಿಸಿದ ತಕ್ಷಣ ಕಪ್ಪುಹಣ ನಿಯಂತ್ರಣಕ್ಕೆ ಬರುತ್ತದೆಯೇ ? ದೇಶದಲ್ಲಿ ಇರುವ ಒಟ್ಟು ಕಪ್ಪುಹಣದ ಅಂದಾಜು ಎಷ್ಟು , ಭಾರತದಿಂದ ರವಾನೆಯಾಗಿ ವಿದೇಶಿ ಬ್ಯಾಂಕ್‌ಗಳಲ್ಲಿರುವ ಕಪ್ಪುಹಣ ಎಷ್ಟು ? ಕಪ್ಪುಹಣ ಕೇವಲ ನಗದಿನ ರೂಪದಲ್ಲಿದೆಯೇ ? - ಎಂಬ ಪ್ರಶ್ನೆಗಳು ಸಹಜವಾಗಿಯೇ ಏಳುತ್ತವೆ. ಪ್ರಸ್ತುತ ಸಾವಿರ, ಐದುನೂರರ ನೋಟುಗಳು ದೇಶದ ಎಲ್ಲ ಮುಖ ಬೆಲೆಯ ನೋಟು, ನಾಣ್ಯಗಳಲ್ಲಿ ಶೇ. ೮೬ರಷ್ಟಿವೆಯೆಂದು ಹೇಳಲಾಗಿದೆ. ಇಷ್ಟು ದೊಡ್ಡ ಮೊತ್ತವನ್ನು ಪ್ರತಿನಿಧಿಸುವ ನೋಟುಗಳ ರದ್ದತಿ ಮಾಡುವಾಗ ಸೂಕ್ತವಾದ ಪರ್ಯಾಯ ವ್ಯವಸ್ಥೆಯನ್ನು ರೂಪಿಸಬೇಕೆಂಬ ಸಾಮಾನ್ಯ ಸಂಗತಿ ಮೋದಿಯವರಿಗೆ ಹೊಳೆಯಲಿಲ್ಲವೇ ? ದೇಶದ ಸಾಮಾನ್ಯ ಜನ ಬ್ಯಾಂಕ್, ಅಂಚೆ ಕಚೇರಿಗಳ ಮುಂದೆ ನಿಂತು ಸಾಯುತ್ತಿರುವಾಗ ಮೋದಿ ಭಕ್ತರು ದೇಶಕ್ಕಾಗಿ ಇಷ್ಟೂ ಮಾಡಲು ಆಗುವುದಿಲ್ಲವೇ ಎಂದು ಕುಹಕದ ಮಾತುಗಳನ್ನಾಡುತ್ತಾರೆ. ಜನ ತಾಸುಗಟ್ಟಲೆ ಸರತಿ ಸಾಲಿನಲ್ಲಿಯೇ ನಿಂತು ಚುನಾವಣೆಗಳಲ್ಲಿ ಮತ ಚಲಾಯಿಸಿದ್ದಾರೆ. ಆದರೆ ಮತ ಪಡೆದು ಆಡಳಿತಕ್ಕೆ ಬಂದ ಮೋದಿ ಅವರಿಗೂ ಅವರ ಭಕ್ತಮಂಡಲಿಗೂ ಸರತಿ ಸಾಲಿನಲ್ಲಿ ನಿಂತವರ ಬಗ್ಗೆ ಗೌರವ ಬೇಡವೇ? ಈಗ ಜನ ಬ್ಯಾಂಕಿಗೆ ಕಟ್ಟುತ್ತಿರುವ ೫೦೦, ೧೦೦೦ ರೂಪಾಯಿಗಳಿಂದ ಡಿಸೆಂಬರ್ ಅಂತ್ಯದೊಳಗೆ ಒಟ್ಟು ೧೦ ಲಕ್ಷ ಕೋಟಿ ರೂಪಾಯಿ ಸಂಗ್ರಹವಾಗಬಹುದೆಂದು ಅಂದಾಜಿಸಲಾಗಿದೆ. ಜನರ ಬಳಿ ಇದ್ದ ಈ ೧೦ ಲಕ್ಷ ಕೋಟಿ ಸಂಗ್ರಹಿಸಲಿಕ್ಕಾಗಿಯೇ ಮೋದಿ ಈ ನಾಟಕ ನಡೆಸಿದ್ದಾರೆಂಬ ಆರೋಪ ಕೇಳಿಬಂದಿದೆ. ಬ್ಯಾಂಕ್‌ಗಳು ದೇಶದ ಅರ್ಥವ್ಯವಸ್ಥೆಯ ಜೀವನಾಡಿ. ವಿಶ್ವದ ಆರ್ಥಿಕ ಕುಸಿತದ ಸಂದರ್ಭದಲ್ಲಿ ವಿಶ್ವದ ದೊಡ್ಡಣ್ಣ ಎಂದು ಹೇಳಿಕೊಳ್ಳುವ ಅಮೇರಿಕ ದೇಶದ ಬ್ಯಾಂಕ್‌ಗಳು ದಿವಾಳಿಯಾದಾಗ ಅಲ್ಲಿನ ಸರಕಾರ ಸಾರ್ವಜನಿಕ ಹಣವನ್ನು ತೊಡಗಿಸಿ ಅಲ್ಲಿ ಬ್ಯಾಂಕ್‌ಗಳಿಗೆ ಜೀವದಾನ ಮಾಡಿದ ಸಂಗತಿ ಇನ್ನೂ ಹಸಿರಾಗಿದೆ. ನಮ್ಮ ದೇಶದಲ್ಲಿಯೂ ಈಗ ಬ್ಯಾಂಕ್‌ಗಳು ಸಂಕಷ್ಟದಲ್ಲಿವೆ. ಅದಕ್ಕಾಗಿಯೇ ಇಂದ್ರ ಧನುಷ್ ಯೋಜನೆ ಜಾರಿಯಾಗಿದೆ. ನಮ್ಮ ದೇಶದ ಬ್ಯಾಂಕ್‌ಗಳಲ್ಲಿ ಮರುಪಾವತಿಸಲಾಗದ ಸಾಲ ೨೦೧೬ರ ಮಾರ್ಚ್ ೩೧ಕ್ಕೆ ಆರು ಲಕ್ಷ ಕೋಟಿ ಎಂದು ಹೇಳಲಾಗಿದೆ. ಈ ಸಾಲ ಪಡೆದವರಲ್ಲಿ ೫೬೧೦ ಜನ ಕೋಟ್ಯಧಿಪತಿಗಳೂ, ಕಾರ್ಪೊರೇಟ್ ವಲಯದವರೂ ಸೇರಿದ್ದಾರೆ. ಅಂದರೆ ಅವರಿಗೆ ಸಾಲ ಹಿಂತಿರುಗಿಸುವ ಶಕ್ತಿ ಇದ್ದರೂ ಕೊಡುತ್ತಿಲ್ಲ. ಒಟ್ಟು ಆರು ಲಕ್ಷ ಕೋಟಿ ಸಾಲದಲ್ಲಿ ಶೇ. ೬೦ರಿಂದ ೭೦ರಷ್ಟು ಇವರ ಪಾಲಿದೆ. ಅವರೆಲ್ಲ ಈ ಸಾಲ ಮನ್ನಾ ಮಾಡಲು ಬೇಡಿಕೆ ಇಟ್ಟಿದ್ದಾರೆ. ಈಗಾಗಲೇ ಮೋದಿ ನೋಟ್ ಬ್ಯಾನ್ ಮಾಡಿದ ನಂತರವೂ ಭಾರತೀಯ ಸ್ಟೇಟ್ ಬ್ಯಾಂಕ್ ಇಂಥ ೬೩ ಧನವಂತರಿಗೆ ೭೦೧೬ ಕೋಟಿ ರೂಪಾಯಿ ಸಾಲ ಮನ್ನಾ ಮಾಡಿದೆ. ಅದರಲ್ಲಿ ವಿಜಯ ಮಲ್ಯ ಅವರ ೧೨೦೦ ಕೋಟಿ ಸಾಲ ಮನ್ನಾ ಸಹ ಸೇರಿದೆ. ಹೀಗೆ ೬ ಲಕ್ಷ ಕೋಟಿ ಸಾಲ ಮಾಡಿದ ಬಡವರಲ್ಲಿ ಅಂಬಾನಿ, ಅದಾನಿಯಂಥ ದೇಶದ ಧನವಂತರೂ ಸೇರಿದ್ದಾರೆ. ಅವರ ಸಾಲ ಮನ್ನಾ ಮಾಡಿದರೆ ಬ್ಯಾಂಕ್‌ಗಳು ಸಂಪೂರ್ಣ ದಿವಾಳಿಯೇಳುತ್ತವೆ. ಅವರಿಗೆ ಸಾಲ ಕೊಟ್ಟಿರುವುದು ಬ್ಯಾಂಕ್‌ಗಳಲ್ಲಿ ಸಾರ್ವಜನಿಕರು, ಜನಸಾಮಾನ್ಯರು ಇಟ್ಟ ಹಣದಿಂದ, ಬ್ಯಾಂಕ್ ನೌಕರರು ಪ್ರಾಮಾಣಿಕವಾಗಿ ಕೆಲಸ ಮಾಡಿ ರಕ್ಷಿಸಿದ ಹಣದಿಂದ ಎಂಬುದು ಮುಖ್ಯ. ಆ ಸಾಲವನ್ನು ವಸೂಲಿ ಮಾಡುವುದು, ವಸೂಲಾಗದಿದ್ದರೆ ಅವರ ಆಸ್ತಿಯನ್ನು ಮುಟ್ಟುಗೋಲು ಹಾಕಿಕೊಳ್ಳುವುದು

ಸರಕಾರದ ಜವಾಬ್ದಾರಿ. ಆ ಕೆಲಸವನ್ನು ಹಿಂದಿನ ಸರಕಾರವೂ ಮಾಡಲಿಲ್ಲ. ಇಂದಿನ ಸರಕಾರವೂ ಮಾಡುತ್ತಿಲ್ಲ. ಇಂದಿನ ಮೋದಿ ಸರಕಾರ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿದೆ. ದೇಶದ ಕಾರ್ಪೊರೇಟ್ ಧಣಿಗಳಿಂದ ಸಾಲ ವಸೂಲಿ ಮಾಡಿ ಬ್ಯಾಂಕ್‌ಗಳಿಗೆ ಕೊಡಿಸದೆ ಮತ್ತೆ ಜನರಿಂದಲೇ ವಸೂಲಿ ಮಾಡಿ ಬ್ಯಾಂಕ್ ತುಂಬಿಸುವ ಮಹತ್ಕಾರ್ಯ ಮಾಡುತ್ತಿದೆ. ಅದರ ಭಾಗವಾಗಿಯೇ ಈ ನೋಟ್ ರದ್ದತಿ ಮೂಲಕ ಡಿಸೆಂಬರ್ ಅಂತ್ಯದೊಳಗೆ ೧೦ ಲಕ್ಷ ಕೋಟಿ ರೂ.ಗಳನ್ನು ಬ್ಯಾಂಕ್‌ಗಳಲ್ಲಿ ಸಂಗ್ರಹಿಸುವ ಯೋಜನೆ ಮಾಡಿದೆ. ಅಂದರೆ ದೇಶದ ಧನವಂತರು ಮಾಡಿದ ಸಾಲ ತೀರಿಸಲು ಬಡವರು ಸಾಲುಗಟ್ಟಿ ನಿಲ್ಲುವಂತಾಗಿದೆ. ಹತ್ತಿರವಿರುವ ಐದೋ, ಹತ್ತೋ ಸಾವಿರ ರೂಪಾಯಿಗಳನ್ನು ೧೦೦೦, ೫೦೦ರ ನೋಟಿನ ರೂಪದಲ್ಲಿಟ್ಟುಕೊಂಡವರು. ಕೆಲಸ ಬಿಟ್ಟು ಉರಿಬಿಸಿಲಿನಲ್ಲಿ ಬ್ಯಾಂಕ್‌ಗಳ ಮುಂದೆ ನಿಂತು ತಮ್ಮ ಹಣವನ್ನು ಬ್ಯಾಂಕ್‌ಗಳಿಗೆ ಕಟ್ಟುತ್ತಿದ್ದಾರೆ. ಹಿಂದೆ ತಾವು ಬ್ಯಾಂಕ್‌ನಲ್ಲಿಟ್ಟ ಹಣವನ್ನು ಈ ದೇಶದ ಕೋಟ್ಯಧಿಪತಿಗಳೆಂಬ ಬಡವರು ಸಾಲ ಪಡೆದು ಖಾಲಿ ಮಾಡಿದ್ದಾರೆ, ಅವರ ಸಾಲವನ್ನು ನಾವು ಮರುಪಾವತಿಸುತ್ತಿದ್ದೇವೆಂಬ ಸತ್ಯ ಅಥವಾ ಅವರಿಗೆ ಮತ್ತೆ ಹೊಸ ಸಾಲ ಬೇಕಾದರೆ ತಮ್ಮ ಈ ದುಡ್ಡು ಅವರಿಗೇ ಹೋಗುತ್ತದೆ ಎಂಬ ವಾಸ್ತವ, ಆಳುವ ವರ್ಗದ ಅರ್ಥಶಾಸ್ತ್ರ ಅವರಿಗೆ ಗೊತ್ತಿಲ್ಲ. ದೇಶೋದ್ಧಾರದ ಪೊಳ್ಳು ಭರವಸೆ, ಧನವಂತರ ಕಪ್ಪುಹಣ ಬೀದಿಗೆ ಎಂಬ ಸುಳ್ಳು ಘೋಷಣೆಗಳನ್ನು ಸಾಲಲ್ಲಿ ನಿಂತು ಹಣ ಕಟ್ಟುವ ಈ ಸಾಮಾನ್ಯ ಜನರ ಕಿವಿಯಲ್ಲಿ ಊದಲಾಗುತ್ತಿದೆ.

ದೇಶದ ಧನವಂತರು ಮಾಡಿದ ಸಾಲವನ್ನು ಬಡವರು ತೀರಿಸಿ ಬ್ಯಾಂಕ್‌ಗಳನ್ನು ಕಾಪಾಡುವ ಕ್ರಿಯೆಗೆ ಮೋದಿ ಮತ್ತವರ ಭಕ್ತರು 'ದೇಶಭಕ್ತಿ' ಎನ್ನುತ್ತಾರೆ. ಹೋಗಲಿ ದೇಶದಲ್ಲಿ ಸಾವಿರ, ಐದುನೂರು ನೋಟುಗಳ ಮುಖಬೆಲೆಯ ಮೌಲ್ಯ ೧೬ ಲಕ್ಷ ಕೋಟಿ ಎನ್ನಲಾಗಿದೆ. ಮೋದಿಯವರ ನೋಟ್ ಬ್ಯಾನ್ ನೀತಿಯಿಂದ ಡಿಸೆಂಬರ್ ೩೧ರೊಳಗೆ ೧೦ ಲಕ್ಷ ಕೋಟಿ ಬ್ಯಾಂಕ್‌ಗಳಿಗೆ ಬರುತ್ತದೆ ಎಂದು ಹೇಳಲಾಗಿದೆ. ಇನ್ನುಳಿದ ೬ ಲಕ್ಷ ಕೋಟಿಯನ್ನು ಮೋದೀಜಿ ಹೇಗೆ ಭರಿಸುತ್ತಾರೆ ? ಆಗಲಾದರೂ ಬ್ಯಾಂಕ್‌ಗಳಿಂದ ಪಡೆದ ೬ ಲಕ್ಷ ಕೋಟಿ ಸಾಲವನ್ನು ಕೋಟ್ಯಧಿಪತಿಗಳಿಂದ ವಾಪಸ್ ಪಡೆಯುತ್ತಾರೋ ? ದೇಶದ ಜನಸಾಮಾನ್ಯರಿಗೆ, ಉದ್ಯೋಗಿಗಳಿಗೆ, ರೈತರಿಗೆ, ಕಾರ್ಮಿಕರಿಗೆ, ಮಹಿಳೆಯರಿಗೆ, ಸಣ್ಣ ಪುಟ್ಟ ವ್ಯಾಪಾರಿಗಳಿಗೆ, ಬ್ಯಾಂಕ್‌ಗಳ ಮುಂದೆ ನಿಂತು ಬೆವರು ಹರಿಸಿ ತಮ್ಮ ದೇಶಭಕ್ತಿ ಸಾಬೀತು ಮಾಡಿದ ಎಲ್ಲ ಜನರಿಗೆ ಇರುವ 'ದೇಶಭಕ್ತಿ' ಅಂಬಾನಿ, ಅದಾನಿ, ಮಲ್ಯರಂಥ ಕೋಟ್ಯಧಿಪತಿ ಬಡವರಿಗೂ ಇರಬೇಕಲ್ಲ. ದೇಶದ ಜನತೆ ಬ್ಯಾಂಕ್‌ನಲ್ಲಿಟ್ಟ ಹಣವನ್ನು ಸಾಲ ಪಡೆದು ಮರುಪಾವತಿಸಬೇಕೆಂಬ ಕನಿಷ್ಠ ತಿಳುವಳಿಕೆಯಾದರೂ ಇರಬೇಕಲ್ಲ. ಅವರು ಸಾಲ ತೀರಿಸುವ ಶಕ್ತಿ ಇದ್ದರೂ ತೀರಿಸುತ್ತಿಲ್ಲ. ಕಾರಣ ಈ ದೇಶದ ಪ್ರಧಾನಿ ಅವರ ಸೇವಕನಾಗಿದ್ದಾನೆ. ಅಂಥ ವಂಚಕರನ್ನು ನಿಯಂತ್ರಿಸುವ ಶಕ್ತಿ ನಮ್ಮ ಜನನಾಯಕ ಮೋದಿಯವರಿಗಿಲ್ಲ. ಕಾರಣ ಅದು ಅವರ ನೀತಿಯೂ ಅಲ್ಲ. ಈ ಮಾತು ಮೋದಿ ಅವರಿಗೆ ಮಾತ್ರವಲ್ಲ, ಹಿಂದಿನ ಪ್ರಧಾನಿ ಮನಮೋಹನ ಸಿಂಗ್ ಅವರಿಗೂ ಅನ್ವಯಿಸುತ್ತದೆ. ಆದರೆ ಕಾಂಗ್ರೆಸ್ ನಾಯಕತ್ವದ ಯು.ಪಿ.ಎ. ಸರಕಾರ ಜನದ್ರೋಹದ ಕೆಲಸಕ್ಕೆ ಮೋದಿ ತರಹ ದೇಶಪ್ರೇಮದ ಮುಖವಾಡ ತೊಡಿಸಿರಲಿಲ್ಲ. ಇಷ್ಟಕ್ಕೂ ಕಪ್ಪುಸಂಪತ್ತು ಕಪ್ಪುಹಣದ ರೂಪದಲ್ಲಿ ಇರುವುದು ಶೇ. ೬ರಷ್ಟು ಮಾತ್ರ. ಉಳಿದದ್ದು ಬಂಗಾರ, ಭೂಮಿ; ಸೈಟು, ಷೇರು, ವಿದೇಶಿ ಕರೆನ್ಸಿ ವಿವಿಧ ವ್ಯವಹಾರದಲ್ಲಿದೆ. ಮೋದಿ ಅದಾವುದರ ಕುರಿತೂ ಮಾತನಾಡುವುದಿಲ್ಲ. ಇದೆಲ್ಲದರಾಚೆ ಮೋದಿ ಮಾಡಿದ ನೋಟು ರದ್ದತಿ ಆಡಳಿತಾತ್ಮಕ ದೃಷ್ಟಿಯಿಂದ ಅಪರಾಧವೇನಲ್ಲ. ಆದರೆ ಉದ್ದೇಶ ಸಾತ್ವಿಕವಾಗಿಲ್ಲ, ಮೋದಿಯವರ ನೋಟು ರದ್ದತಿಯ ಹಿಂದೆ ರಾಜಕೀಯ ಲೆಕ್ಕಾಚಾರಗಳೂ ಇವೆ. ಅದರ ಪುರಾವೆಗಳೂ ಹೊರಬರುತ್ತಿವೆ. ಮೋದಿ ಭ್ರಷ್ಟ ಎಂದು ಯಾರೂ ಹೇಳಿಲ್ಲ. ಆದರೆ ವ್ಯವಸ್ಥೆಯನ್ನೇ ಭ್ರಷ್ಟಗೊಳಿಸಲು, ಧನವಂತರ ಹಿತಾಸಕ್ತಿಗೆ ದೇಶವನ್ನು ಬಲಿಕೊಡಲು ಮೋದಿ ಒಂದು ಸ್ವಯಂ ಇಚ್ಛಿತ ಟೂಲ್ (ಸಾಧನ) ಆಗಿದ್ದಾನೆ ಎಂದು ಹೇಳಿದರೆ ಮೋದಿ ಭಕ್ತರು ಕೋಪಗೊಂಡು ಹೀಗೆ ಹೇಳಿದವರನ್ನು ದೇಶದ್ರೋಹಿಗಳೆಂದೂ, ಕಪ್ಪುಹಣದ ಪರವಾಗಿರುವವರೆಂದು ಬೀದಿಯಲ್ಲಿ, ಮಾಧ್ಯಮಗಳಲ್ಲಿ, ಸಾಮಾಜಿಕ ಜಾಲತಾಣಗಳಲ್ಲಿ ಕೂಗಾಡುತ್ತಾರೆ. ಮೋದಿ ಹೇಳುತ್ತಾರೆ ಐವತ್ತು ದಿನ ಸಮಯ ಕೊಡಿ ಎಂದು, ಅವಸರ ಬೇಡ ಇನ್ನೂ ಎರಡೂವರೆ ವರ್ಷವಿದೆ; ಶ್ರಮಪಟ್ಟು ದುಡಿದವರನ್ನು ಬ್ಯಾಂಕ್‌ಗಳ ಮುಂದೆ ನಿಲ್ಲಿಸಿದ ಹಾಗೆ ಅವರ ಪಕ್ಷದಲ್ಲಿರುವ ಭ್ರಷ್ಟರನ್ನೂ ಒಳಗೊಂಡಂತೆ ದೇಶದ ಎಲ್ಲ ಕಾಳ ಧನಿಕರನ್ನು ಜೈಲಿನ ಮುಂದೆ ಸಾಲು ನಿಲ್ಲಿಸಿ ದೇಶ ಭಕ್ತಿಯನ್ನು ಪ್ರದರ್ಶಿಸಲಿ.

ನಿಜಗುಣಗೌಡ ಪಾಟೀಲ

## ಮಾಧ್ಯಮಗಳು, ಸರಕಾರ, ಜನಸಾಮಾನ್ಯರು

**ಈ**ಚೆಗೆ ಮೋದಿ ಸರಕಾರದ ಕೆಂಗಣ್ಣು 'ಎನ್‌ಡಿ ಟಿ.ವಿ.' ಮೇಲೆ. ಪಠಾನ್ ಕೋಟ್ ಪ್ರಕರಣದ ವಿಚಾರದಲ್ಲಿ ಚಾನೆಲ್ ನೀಡಿದ್ದ ವಿವರಣೆಗೆ ಆಕ್ಷೇಪ. ಒಂದು ದಿನ ವಾಹಿನಿ ಸ್ಥಗಿತಗೊಳಿಸಲು ಸರಕಾರದ ಆದೇಶ. ಸದ್ಯಕ್ಕೆ ನ್ಯಾಯಾಲಯದ ತಡೆ. ಸರಕಾರದ ಈ ಕ್ರಮ ರಾಷ್ಟ್ರೀಯ ರಕ್ಷಣೆಯ ಹೆಸರಿನಲ್ಲಿ ನಡೆದದ್ದು. ಇದು ಮೋದಿ ನೇತೃತ್ವದ ಸರಕಾರ ಯಾವ ದಿಶೆಯಲ್ಲಿ ಹೊರಟಿದೆ ಎಂಬುದರ ಎಚ್ಚರಿಕೆ ಗಂಟೆ. ಮಾಧ್ಯಮವನ್ನು ನಿಯಂತ್ರಣಕ್ಕೊಳಪಡಿಸಲು ಪರೋಕ್ಷ ಸೂಚನೆ ಸರ್ವಾಧಿಕಾರದತ್ತ ಸರಿಯುತ್ತಿರುವುದಕ್ಕೆ ಸಾಕ್ಷಿ. ಇವೆಲ್ಲ ನಡೆಯುತ್ತಿರುವುದು ರಾಷ್ಟ್ರದ ಹಿತಾಸಕ್ತಿ ಕಾಪಾಡುವ ಹೆಸರಿನಲ್ಲಿ. ರಾಷ್ಟ್ರೀಯತೆ, ರಾಷ್ಟ್ರಪ್ರೇಮ, ರಾಷ್ಟ್ರಾಭಿಮಾನ, ರಾಷ್ಟ್ರರಕ್ಷಣೆ ಇವೆಲ್ಲ ಮೋದಿ ಸರಕಾರ ಬಂದಮೇಲೆ ಹಿಂದುತ್ವವಾದಿಗಳ ಅಬ್ಬರ. ಮಾತೆತ್ತಿದರೆ, ಸರಕಾರದ ಜನವಿರೋಧಿ ನೀತಿಗಳನ್ನು ಪ್ರತಿಭಟಿಸಿದರೆ




ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ





■ *ಚಂದಾ ವಿವರಗಳು*

| | |
|---|---|
| **ಬಿಡಿ ಸಂಚಿಕೆ** | ₹ ೨೦/- |
| **ವಾರ್ಷಿಕ ಚಂದಾ** | ₹ ೨೫೦/- |
| **ಮೂರು ವರ್ಷಕ್ಕೆ** | ₹ ೫೦೦/- |

■ *ನವಕರ್ನಾಟಕ ಶಾಖೆಗಳು*

೫ನೇ ಮುಖ್ಯ ರಸ್ತೆ , ಗಾಂಧಿನಗರ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೫೧೩೮೨

ಕೆಂಪೇಗೌಡ ರಸ್ತೆ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೦೩೧೦೬

ಕೆ. ಎಸ್. ಆರ್. ರಸ್ತೆ
ಮಂಗಳೂರು – ೫೭೫ ೦೦೧
✆ : ೦೮೨೪-೨೪೪೧೦೦೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು – ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು – ೫೭೦ ೦೨೪
✆ : ೦೮೨೧-೨೪೨೪೯೪

ಸ್ಟೇಷನ್ ರಸ್ತೆ
ಕಲಬುರಗಿ – ೫೮೫ ೧೦೨
✆ : ೦೮೪೭೨-೨೨೪೩೦೨

ಸರಕಾರ ರಾಷ್ಟ್ರದ್ರೋಹದ ಆಪಾದನೆ ಹೊರಿಸಿ ಬಂಧನಕ್ಕೊಳಪಡಿಸುತ್ತದೆ. ಜವಹರಲಾಲ್ ನೆಹರು ವಿಶ್ವವಿದ್ಯಾನಿಲಯದ ವಿದ್ಯಾರ್ಥಿಗಳ ಮೇಲೆ ಕೈಗೊಂಡ ಕ್ರಮ ಅದಕ್ಕೆ ಉದಾಹರಣೆ. ಬ್ರಿಟಿಷ್ ವಸಾಹತುಶಾಹಿಗಳ ಕಾಲದಲ್ಲಿದ್ದ ಈ ದಮನಕಾರಿ ಕಾಯಿದೆಯನ್ನು ಭಾಜಪ ಸರಕಾರ ಈಗ ಉಪಯೋಗಿಸಿಕೊಳ್ಳುತ್ತಿದೆ. ಅರ್ಥಾತ್ ಇದು ಅತಿಯಾದ ರಾಷ್ಟ್ರೀಯತೆಯ ಪ್ರದರ್ಶನ ಮತ್ತು ಫಾಸಿಸಂನತ್ತ ತೋರುತ್ತಿರುವ ಒಲವು ಎಂದು ಹೇಳಬೇಕು.

ಹಾಗಂತ ಟಿ.ಆರ್.ಪಿ. ಮೇಲೇ ಅವಲಂಬಿತವಾಗಿರುವ ಮಾಧ್ಯಮಗಳು ಜವಾಬ್ದಾರಿಯಿಂದ ನಡೆದುಕೊಳ್ಳುತ್ತಿವೆ ಎಂದೇನಲ್ಲ. ಭಾವಾತಿರೇಕ, ಉದ್ರೇಕಕಾರಿತ್ವ, ಉತ್ಪ್ರೇಕ್ಷೆ, ಪ್ರಚೋದನೆಗಳಿಗೆ ಮಾರುಹೋಗಿರುವ ಇಲೆಕ್ಟ್ರಾನಿಕ್ ಮಾಧ್ಯಮ ಅದರಿಂದ ಹಿಂದೆ ಸರಿಯುವಂತೆ ತೋರುತ್ತಿಲ್ಲ. ಸುದ್ದಿ ಮಾಧ್ಯಮಗಳಿಗೆ ಅವೇ ಆಧಾರವಾಗಿಬಿಟ್ಟಿದೆ. ಸುದ್ದಿಯೊಂದು ನಂಬಿಕಾರ್ಹವೇ ಅಲ್ಲವೇ ಎಂದು ಪರಿಶೀಲಿಸದೆಯೇ ಪ್ರಸಾರ ಮಾಡುವುದು ಗೀಳಾಗಿಬಿಟ್ಟಿದೆ. ಜನಸಾಮಾನ್ಯರು ನಡೆಸುವ ಹೋರಾಟಗಳಿಗೆ ಪ್ರಾಶಸ್ತ್ಯ ನೀಡುವುದಕ್ಕೆ ಬದಲಾಗಿ ಕೊಲೆ, ಸುಲಿಗೆ, ಅತ್ಯಾಚಾರ ಮುಂತಾದ ಅಪರಾಧ ಪ್ರಕರಣಗಳಿಗೇ ಆದ್ಯತೆ. ಅಂಥ ಪ್ರಕರಣಗಳ ಬಗ್ಗೆ ಅರ್ಥವಿಲ್ಲದ ಚರ್ಚೆ, ವಿಜೃಂಭಣೆ ತಿಂಗಳುಗಟ್ಟಳೆ. ಅಪರಾಧ ಪ್ರಕರಣಗಳ ಬಗ್ಗೆ ಮಾಧ್ಯಮಗಳು ತಾವೇ ಒಂದು ತೀರ್ಮಾನಕ್ಕೆ ಬಂದು ಅದಕ್ಕೆ ಬದ್ಧವಾಗಿರುವುದು ಇನ್ನೊಂದು ವರಿಸೆ. ಆರೋಪಿಯೂ ಅವರೇ, ತೀರ್ಪುಗಾರರೂ, ಶಿಕ್ಷೆ ವಿಧಿಸುವವರೂ ಅವರೇ, 'ಪರಿಣಾಮದ ಅರಿವೇ ಇಲ್ಲದೆ ಎಲ್ಲಾ ಅಪೂರ್ಣ, ಅರ್ಧಸತ್ಯಗಳಿಗೆ ಇವರು ನಿಜದ ಪೋಷಾಕು ತೊಡಿಸುತ್ತಾರೆ. ತಾವು ಸಕಲ ವಿಷಯಗಳ ತಜ್ಞರೂ, ಹೋರಾಟಗಾರರೂ, ಸಮಾಜ, ಸರಕಾರ, ಸಂಘಟನೆಗಳಿಗೆಲ್ಲ ಬೋಧಿಸುವ ಜ್ಞಾನಿಗಳಾಗಿಬಿಡುತ್ತಾರೆ' ಎಂದು ಅಂಕಣಕಾರರೊಬ್ಬರು ಹೇಳಿರುವುದು ಅಕ್ಷರಶಃ ನಿಜ.

ಇದಕ್ಕೆ ಇತ್ತೀಚಿನ ಉದಾಹರಣೆ ಎಂದರೆ ಕಾವೇರಿ ವಿವಾದದ ವಿಚಾರದಲ್ಲಿ ಮಾಧ್ಯಮಗಳು ನಡೆದುಕೊಂಡ ರೀತಿ. ಇದಕ್ಕೆ ಮುನ್ನ ಐ.ಎ.ಎಸ್. ಅಧಿಕಾರಿ ರವಿ ಆತ್ಮಹತ್ಯೆ, ಪೊಲೀಸು ಅಧಿಕಾರಿಗಳ ಆತ್ಮಹತ್ಯೆ ಪ್ರಕರಣ ಕೂಡ ಪೂರ್ವನಿರ್ಧಾರಿತ. ಇದು ಕನ್ನಡ ಮಾಧ್ಯಮಗಳ ಉದಾಹರಣೆಯಾದರೆ ಇಂಗ್ಲಿಷ್ ಮಾಧ್ಯಮಗಳೂ ಕೂಡ ಬೇರೆಯದೇನಲ್ಲ. ಅತ್ಯಾಚಾರ ಪ್ರಕರಣಗಳು, ಅರುಷಿ ಕೊಲೆ, ಇಂದ್ರಾಣಿ ಮುಖರ್ಜಿ ಕೊಲೆ ಮುಂತಾದವು ನಿದರ್ಶನ. 'ಯಾರಿಗೂ ಸತ್ಯವನ್ನು ಪರಿಶೋಧಿಸುವ ವ್ಯವಧಾನವಿಲ್ಲ. ಪರಾಂಬರಿಸಿದ ಸತ್ಯಗಳನ್ನು ಆಧರಿಸಿ ವಿಪರೀತ ಹೊಗಳುವುದು, ತೆಗಳುವುದು ಇಲ್ಲಿನ ಬಂಡವಾಳ' ಎಂದು ಒಬ್ಬ ವಿಮರ್ಶಕರು ಹೇಳಿರುವುದು ನಿಜ. ಸುದ್ದಿ ಆಧಾರಿತ ಚರ್ಚೆಗಳನ್ನು ರಾಜಕೀಯ ಪ್ರಕರಣಗಳ ಕುರಿತ ಚರ್ಚೆಗಳ ವಿಚಾರವನ್ನು ಕುರಿತು ಏನೂ ಹೇಳದಿರುವುದೇ ಒಳ್ಳೆಯದು. ಏಕೆಂದರೆ ವಿಷಯಕ್ಕಿಂತ ಅಬ್ಬರಕ್ಕೆ ಇಲ್ಲಿ ಪ್ರಾಶಸ್ತ್ಯ. ಎಲ್ಲ ಚರ್ಚೆಗಳನ್ನು ತನ್ನ ಮೂಗಿನ ನೇರಕ್ಕೆ ಅಳವಡಿಸುವುದು ಮಾಧ್ಯಮಗಳಿಗೆ ರೂಢಿಯಾಗಿಬಿಟ್ಟಿದೆ. ಇದರ ಮೇಲೆ ಈಗ ಸಾಮಾಜಿಕ ಜಾಲತಾಣ ಎಂದು ಕರೆಯುತ್ತಿರುವ ಫೇಸ್‌ಬುಕ್, ಟ್ವಿಟರ್ ಮುಂತಾದವೂ ಬೇರೆ ಇವೆ. ಇವು ಕಂಪ್ಯೂಟರುಗಳು. ಸ್ಮಾರ್ಟ್ ಫೋನ್‌ಗಳಿಗೆ ಸೀಮಿತ. ಈಗ ಅದು ಅತ್ಯಂತ ಪ್ರಭಾವಶಾಲಿಯಾಗಿ ಬೆಳೆದಿದೆ. ಇವಕ್ಕೆ ಯಾವ ಬಗೆಯ ನಿರ್ಬಂಧವೂ ಇಲ್ಲ, ಖಾಸಗೀ ವ್ಯವಹಾರವಾದ್ದರಿಂದ. ಎಲ್ಲ ರೀತಿಯ ವದಂತಿಗಳೂ, ಘಟನೆಗಳೂ ಇಲ್ಲಿ ಪ್ರಸ್ತಾಪವಾಗುತ್ತವೆ.

ಮಾಧ್ಯಮಗಳ ವಿಚಾರದಲ್ಲಿ ಸರಕಾರ ಪ್ರವೇಶಿಸುವುದಕ್ಕಿಂತ ಸ್ವಯಂ ನಿಯಂತ್ರಣ ವ್ಯವಸ್ಥೆಯೊಂದನ್ನು ರೂಪಿಸಿಕೊಳ್ಳುವುದು ಮೇಲು. ಇದು ನಮ್ಮ ದೇಶದ ಸಮಸ್ಯೆಯಷ್ಟೇ ಅಲ್ಲ, ಜಗತ್ತಿನ ಎಲ್ಲ ದೇಶಗಳಲ್ಲೂ ಇಲೆಕ್ಟ್ರಾನಿಕ್ ಮಾಧ್ಯಮಗಳ ಪ್ರಸಾರ ಹೆಚ್ಚುಕಡಿಮೆ ಒಂದೇ ರೀತಿಯದ್ದಾಗಿದೆ. ಸರಕಾರ ಮಧ್ಯೆ ಪ್ರವೇಶಿಸಲು ಅವಕಾಶವಾದರೆ ಅದು ಒಂದು ಬಗೆಯ ಸೆನ್ಸಾರ್ ಆಗಿಬಿಡುತ್ತದೆ. ಇಲ್ಲಿ ಮಾಧ್ಯಮಗಳು ಪ್ರಸಾರಮಾಡುವ ಮೂಢನಂಬಿಕೆ, ಅಪರಾಧದ ವೈಭವೀಕರಣ ಮುಂತಾದ ವಿವಿಧ ಕಾರ್ಯಕ್ರಮಗಳ ಪ್ರಸ್ತಾಪ ಬರುವುದಿಲ್ಲ. ಅದು ಬೇರೆಯದೇ ವಿಷಯವಾಗುತ್ತದೆ. ಇಲೆಕ್ಟ್ರಾನಿಕ್ ಮಾಧ್ಯಮಗಳ ಸುದ್ದಿ ಪ್ರಸಾರದ ನಂಬಿಕಾರ್ಹತೆಯನ್ನು ವರ್ಧಿಸುವುದು ಅವುಗಳ ಕೈಯ್ಯಲ್ಲೇ ಇದೆ. ಅಲ್ಲಿಯವರೆಗೆ ಅದರ ಸತ್ಯಾಸತ್ಯತೆಯನ್ನು ಕುರಿತು ಜನಸಾಮಾನ್ಯರು ಆಲೋಚಿಸಬೇಕಾಗುತ್ತದೆ.

---

*(ಈ ತಿಂಗಳು. ೩ನೇ ಪುಟದಿಂದ)*

ಜನಪ್ರಿಯ ಪತ್ರಿಕೆಯೊಂದಕ್ಕೆ ನೀಡಿದ ಸಂದರ್ಶನದಲ್ಲಿ ಸಾರಾಸಗಟಾಗಿ ಎಲ್ಲ ಬುದ್ಧಿಜೀವಿಗಳನ್ನು 'ಹಿಂದೂ ಧರ್ಮ ವಿರೋಧಿಗಳು' ಎಂಬ ಹಣೆ ಪಟ್ಟಿ ಹಚ್ಚಿದರು. ಅದೇನೂ ಹೊಸದೇನಲ್ಲ ಬಿಡಿ. ಹಿಂದುತ್ವದ ಪ್ರತಿಪಾದಕನಿಂದ ಬೇರೇನನ್ನು ನಿರೀಕ್ಷಿಸಲು ಸಾಧ್ಯ! ವಿಶ್ವ ಹಿಂದು ಪರಿಷತ್ತಿನ ನಾಯಕರಲ್ಲಿ ಒಬ್ಬರಾದ ವಿಶ್ವೇಶ್ವರ ತೀರ್ಥಸ್ವಾಮಿ ಈಚೆಗೆ 'ಕನಕ ನಡೆ' ಪಡೆ ಹಿಂಬಿಟ್ಟುಕೊಳ್ಳಲು ಹೋಗಿ ತಮ್ಮ ನಿಜವಾದ ಬಣ್ಣವನ್ನು ಹೊರಗೆಡಹಿದ್ದಾರೆ. 'ಹಾವೂ ಸಾಯಬಾರದು ಕೋಲೂ ಮುರಿಯಬಾರದು' ಎಂಬ ನುಡಿಕಟ್ಟಿನಂತೆ ನಡೆದುಕೊಂಡಿದ್ದಾರೆ. ವ್ಯವಹಾರ ಚತುರನಾದ ಈತ ಈಗ ಪರ್ಯಾಯ ಪೀಠಾಧಿಪತಿ, ಅದರಲ್ಲೂ ದಾಖಲೆ ಮಾಡಿರುವ ವ್ಯಕ್ತಿ.

ಕೆಲ ದಿನಗಳ ಹಿಂದೆ ದಲಿತರು 'ಉಡುಪಿ ಚಲೋ' ಎಂಬ ಕಾರ್ಯಕ್ರಮವೊಂದನ್ನು ಹಮ್ಮಿಕೊಂಡಿದ್ದರು. ಇದರಲ್ಲಿ ಪ್ರಗತಿಪರರೂ ಭಾಗವಹಿಸಿದ್ದರು. ಉಡುಪಿ ನಮ್ಮ ರಾಜ್ಯದಲ್ಲಿ ಹಿಂದುತ್ವವಾದಿಗಳ ದೊಡ್ಡ ಪ್ರಯೋಗ ಶಾಲೆ. ಅಷ್ಟಮಠಗಳಿರುವ ಈ ಊರಿನಲ್ಲಿ 'ಕೃಷ್ಣ ಮಠವೂ' ಇದೆ. ಮುಜರಾಯಿ ಇಲಾಖೆಯ ಕಾಟ ತಪ್ಪಿಸಿಕೊಳ್ಳಲು ಈ ಕ್ಷೇತ್ರದ ಕೃಷ್ಣ ದೇವಾಲಯ ಕೃಷ್ಣ ಮಠವಾದ್ದು ದೊಡ್ಡ ಕತೆ. ಪಂಕ್ತಿಭೇದ ಇಲ್ಲಿ ಭದ್ರವಾಗಿ ನೆಲೆಯೂರಿದೆ. ಇಲ್ಲೇ ಏನು, ಎಲ್ಲ ದೇವಾಲಯಗಳಲ್ಲೂ ಅದನ್ನು ಆಚರಿಸುತ್ತಿದ್ದಾರೆ ಎನ್ನಿ. ವಿಷಯಕ್ಕೆ ಬರೋಣ. ದಲಿತರು ದೇವಾಲಯ ಸುತ್ತಮುತ್ತ ಪ್ರದರ್ಶನ ನಡೆಸಿದರು, ಸಭೆ ನಡೆಸಿದರು, ಪ್ರತಿಭಟಿಸಿದರು. ಹೀಗೆ ಮಾಡಿ ಅವರು ಶಾಂತಿಯುತವಾಗಿ ಹಿಂದಿರುಗಿದರು. ಅಷ್ಟಕ್ಕೆ ಮುಗಿಯಲಿಲ್ಲ ಈ ಕತೆ. ದಲಿತರು ಕೃಷ್ಣ ಮಠದ ಸುತ್ತ ಓಡಾಡಿ ಅದನ್ನು ಅಪವಿತ್ರಗೊಳಿಸಿದರು ಎಂಬ ನೆಪ ಹೇಳಿ ಅದನ್ನು 'ಕನಕ ನಡೆ' ಎಂಬ ಬ್ರಾಹ್ಮಣರ, ಮೇಲ್ವರ್ಗದ ಜನ ರಸ್ತೆ ಸಾರಿಸಿ ಶುದ್ಧೀಕರಣ ಮಾಡಿದರು. ಇದಕ್ಕೆ ಪೇಜಾವರ ಶ್ರೀಗಳ ಆಶೀರ್ವಾದವೂ ಇತ್ತು. ಅದನ್ನು ಸಮರ್ಥಿಸಿಕೊಂಡ ಶ್ರೀಗಳ ಮಾತೂ ಅಷ್ಟೇ ಮಾರ್ಮಿಕವಾಗಿತ್ತು. ಹೇಗಿದೆ ನೋಡಿ ಈ ಇಪ್ಪತ್ತೊಂದನೆ ಶತಮಾನದಲ್ಲೂ ಕೂಡ.

* * *

ಆಫ್ಘಾನಿಸ್ತಾನವನ್ನೂ ಅಮೆರಿಕ ಆಕ್ರಮಿಸಿಕೊಂಡು ಹದಿನೈದು ವರ್ಷ ಆಯಿತು. ಭಯೋತ್ಪಾದನೆ ವಿರುದ್ಧ ಸಮರ ಸಾರಿದ ಅಮೆರಿಕದ ಮಿಲಿಟರಿಗೆ ಬಲಿಯಾದ್ದು ಆಫ್ಘಾನಿಸ್ತಾನದ ಜೊತೆಗೆ ಇರಾಕ್. ಎರಡೂ ಕಡೆ ಈಗ ಅಮೆರಿಕದ ಸೇನೆ ದುಬಾರಿ ಖರ್ಚಿನಲ್ಲಿ ನೆಲೆಯೂರಿದೆ. ಅಮೆರಿಕದ ಸೇನೆ ಹಿಂತೆಗೆದುಕೊಳ್ಳುವುದಾಗಿ ಹಲವು ಸಲ ಬರಾಕ್ ಒಬಾಮಾ ಹೇಳಿದ್ದೂ ಪ್ರಯೋಜನವೇನಾಗಿಲ್ಲ. ಏಕೆಂದರೆ ಸೇನೆ ಕಾಲ್ತೆಗೆದರೆ ಕೈಗೊಂಬೆ ಸರಕಾರಗಳು ಎರಡೂ ಕಡೆ ಪತನಗೊಳ್ಳುತ್ತವೆ. ಆಫ್ಘಾನಿಸ್ತಾನವನ್ನು ಆಕ್ರಮಿಸಿಕೊಂಡಿರುವ ಅಮೆರಿಕ ೨೦೦೨ರಿಂದ ೮೦೦ ಬಿಲಿಯ ಡಾಲರುಗಳನ್ನು ಸುರಿದಿದೆ. ಆದರೂ ತಾಲಿಬಾನ್ ಪ್ರಾಬಲ್ಯ ಬೆಳೆಯುತ್ತಲೇ ಇದೆ. ೨೦೦೨–೨೦೧೫ರ ಅವಧಿಯಲ್ಲಿ ದೇಶದಲ್ಲಿ ೯೦೦೦ ಭಯೋತ್ಪಾದನಾ ಕೃತ್ಯಗಳು ನಡೆದಿವೆ. ಅಮೆರಿಕ ಆಫ್ಘಾನಿಸ್ತಾನದ ಪುನರ್ನಿರ್ಮಾಣಕ್ಕಾಗಿ ಇದುವರೆಗೆ ೧೧೩ ಬಿಲಿಯ ಡಾಲರುಗಳನ್ನು ವಿನಿಯೋಗಿಸಿದೆ. ಆದರೆ ಈ ಹಣದಲ್ಲಿ ಹೆಚ್ಚಿನ ಭಾಗ ಭ್ರಷ್ಟ ರಾಜಕಾರಣಿಗಳು ಮತ್ತು ಪಾಳೆಯಗಾರರ ಜೇಬಿಗೆ ಹೋಗಿದೆ. ಈ ಹದಿನೈದು ವರ್ಷಗಳಲ್ಲಿ ೨೦೦೦ ಅಮೆರಿಕನ್ ಸೈನಿಕರು ಅಸುನೀಗಿದ್ದರೆ, ೩೦೦,೦೦೦ಕ್ಕೂ ಹೆಚ್ಚು ಆಫ್ಘನರು ಸಾವಿಗೀಡಾಗಿದ್ದಾರೆ. ಇವತ್ತಿಗೂ ಆಫ್ಘಾನಿಸ್ತಾನದಲ್ಲಿ ೧೦,೦೦೦ ಅಮೆರಿಕನ್ ಸೈನಿಕರು, ೫,೦೦೦ 'ನ್ಯಾಟೋ' ಸೈನಿಕರೂ ಇದ್ದಾರೆ.

* * *

ಡಿಸೆಂಬರ್ ಮೊದಲ ವಾರದಲ್ಲಿ ಕನ್ನಡ ಸಾಹಿತ್ಯ ಸಮ್ಮೇಳನ ನಡೆಯಲಿದೆ. ರಾಯಚೂರಿನಲ್ಲಿ ಅದಕ್ಕೆ ಭರದಿಂದ ಸಿದ್ಧತೆಗಳು ನಡೆಯುತ್ತಿವೆ. ಸುತರಾಂ ಮಳೆ ಇಲ್ಲದೆ ಇಡೀ ರಾಜ್ಯವು ತತ್ತರಿಸುತ್ತಿರುವ ಹಿನ್ನೆಲೆಯಲ್ಲಿ ಸಮ್ಮೇಳನವು ಅಷ್ಟೊಂದು ಅದ್ದೂರಿಯಾಗಿ

ನಡೆಯದಿದ್ದರೆ ಅದು ಔಚಿತ್ಯಪೂರ್ಣವಾಗಿರುತ್ತದೆ. ಸಂಭ್ರಮವಿರುವುದು ಸಹಜ, ಆದರೆ ರಾಜಮರ್ಯಾದೆಗೆ ಒಪ್ಪುವಂತಹ ದುಂದುವೆಚ್ಚ ಇರಬಾರದು. ಜನಾರ್ದನ ರೆಡ್ಡಿ ಮನೆಯ ಮದುವೆಯಂತೆ ಖಂಡಿತ ಇರುವುದಿಲ್ಲ, ಏಕೆಂದರೆ ಆತನ ಬಳಿ ಶೇಖರವಾಗಿರುವಷ್ಟು ಕಪ್ಪು ಹಣ ಸಾಹಿತ್ಯ ಪರಿಷತ್ತಿಗೆಲ್ಲಿಂದ ಬರಬೇಕು! ಒಟ್ಟಿನಲ್ಲಿ, ರಾಜ್ಯದ ಜನತೆಯ ಹೃದಯಾಂತರಾಳದ ದುಗುಡ ಮತ್ತು ಆತಂಕಗಳನ್ನು ಪ್ರತಿಫಲಿಸುವಂತೆ ಸಮ್ಮೇಳನವನ್ನು ನಡೆಸುವುದು ನಮ್ಮೆಲ್ಲರ ಜವಾಬ್ದಾರಿ. ಈ ವರ್ಷದ ಸಮ್ಮೇಳನಕ್ಕೆ ಪ್ರೊ॥ ಬರಗೂರು ರಾಮಚಂದ್ರಪ್ಪನವರು ಅಧ್ಯಕ್ಷರಾಗಿರುವುದರಿಂದ ಅದ್ದೂರಿಗಿಂತಲೂ ಅರ್ಥ ವಂತಿಕೆಗೆ ಹೆಚ್ಚು ಆದ್ಯತೆ ಇರುತ್ತದೆ. ಆಡಂಬರವಿಲ್ಲ ದಿದ್ದರೆ ಅವರಿಗೆ ಅತೃಪ್ತಿ ಏನೂ ಆಗುವುದಿಲ್ಲ, ಬದಲಾಗಿ ಅದನ್ನವರು ಮೆಚ್ಚಿಕೊಳ್ಳುತ್ತಾರೆ. ರಾಜ್ಯದ ತಕ್ಷಣದ ಮತ್ತು ದೀರ್ಘಕಾಲೀನ ಅವಶ್ಯಕತೆಗಳನ್ನು ಹಾಗೂ ದೇಶದ ಸಾಂಸ್ಕೃತಿಕ ವಾತಾವರಣವನ್ನು ವಿಶ್ಲೇಷಿಸಲಿರುವ ಮಾನ್ಯ ಬರಗೂರರು ಸಮ್ಮೇಳನಕ್ಕೆ ಗುಣಾತ್ಮಕ ಪರ್ಯಾಯವೊಂದರ ನೀಲಿನಕ್ಷೆಯನ್ನು ತಯಾರಿಸಿಕೊಡುತ್ತಾರೆಂಬ ನಿರೀಕ್ಷೆ ಹುಸಿಯಾಗಲಾರದು. ೧೯೭೯ರ ಧರ್ಮಸ್ಥಳದಿಂದ ೨೦೧೬ರ ರಾಯಚೂರಿ ನವರೆಗೆ ಸ್ವತಃ ಸಾಹಿತ್ಯ ಪರಿಷತ್ತು ಅನೇಕ ವಿಧಗಳಲ್ಲಿ ಸ್ವಾಗತಾರ್ಹ ಬದಲಾವಣೆಗಳನ್ನು ಕಂಡಿದೆ. ಅದಕ್ಕೆ ಬಂಡಾಯ ಸಾಹಿತ್ಯ ಸಂಘಟನೆಯ ನೇತಾರರಾದ ಬರಗೂರರು ಮತ್ತು ಅವರ ಸಹ–ಕಾರ್ಯಕರ್ತರು ಕೂಡ ಕಾರಣರಾಗಿದ್ದಾರೆ. ಸಾಹಿತ್ಯ ಸಂವೇದನೆಯ ಕಲ್ಪನೆಯು ಇಂದು ನಾಲ್ಕು ದಶಕಗಳ ಹಿಂದಿದ್ದಂತೆ ಉಳಿದಿಲ್ಲ. ರಾಜ್ಯದಲ್ಲಿ ಧರ್ಮಾಂಧತೆಯ ಪರಿಣಾಮವಾಗಿ ಬೇಕಾದಷ್ಟು ಮತೀಯ ವಿದ್ವೇಷದ ಸನ್ನಿವೇಶವು ರಚನೆಯಾಗಿದ್ದರೂ ಸಾಹಿತ್ಯ ಕ್ಷೇತ್ರದಲ್ಲಿ ಅದರ ಛಾಯೆ ಬಹಳ ಅಲ್ಪವೇ ಆಗಿರುವುದು ವಾಸ್ತವ. ಇದಕ್ಕೆ ಬುನಾದಿಯನ್ನು ಭದ್ರಗೊಳಿಸಲು ರಾಯಚೂರು ಸಮ್ಮೇಳನವು ಯಶಸ್ವಿಯಾಗಲೆಂದು ಜನತೆಯು ಆಶಿಸುತ್ತದೆ. "ಮಾನವನು ತನ್ನ ಸುತ್ತಣ ಪ್ರಕೃತಿಯನ್ನು ಬದಲಾಯಿಸುತ್ತಾ ತಾನೂ ಬದಲಾಗುತ್ತಾನೆ" ಎಂಬ ಫ್ರೆಡರಿಕ್ ಏಂಗೆಲ್ಸ್‌ನ ಮಾತು ನಾಗರಿಕತೆ ಮತ್ತು ಸಂಸ್ಕೃತಿಯ ವಿಕಾಸಕ್ಕೂ ಅನ್ವಯವಾಗುತ್ತದೆ. ಸಾಹಿತ್ಯಕ ದೃಷ್ಟಿಯು ಕಳೆದ ನಾಲ್ಕು ದಶಕಗಳಲ್ಲಿ ಗಣನೀಯವಾಗಿ ಬದಲಾಗುತ್ತಾ ಬಂದಿದ್ದರಿಂದ ಇಂದು ಬರಗೂರ ರಂಥವರು ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಲು ಸಾಧ್ಯವಾಗಿದೆ. ಆ ದೃಷ್ಟಿಯ ಬದಲಾವಣೆಗೆ ಬಂಡಾಯ ಸಾಹಿತ್ಯ ಸಂಘಟನೆಯ ಕಾಣಿಕೆಯು ನಗಣ್ಯವಲ್ಲ. ವಿಶೇಷತಃ ಬರಗೂರರು ಆ ಕ್ರಿಯಾಶೀಲತೆಯ ಮುಖ್ಯ ಪ್ರತಿನಿಧಿ. ಸಾಹಿತ್ಯ ಪರಿಷತ್ತಿನ ಸಾಂಸ್ಥಿಕ ಸ್ವರೂಪವು ಇನ್ನೂ ಹೆಚ್ಚು ಜನಪರವಾಗಲು ರಾಯಚೂರು ಸಮ್ಮೇಳನವು ಪ್ರೇರಕ ಶಕ್ತಿಯಾಗಲೆಂದು ಆಶಿಸೋಣ. ಇತ್ತೀಚೆಗಷ್ಟೆ ಸಂಸ್ಕೃತಿ ಚಿಂತಕ ಆಶಿಶ್ ನಂದಿ "ಸದ್ಯದಲ್ಲಿ ದೇಶದ ಸನ್ನಿವೇಶವು ಭೀಕರ ವಾಗಿದೆ, ನಾವು ಎಚ್ಚರದಿಂದ ಸಂಘಟಿತ ಮಧ್ಯಪ್ರವೇಶ ಮಾಡದಿದ್ದರೆ ದೇಶಕ್ಕೆ ಭವಿಷ್ಯವು ಇನ್ನೂ ಕರಾಳ ವಾಗಲಿದೆ" ಎಂಬರ್ಥದ ಮಾತುಗಳನ್ನಾಡಿದ್ದಾರೆ. ಕರಾಳತೆಯು ಅಂಕುರಿಸುವ ಸಾಧ್ಯತೆ ಇರುವಾಗ ಸಾಹಿತ್ಯವು ಬೌದ್ಧಿಕ ಕನಸಿನ ಲೋಕದಲ್ಲಿ ಉಳಿಯ ಕೂಡದೆಂಬುದು ಇದರ ಅಂತರಾರ್ಥ. ಪಾಂಡಿತ್ಯಪೂರ್ಣ ಸಂವಾದಗಳ ಜೊತೆಜೊತೆಯಲ್ಲೇ ಸಾಹಿತಿಗಳು ಮತ್ತು ಸಂಸ್ಕೃತಿ ಚಿಂತಕರು ಜನರ ಮನಸ್ಸಿಗೆ ತಮ್ಮ ಸಂವೇದನೆ ಗಳನ್ನು ಆತ್ಮೀಯವಾಗಿ ಮುಟ್ಟಿಸುವ ಕೆಲಸದಲ್ಲಿ ನೇರವಾಗಿ ಭಾಗಿಗಳಾಗಬೇಕಾಗುತ್ತದೆ. ಮಾನ್ಯ ಪ್ರೊ॥ ಬರಗೂರು ರಾಮಚಂದ್ರಪ್ಪನವರ ನೇತೃತ್ವ ಮತ್ತು ಮಾರ್ಗ ದರ್ಶನದಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಸಮಗ್ರವಾದ ನೂತನ ಪ್ರಣಾಲಿಕೆಯನ್ನು ರಚಿಸಿಕೊಂಡು ಅದನ್ನು ಕಾರ್ಯಗತಗೊಳಿಸಿಕೊಳ್ಳಲು ಸಮರ್ಥವಾಗಲಿ, ಆ ಕ್ರಿಯೆಯಲ್ಲಿ ಕನ್ನಡದ ಜನತೆ ಕೈಜೋಡಿಸಲಿ.

* * *

ಜಗತ್ತಿಗೆ ಇದಕ್ಕಿಂತಲೂ ಹೆಚ್ಚು ಪ್ರಸ್ತುತವಾದ ವಿಷಯವೇ ಇಲ್ಲವೆಂಬಂತೆ ಕಳೆದ ಎರಡು ವರ್ಷ ಗಳಿಂದ ನಮ್ಮ ಮಾಧ್ಯಮಗಳು ಅಸಹ್ಯವೆನಿಸುವಷ್ಟರ ಮಟ್ಟಿಗೆ ಅಮೆರಿಕಾದ ಅಧ್ಯಕ್ಷ ಚುನಾವಣೆಯ ಬಗ್ಗೆ ಬರೆದು, ಮಾತಾಡಿ, ಬೃಹತ್ತಾದ 'ವಿದ್ವತ್ಪೂರ್ಣ' ಚರ್ಚೆಗಳನ್ನು ಆಯೋಜಿಸಿ ತಲೆಚಿಟ್ಟು ಹಿಡಿಸಿಬಿಟ್ಟಿವೆ. ಅದೆಲ್ಲಾ ವೃಥಾ ಕಂಠಶೋಷಣೆ ಮತ್ತು ಸಮಯದ ದುರ್ವ್ಯಯ. ಏಕೆಂದರೆ ಇಬ್ಬರು ಜಟ್ಟಿಗಳಲ್ಲಿ ಯಾರೇ ಗೆದ್ದರೂ ಅವರನ್ನು ನಿಯಂತ್ರಿಸುವವರು ಬಹುರಾಷ್ಟ್ರೀಯ ಕಂಪನಿಗಳ ಮಾಲೀಕರು, ಯುದ್ಧ ಸಾಮಗ್ರಿಗಳ ತಯಾರಕರು, ಬ್ಯಾಂಕರುಗಳು ಮತ್ತು ಎಲ್ಲಕ್ಕಿಂತ ಮುಖ್ಯವಾಗಿ ಬೇಹುಗಾರಿಕಾ ಸಂಸ್ಥೆಯಾದ ಸಿ.ಐ.ಎ. ಟ್ರಂಪ್ ಗೆದ್ದರೆ ಆಕಾಶ ಕಳಚಿಬೀಳುತ್ತದೆ ಮತ್ತು ಹಿಲರಿ ಗೆದ್ದರೆ ಸ್ವರ್ಗಕ್ಕೆ ಏಣಿ ಹಾಕಿ ಎಲ್ಲರನ್ನೂ ಹತ್ತಿಸುತ್ತಾಳೆ ಎಂಬ ಮೂರ್ಖ ಗ್ರಹಿಕೆಗೆ ಎರಡು ವರ್ಷದ ಅಸಂಗತ ಚರ್ಚೆಗಳೇ ಪುರಾವೆ. ಟ್ರಂಪ್ ಗೆದ್ದಿದ್ದಾನೆ, ಆದರೆ ಆಕಾಶವಿನ್ನೂ ಕಳಚಿಬಿದ್ದಿಲ್ಲ. ಆರೇಳು ತಿಂಗಳುಗಳ ಬಳಿಕ ಆಕಾಶದಿಂದ ಬಾಂಬುಗಳನ್ನು ಸುರಿಸುವ ಸಾಧ್ಯತೆಯೇನೋ ಇದೆ. ಅದನ್ನು ಹಿಲರಿಯೂ ಮಾಡುತ್ತಿದ್ದಳು. ಅದರ ಅನುಭವ ಈಗಾಗಲೇ ಆಕೆಗಿದೆ, ಟ್ರಂಪ್‌ಗೆ ಅದು ಹೊಸ ಅನುಭವ, ಅಷ್ಟೆ. ಭಾರತೀಯ ಮೇಧಾವಿಗಳನ್ನು ಅಮೆರಿಕಾದಿಂದ ಹೊರದೂಡುತ್ತಾನೆ, ಮೆಕ್ಸಿಕೋದಿಂದ ಜನ ನುಸುಳ ಬರದಂತೆ ಗೋಡೆ ಕಟ್ಟಿಸುತ್ತಾನೆ, ಎಂಬಿತ್ಯಾದಿ ಐತಿಹ್ಯಗಳು ಎಷ್ಟು ಹುಸಿಯೆಂಬುದು ವಿಶ್ವಕ್ಕೆ ಸದ್ಯದಲ್ಲೇ ತಿಳಿಯುತ್ತದೆ. ಭಾರತೀಯರು ಕೆಲವರು ಹಿಂದಿರುಗಿದರೆ ಅವರನ್ನು ಸ್ವಾಗತಿಸೋಣ. ಅವರು ತರುವ ಹಣದಿಂದ ಎಂತಹ ಉದ್ದಿಮೆಗಳನ್ನು ಸ್ಥಾಪಿಸುತ್ತಾರೋ ಕಾದುನೋಡೋಣ. ಅವರೇನೂ ನಿರ್ಗತಿಕರಲ್ಲ, ಅವರಿಗೆ ಕಾಶ್ಮೀರದ ಪಂಡಿತರ ಬವಣೆಯೇನೂ ಇರುವುದಿಲ್ಲ. ಚುನಾವಣೆಯ ಪೂರ್ವದಲ್ಲಿ ನಕಲಿ ಶ್ಯಾಮನಂತೆ ಜಗಕ್ಕೆ ಹಾಸ್ಯ ಉಣಬಡಿಸಿದ್ದಂತೂ ಟ್ರಂಪ್‌ನ ಹೆಗ್ಗಳಿಕೆಯಾಗಿ ಉಳಿಯುತ್ತದೆ.

ಮೂರು–ನಾಲ್ಕು ವರ್ಷಗಳ ಹಿಂದೆ ಅಮೆರಿಕಾದ ನಾಗರಿಕರು "ವಾಲ್ ಸ್ಟ್ರೀಟನ್ನು ಆಕ್ರಮಿಸುತ್ತೇವೆ" ಎಂದು ಒಂದೆರಡು ವಾರ ಸಮಾಚಾರಗಳ ಕೇಂದ್ರಬಿಂದು ವಾದರು. ಇಂತಹ ಆರ್ಭಟಗಳಿಂದ ವಾಲ್ ಸ್ಟ್ರೀಟ್ ಬಿರುಕು ಬಿಡುವಷ್ಟು ಕಳಪೆ ಕಾಮಗಾರಿಯದಲ್ಲವೆಂಬುದು ಈಗ ಎಲ್ಲರಿಗೂ ತಿಳಿದಿದೆ. ಬ್ರಿಟನ್ ಈಚೆಗೆ ಯೂರೋಪಿಗೆ ವಿದಾಯ ಹೇಳಿ "ಬ್ರೆಕ್ಸಿಟ್" ಎಂಬ ಪದವನ್ನು ನಿಘಂಟಿಗೆ ಸೇರಿಸಿತು. ಹಾಗೆ ತಾವು ಅಮೆರಿಕಾಕ್ಕೆ ವಿದಾಯ ಹೇಳಿಬಿಡುವುದಾಗಿ ಘೋಷಿಸಿ ಪಶ್ಚಿಮ ಕರಾವಳಿಯ ದೊಡ್ಡ ರಾಜ್ಯ ಕ್ಯಾಲಿಫೋರ್ನಿಯದ ಅನೇಕ ಜನ "ಕ್ಯಾಲೆಕ್ಸಿಟ್" ಎಂಬ ಪದವನ್ನು ಆವಾಹನೆ ಮಾಡಿಕೊಂಡಿದ್ದಾರೆ. "ನೀನು ನಮ್ಮ ಅಧ್ಯಕ್ಷನಲ್ಲ" ಎಂಬ ಘೋಷಣೆಗಳನ್ನು ಟ್ರಂಪ್‌ಗೆ ಕೇಳಿಸುವಂತೆ ಕೂಗಿದ್ದಾರೆ. ಅದೂ ಹತ್ತು ದಿನಗಳ ತಮಾಷೆ ಪ್ರಸಂಗವಾಗಿ ಅಂತ್ಯವಾಗುವುದರಲ್ಲಿ ಸಂಶಯವಿಲ್ಲ. ಟ್ರಂಪ್‌ನಂಥವರು ಅಧ್ಯಕ್ಷರಾಗುವುದು ಬೇಡವೆಂದು ಅಮೆರಿಕಾದ ಜನ ನಿಜಕ್ಕೂ ಭಾವಿಸಿದ್ದರೆ ಅದಕ್ಕೆ ಬೇರೆ ಕ್ರಮಗಳಿಗೆ ಒತ್ತುಕೊಡಬೇಕಾಗಿತ್ತು. ಮತ ಚಲಾಯಿಸಲು ಅರ್ಹರಾದವರಲ್ಲಿ ಶೇ. ೪೫ರಷ್ಟು ಮಂದಿ ಮೊನ್ನೆಯ ಚುನಾವಣೆಯಲ್ಲಿ ಮತ ಚಲಾಯಿಸಿದರು. ಆ ಪೈಕಿ ಅರ್ಧದಷ್ಟನ್ನು ಸಹ ಪಡೆಯದ ಟ್ರಂಪ್ ವಿಜಯಿ ಎಂದು ಘೋಷಿಸಲಾಯಿತು. ಆತನಿಗಿಂತಲೂ ಹೆಚ್ಚು ಮತಗಳನ್ನು ಹಿಲರಿ ಗಳಿಸಿದ್ದಾಗ್ಯೂ ಆಕೆಗೆ ಬಿಳಿ ಮನೆಗೆ ಪ್ರವೇಶ ದೊರೆಯಲಿಲ್ಲ. ವಿಶ್ವದ ಅತಿ ಪ್ರಬಲ ಪ್ರಜಾಪ್ರಭುತ್ವ ಎಂದು ಹೊಗಳಲಾಗುವ ಅಮೆರಿಕಾದ ಮುಂದಿನ ಅಧ್ಯಕ್ಷನಿಗೆ ಮತ ನೀಡಿರುವವರು ದೇಶದ ಮತದಾರರ ಶೇ. ೨೫ರಷ್ಟು! ಆ ದೇಶದ ಚುನಾವಣಾ ಸಂಹಿತೆ ಮತ್ತು ಪದ್ಧತಿ ಹಾಗಿದೆ. ನಮ್ಮ ಪ್ರಧಾನಿ ಮೋದಿಯವರೇ ಮೇಲು, ಅವರು ಶೇ. ೩೧ರ ಸರ್ಕಾರದ ನೇತಾರರು. ಅಡುಗೂಲಜ್ಜಿ ಕಾಲದಲ್ಲಿ ರೂಪಿತವಾದ ಅರ್ಥವಿಲ್ಲದ ಚುನಾವಣಾ ವ್ಯವಸ್ಥೆ ಅಮೆರಿಕಾದ್ದು. ಅದನ್ನನುಕರಿಸಿ ನಮ್ಮ ದೇಶದಲ್ಲಿ ಅಧ್ಯಕ್ಷೀಯ ಮಾದರಿ ಸರ್ಕಾರ ಇರಬೇಕೆಂದು ಮಾನ್ಯ ವಾಜಪೇಯಿಯವರು ಅಪೇಕ್ಷಿಸಿದ್ದರು. ಇಂದಿಗೂ ಬಂಡವಾಳಶಾಹಿಯ ಭುಜದ ಮೇಲೆ ಆಸರೆ ಪಡೆದಿರುವ ರಾಜಕೀಯ ಪಕ್ಷಗಳು (ಭಾಜಪ, ಕಾಂಗ್ರೆಸ್, ಇತ್ಯಾದಿ) ಮತಗಳ ಅನುಪಾತಕ್ಕೆ ತಕ್ಕಂತೆ ಲೋಕಸಭೆ ಮತ್ತು ಶಾಸನಸಭೆಗಳಲ್ಲಿ ರಾಜಕೀಯ ಪಕ್ಷಗಳು ಪ್ರಾತಿನಿಧ್ಯ ಪಡೆಯಬೇಕೆಂಬ ನೈಜ ಪ್ರಜಾಪ್ರಭುತ್ವದ ಕ್ರಮಕ್ಕೆ ಬೆಂಬಲ ಸೂಚಿಸಿಲ್ಲ. ಕಾರಣ ಸರಳವಾಗಿದೆ: ಹೀನ ರಾಜಕೀಯ ಲೆಕ್ಕಾಚಾರಗಳಿಂದ ಅಧಿಕಾರ ಹೊಂದಲು ಆಗ ಸಾಧ್ಯವಾಗುವುದಿಲ್ಲ. ಕ್ಯಾಲಿಫೋರ್ನಿಯಾ ಸ್ವತಂತ್ರ ರಾಷ್ಟ್ರವಾಗಬೇಕೆಂದು ಒಂದೆರಡು ವಾರ ಘೋಷಣೆ ಕೂಗುವ ಅಮೆರಿಕಾದ ಜನ ಮೊದಲು ಎಲೆಕ್ಟೊರಲ್ ಕಾಲೇಜ್ ಎಂಬ ಘೋರ ಕಲ್ಪನೆಯನ್ನು ಅಟ್ಲಾಂಟಿಕ್ ಸಮುದ್ರಕ್ಕೆ ಎಸೆಯಬೇಕು. (ಪೆಸಿಫಿಕ್ ಸಾಗರಕ್ಕೆ ಶಾಂತಸಾಗರವೆಂಬ ಹೆಸರಿರು ವುದರಿಂದ ಅದನ್ನು ಕಲಕುವುದು ಬೇಡ). ಈಗ ಅಸ್ತಿತ್ವದಲ್ಲಿರುವ ನಿಯಮದಂತೆ ಯಾವ ರಾಜ್ಯದಲ್ಲಿ ಯಾವೊಬ್ಬರು ಬಹುಮತ ಪಡೆಯುತ್ತಾರೋ ಅವರಿಗೆ ಆ ರಾಜ್ಯದ ಎಲ್ಲ ಮತಗಳೂ ಸಿಕ್ಕಿಬಿಡುತ್ತವೆ! ಇದೊಂದು ಅನ್ಯಾಯದೃಶವಾದ ಮೋಜಿನ ಪದ್ಧತಿ. ಇದೊಂದು ವಿಚಿತ್ರ ಚುನಾವಣಾ ಪದ್ಧತಿ. ಅದೇ ತೋರಿಸುತ್ತದೆ, ಅಮೆರಿಕಾದಲ್ಲಿ ಯಾರು ಅಧ್ಯಕ್ಷರಾಗಬೇಕೆಂಬುದು

ಅಷ್ಟೇನೂ ಪ್ರಧಾನವಾದ ವಿಚಾರವಲ್ಲ ಎಂದು. ಎರಡು ವರ್ಷ ದೇಶದ ಮತದಾರರಿಗೆ ಚುನಾವಣೆಯ ಹೆಸರಿನಲ್ಲಿ ಒಂದಷ್ಟು ಅಫೀಮು, ಒಂದಷ್ಟು ಸಂತೋಷ ಕೂಟಗಳು, ಒಂದಷ್ಟು ಮಾತಿನ ಮಳೆ, ಒಂದಷ್ಟು ಪುಕ್ಕಟೆ ಮನರಂಜನೆ, ಇತ್ಯಾದಿಗಳನ್ನು ಒದಗಿಸಲು ಅಮೆರಿಕಾದ ಚುನಾವಣೆಯು ಸಮರ್ಥವಾಗಿದೆ. ಇದನ್ನು ಗಮನಿಸಿ ಭಾರತವು ಟ್ರಂಪ್‌ಗೆ ಬೆದರಬೇಕಿಲ್ಲ, ಹಿಲರಿಗಾಗಿ ಕಣ್ಣೀರು ಸುರಿಸಬೇಕಾಗಿಲ್ಲ.

ನಾವು ಗಂಭೀರವಾಗಿ ಯೋಚಿಸಬೇಕಾದ್ದು ನಮ್ಮ ದೇಶದ ಚುನಾವಣೆಗಳಲ್ಲಿ ಕಂಡುಬರುವ ನೈಜ ಪ್ರಜಾಪ್ರಭುತ್ವವಾದಿ ಪದ್ಧತಿಗೆ ಹೊರತಾದ ತಿಳಿಗೇಡಿತನದ ಬಗ್ಗೆ. ನಮಗೆ ಶೇ. ೩೧ರ ಪ್ರಧಾನಿಗಳು ಬೇಡ ಮತ್ತು ಯಾವೊಬ್ಬ ಮತದಾರರ ಮತವೂ ಅಪ್ರಸ್ತುತವಾಗುವುದು ಬೇಡ. ದೇಶದಲ್ಲೆಲ್ಲಾ ಪಕ್ಷಗಳು ಪಡೆಯುವ ಒಟ್ಟು ಮತಗಳನ್ನು ಆಧರಿಸಿ ಅನುಪಾತದ ಪ್ರಮಾಣದಲ್ಲಿ ಎಲ್ಲ ಪಕ್ಷಗಳಿಗೂ ಪ್ರಾತಿನಿಧ್ಯ ಕೊಡಬೇಕು. ಅದು ನೈಜ ಪ್ರಜಾಪ್ರಭುತ್ವದತ್ತ ನಾವಿರಿಸಬೇಕಾದ ಮೊದಲ ಹೆಜ್ಜೆ. ನಮಗೆ "ಕರ್ನಾಟೆಕ್ಸಿಟ್" ಎಂಬ ಚಳುವಳಿ ಬೇಡ, ಅನುಪಾತದ ಪ್ರಮಾಣದಲ್ಲಿ ಪ್ರಾತಿನಿಧ್ಯ ಬೇಕು. ಅದನ್ನು ಗಳಿಸಿಕೊಳ್ಳಲು ಜನತೆಯು ಹೋರಾಡಬೇಕಿದೆ.

* * *

ನಮ್ಮ ರಾಜ್ಯದ ಕೆಲವು ಪ್ರಾಧಿಕಾರಗಳಿಗೆ ಧಿಕ್ಕಾರ ಹೇಳಬೇಕಾದ ಅನಿವಾರ್ಯತೆ ಇದೆ. ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ (ಬಿ.ಡಿ.ಎ.) ಆ ಪಟ್ಟಿಯಲ್ಲಿ ಮೊದಲ ಸ್ಥಾನದಲ್ಲಿದೆ. ಈಗ ಅದರ ಅಧ್ಯಕ್ಷ ಸ್ಥಾನಕ್ಕೆ ಬಂದಿರುವವರನ್ನು ನೋಡಿದರೆ ಆ ಪ್ರಾಧಿಕಾರವನ್ನು ರದ್ದುಗೊಳಿಸುವುದು ಸಹ ಉಚಿತವೆನಿಸುತ್ತದೆ. ಕೃಷಿ ಯೋಗ್ಯವಾದ ಇನ್ನೆಷ್ಟು ಜಮೀನನ್ನು ರೈತರಿಂದ ಕಿತ್ತುಕೊಂಡು ಬೆಂಗಳೂರನ್ನು ಅಭಿವೃದ್ಧಿಗೊಳಿಸಬೇಕು? ಆರಂಭವಾದುದೆಲ್ಲಾ ಅಂತ್ಯವಾಗುತ್ತದೆಂದು ಬುದ್ಧ ಹೇಳಿದ್ದ (ಯತ್ಕಿಂಚ ಸಮುದಯಧಮ್ಮಂ ಸಬ್ಬಂ ತಂ ನಿರೋಧಧಮ್ಮಂ). ದುಃಖಕ್ಕೆ ಆರಂಭವಿದೆ, ಆದ್ದರಿಂದ ಅದಕ್ಕೆ ಅಂತ್ಯವೂ ಇದೆ. ಆದರೆ ಬಿ.ಡಿ.ಎ.ಗೆ ಅಂತ್ಯವೇ ಇಲ್ಲವೆ? ಇನ್ನೆಷ್ಟು ಕಾಲ ಅದು ಕೃಷಿಯನ್ನು ಮೂಲೆಗುಂಪಾಗಿಸಬೇಕು, ರೈತರನ್ನು ಕಂಗಾಲಾಗಿಸಬೇಕು? ಇನ್ನೂ ಮೂವತ್ತು ವರ್ಷ ಈ ಬಿಡಿಎ ಇಂದಿನಂತೆ ಮುಂದುವರಿದರೆ ಬೆಂಗಳೂರು ಬಸ್ಸು ನಿಲ್ದಾಣದಿಂದ ಸುತ್ತಲೂ ಒಂದುನೂರು ಕಿಲೋ ಮೀಟರ್‌ವರೆಗೆ ಕೇವಲ ಸೈಟುಗಳು, ಮನೆಗಳು, ಬಹುಮಹಡಿ ಕಟ್ಟಡಗಳೇ ಕಾಣಬಹುದು. ಅದರಾಚೆಗೆ ಗುಡಿಸಲುಗಳು, ಅಷ್ಟೆ. ಆಗ ಉಕ್ಕಿನ ಸೇತುವೆಗಳು, ಮರದ ಸೇತುವೆಗಳು, ಮಣ್ಣಿನ ಸೇತುವೆಗಳೇ ಎಲ್ಲೆಲ್ಲೂ. ಚಿನ್ನದ ಸೇತುವೆಯೊಂದು ಬಾಕಿ, ಅಷ್ಟೆ. ಮರದ ಸೇತುವೆಗಳ ರಚನೆಯಾಗಬೇಕಾದರೆ ಮರಗಳನ್ನೆಲ್ಲಾ ಉರುಳಿಸಬೇಕಲ್ಲ.!

ಎಲ್ಲದಕ್ಕೂ ಗಣಕಯಂತ್ರಗಳ ಬಳಕೆಯಾಗಬೇಕೆನ್ನುತ್ತಾರೆ. ಬೆಂಗಳೂರಿನ ಮನೆಗಳು, ನಿವೇಶನಗಳು, ಯಾರಿಗೆ ಸೇರಿವೆಯೆಂಬುದನ್ನು ಈ ಯಂತ್ರಗಳಲ್ಲಿ ಅಳವಡಿಸಿದರೆ ನಮ್ಮೆಲ್ಲರ ಬೇಳೆಕಾಳು ಹೊರಬರುತ್ತದೆ. ಆದ್ದರಿಂದಲೇ ಗಣಕ ಯಂತ್ರಗಳನ್ನು ಬಿಡಿಎ ಬಳಸುವುದಿಲ್ಲವೇನೊ! ಎಂತಹ ಮುಚ್ಚಳಿಕೆ ಬರೆದುಕೊಡಲು




ಸಹ ನಮ್ಮ ನಾಗರಿಕರು ಅಂಜುವುದಿಲ್ಲ. ನ್ಯಾಯಮೂರ್ತಿಗಳೇ ಅಂಜದಿರುವಾಗ ಇತರರು ಏಕೆ ಅಂಜಬೇಕು! ಒಟ್ಟಿನಲ್ಲಿ, ಅಭಿವೃದ್ಧಿ ಆಗುತ್ತಿರುವುದು ಬೆಂಗಳೂರಲ್ಲ; ಬೆಂಗಳೂರು ತಮ್ಮದೆಂದು ಘೋಷಿಸಿಕೊಂಡ ಕೆಲವರ ಅಭಿವೃದ್ಧಿ ಆಗುತ್ತಿದೆ. ಇನ್ನು ನೂರು ಬಿಡಿಎ ಬಡಾವಣೆಗಳು ಮತ್ತು ನೂರು ಗೃಹ ಸಹಕಾರ ಸಂಘಗಳು ಬಂದರೂ ಸೈಟುಕೊಳ್ಳುವವರು ಹೊರ ರಾಜ್ಯಗಳವರು ಮತ್ತು ನಮ್ಮ ರಾಜ್ಯದ ಕೆಲವರು. ಒಂದು ಸೈಟಿರುವವರು ಇನ್ನೊಂದನ್ನು ಕೊಳ್ಳುತ್ತಾರೆ, ಎರಡಿರುವವರು ನಾಲ್ಕು ಮಾಡಿಕೊಳ್ಳುತ್ತಾರೆ; ಸೈಟು ಕೊಳ್ಳಲು ಆರ್ಥಿಕ ಚೈತನ್ಯವಿಲ್ಲದವರು ಹಾಗೆಯೇ ಉಳಿದಿರುತ್ತಾರೆ. ಬೆಂಗಳೂರು ಹಾಳಾಗುವ ಪ್ರಕ್ರಿಯೆ ಮುಂದುವರಿಯುತ್ತದೆ.

ನಾಗರಿಕರು, ಸರ್ಕಾರ, ಗೃಹ ಸಹಕಾರ ಸಂಘಗಳು ಹಾಗೂ ಸೈಟುಗಳಿಲ್ಲದವರು ಮತ್ತು ರೈತರು ಈ ಬಗ್ಗೆ ಗಂಭೀರವಾಗಿ ಆಲೋಚನೆ ಮಾಡಬೇಕು. ಹಾಗೆ ಮಾಡಿದ್ದಾದರೆ ಉಕ್ಕಿನ ಸೇತುವೆಗಳ ನಿರ್ಮಾಣದ ಪೆಡಂಭೂತ ನಮ್ಮನ್ನು ಬಾಧಿಸುವುದಿಲ್ಲ.

* * *

ಕೇಸರಿ–ಬುರ್ಖಾ ಸಂಘರ್ಷದ ವ್ಯಾಧಿ ಇಂದು ಶಿಕ್ಷಣ ಕ್ಷೇತ್ರವನ್ನು ಕಲುಷಿತಗೊಳಿಸುತ್ತಿರುವುದು ಆತಂಕಕಾರಿಯಾದ ಪರಿಸರವನ್ನು ಸೃಷ್ಟಿಸುತ್ತಿದೆ. ಹಾವೇರಿ ಜಿಲ್ಲೆಯ ಹಾನಗಲ್, ಹಿರೇಕೆರೂರು, ಅಕ್ಕಿ ಆಲೂರು – ಹೀಗೆ ಐದು ಪದವಿ ಕಾಲೇಜುಗಳಲ್ಲಿ ವಿದ್ಯಾರ್ಥಿಗಳ ಸಮವಸ್ತ್ರ ಮತ್ತು ಮುಸ್ಲಿಂ ವಿದ್ಯಾರ್ಥಿನಿಯರ ಬುರ್ಖಾ ಇವೆರಡೂ ಮೊದಲಿನಿಂದಲೂ ಬಳಕೆಯಲ್ಲಿದ್ದರೂ ಈ ಪಟ್ಟಣಗಳ ಕೆಲವು ಕಾಲೇಜುಗಳಲ್ಲಿ ದಿಢೀರನೆ ಕೇಸರಿ ಬಣ್ಣದ ಶಾಲು, ಪಂಚೆ ಪ್ರತ್ಯಕ್ಷವಾಗಿದೆ. ಈ ರೀತಿಯ ವಸ್ತ್ರಸಂಹಿತೆಯ ಪರ ವಿರೋಧದ ಚಟುವಟಿಕೆಗಳಿಗೆ ಕಾಲೇಜಿನ ಹೊರಗಿನ ಶಕ್ತಿಗಳ ಕುಮ್ಮಕ್ಕಿರುವುದನ್ನು ಮಾಧ್ಯಮಗಳು ಗುರುತಿಸಿವೆ. ಎರಡು ಕೋಮಿನವರ ವಿದ್ಯಾರ್ಥಿಗಳ ಚಟುವಟಿಕೆಯನ್ನೂ ಬೆಂಬಲಿಸುತ್ತಿರುವ ಬಲಪಂಥೀಯ ರಾಜಕೀಯ ಪಕ್ಷಗಳು ಇದನ್ನು ರಾಜಕೀಯ ಪ್ರಶ್ನೆಯನ್ನಾಗಿಯೇ ಕಾಣುತ್ತಿವೆ. ಅದೇನೇ ಇರಲಿ, ಇಲ್ಲಿಯೂ ಮಹಿಳೆಯರ ವಸ್ತ್ರಸಂಹಿತೆಯನ್ನು ನಿರ್ಧರಿಸುತ್ತಿರುವವರು ವಿಭಿನ್ನ ಮತಗಳಿಗೆ ಸೇರಿದ ಪುರುಷರೇ ಆಗಿದ್ದಾರೆ. ಇದರಿಂದ ನಷ್ಟ ಯಾರಿಗೆ? "ಬುರ್ಖಾ ಬೇಡ ಎಂದರೆ ಕಾಲೇಜು ಬೇಡ" ಎನ್ನುವ ತೀರ್ಮಾನಕ್ಕೆ ಬರುವ ವಿದ್ಯಾರ್ಥಿನಿಯರು ಮತ್ತು ಅವರ ಬೆಂಬಲಿಗರು ಸ್ವಪ್ರತಿಷ್ಠೆಗಾಗಿ ಸ್ತ್ರೀಶಿಕ್ಷಣಕ್ಕೆ ಕಂಟಕ ಒಡ್ಡುತ್ತಿರುವುದು ಸಮಸ್ಯೆಯನ್ನು ಕಗ್ಗಂಟಾಗಿಸಿದೆ.

ಅಸ್ಮಿತೆಯ ರಾಜಕೀಯ ಬಲವಾಗಿ ಬೆಳೆಯುತ್ತಿರುವ ಇಂದು ಪ್ರತಿಯೊಂದು ಧರ್ಮದವರಿಗೂ ತಮ್ಮ ಧರ್ಮದ ಆಚರಣೆ ಮತ್ತು ಸಂಕೇತಗಳನ್ನು ಪ್ರದರ್ಶಿಸುವುದು ತಮ್ಮ ಅಸ್ತಿತ್ವದ ಸಮರ್ಥನೆಯೆಂಬ ಅಭಿಪ್ರಾಯ ಗಟ್ಟಿಯಾಗುತ್ತಿದೆ. ೨೦೧೦ರಲ್ಲಿ ಬಂಟ್ವಾಳದ ಎಸ್.ವಿ.ಎಸ್. ಕಾಲೇಜಿನ ವಿದ್ಯಾರ್ಥಿಯೊಬ್ಬಳು ಹಿಜಾಬ್ ಧರಿಸಿಕೊಂಡು ಬಂದು, ಅದು ತನ್ನ ಧಾರ್ಮಿಕ ಹಕ್ಕು ಎಂಬಂತಹ ಮಾತುಗಳನ್ನಾಡಿದ್ದಳು ಮತ್ತು ಅದಕ್ಕೆ ಬಲಪಂಥೀಯ ಸಂಘಟನೆಗಳ ಪುರುಷರು ವಿರೋಧ ತೋರಿಸಿದ್ದರಿಂದ ಅವಳು ಕಾಲೇಜು ಬಿಡಬೇಕಾಗಿ ಬಂತು. ಹಿಂದು ಹೆಸರುಳ್ಳ ಕಾಲೇಜಿನಲ್ಲಿ ಮುಸ್ಲಿಮರ ವಸ್ತ್ರಸಂಹಿತೆಗೆ ಅವಕಾಶವಿಲ್ಲ, ಎಂದು ಹೇಳುತ್ತಲೇ ಆ ಹುಡುಗಿಗೆ ಪ್ರವೇಶ ನಿರಾಕರಿಸಿರುವ ಮೂಲಕ ವಸ್ತ್ರಸಂಹಿತೆಯನ್ನು ಧಾರ್ಮಿಕ ಸಂಘರ್ಷದ ಸಮಸ್ಯೆಯಾಗಿ ಪರಿವರ್ತಿಸಲಾಗಿತ್ತು.

ಹೀಗೆ ಮುಸ್ಲಿಂ ಹೆಣ್ಣುಮಕ್ಕಳ ಬುರ್ಖಾ ಧಾರಣೆ ರಾಜಕೀಯ ಮತ್ತು ಧಾರ್ಮಿಕ ಪ್ರಶ್ನೆಯಾಗಿರುವಷ್ಟೇ ಬಹುಮುಖ್ಯವಾಗಿ ಅದು ಜೆಂಡರ್ ಪ್ರಶ್ನೆಯೂ ಆಗಿದೆ. ಸಾಮಾನ್ಯವಾಗಿ ಶಾಲಾ ಮಕ್ಕಳಿಗೆ ಸಮವಸ್ತ್ರ ಕಡ್ಡಾಯ ಮಾಡುವುದು ಹಿಂದಿನಿಂದಲೂ ರೂಢಿಯಲ್ಲಿದೆ. ನಾಲ್ಕು ದಶಕಗಳ ಹಿಂದೆ ನಾವೆಲ್ಲ ಶಾಲೆಗೆ ಹೋಗುವಾಗ ಹೆಣ್ಣುಮಕ್ಕಳು ಅರ್ಧ ಸ್ಕರ್ಟ್, ಲಂಗ ಮತ್ತು ಲಂಗ, ದಾವಣಿ – ಹೀಗೆ ವಸ್ತ್ರಗಳನ್ನು ಧರಿಸಿ ಶಾಲೆಗೆ ಹೋಗುತ್ತಿದ್ದೆವು. ಇಲ್ಲಿ ಸಮವಾಗಿ ಇದ್ದದ್ದು ಬಟ್ಟೆಯ ಬಣ್ಣ ಮಾತ್ರ. ಅಲ್ಲದೆ ಕಾಲೇಜು ವಿದ್ಯಾರ್ಥಿಗಳಿಗೆ ಸಮವಸ್ತ್ರವೇ ಇರಲಿಲ್ಲ. ಈಗಲೂ ಕೆಲವು ಕಾಲೇಜುಗಳಲ್ಲಿ ಸಮವಸ್ತ್ರವೇ ಇಲ್ಲ. ಕಾಲೇಜು ಮಕ್ಕಳಿಗೆ ಸಮವಸ್ತ್ರ ವಿಧಿಸುವುದು ಮಡಿವಂತಿಕೆಯ ಪ್ರಶ್ನೆಯೂ ಹೌದು. ಹೆಣ್ಣುಮಕ್ಕಳಿಗೆ ವಸ್ತ್ರಸಂಹಿತೆ ವಿಧಿಸುವುದು ಅವರ ದೇಹವನ್ನು ರಕ್ಷಿಸುತ್ತಿದ್ದೇವೆಂಬ ಹುಸಿ ನಂಬಿಕೆಯಿಂದ. ಇದನ್ನೊಂದು ವಿವಾದಾಸ್ಪದ ವಿಷಯವನ್ನಾಗಿಸಿ ಹೆಣ್ಣುಮಕ್ಕಳು ಶಿಕ್ಷಣ ಪಡೆಯುವುದೇ ದುಸ್ತರವಾಗುವಂತೆ ಮಾಡುವುದು ಒಂದು ಅಪರಾಧವಷ್ಟೇ. ಉನ್ನತ ಶಿಕ್ಷಣ ಸಚಿವ ಬಸವರಾಜ ರಾಯರೆಡ್ಡಿಯವರು 'ಹಿಂದೂ ಯುವತಿಯರು ಬೇಕಾದರೆ ಬುರ್ಖಾ ಧರಿಸಲಿ' ಎಂಬ ಪರಿಹಾರೋಪಾಯವನ್ನು ಕೊಟ್ಟಿರುವುದು ನಾಚಿಕೆಗೇಡು! ಅದರ ಬದಲಿಗೆ ಕಾಲೇಜು ಮಕ್ಕಳಿಗೆ ಸಮವಸ್ತ್ರವೇ ಬೇಡ ಎನ್ನುವ ವಿವೇಚನಾಯುತವಾದ ನಿರ್ಧಾರ ತೆಗೆದುಕೊಳ್ಳಬಹುದಿತ್ತು.




ಸೆಪ್ಟೆಂಬರ್ ೨೦೧೬ರ ಹೊಸತು ಮಾಸ ಪತ್ರಿಕೆ ಕರ್ನಾಟಕದಲ್ಲಿ ಅರಿವು ಮೂಡಿಸುವ ಪತ್ರಿಕೆಯಾಗಿದೆ. ಹದಿನಾರು ವರ್ಷಗಳಿಂದ ಉಪವಾಸ ಸತ್ಯಾಗ್ರಹ ನಿರತರಾಗಿದ್ದ ಇರೋಮ್ ಶರ್ಮಿಳಾ ಉಪವಾಸ ಅಂತ್ಯದ ಘಟನೆ; ಬೆಂಗಳೂರು ನಗರ ಅತಿಹೆಚ್ಚು ಮಳೆಯಿಂದ ಮನೆಗಳಿಗೆ ನೀರು ನುಗ್ಗಿದ ತಲ್ಲಣ ಮತ್ತು ಅನಾಹುತ. ಬ್ರೆಜಿಲ್‌ನ ರಿಯೋಡಿ ಜನೈರೋದಲ್ಲಿ ನಡೆಯುತ್ತಿರುವ ೨೦೧೬ರ ಒಲಿಂಪಿಕ್ಸ್ ಪಂದ್ಯದಾಟದ ಒಂದೆರಡು ಪದಕ ಬಿಟ್ಟರೆ ಕ್ರೀಡೆ ವಿಚಾರದಲ್ಲಿ ಭಾರತೀಯರು ಎಷ್ಟು ಹಿಂದೆ ಬಿದ್ದಿದೇವೆ ಎನ್ನುವ ಮನದುಗುಡ ಎಲ್ಲ ಮೆಚ್ಚುವಂಥದ್ದು. ಕರ್ನಾಟಕದ ಕಾರ್ಮಿಕ ಚಳುವಳಿ ನಡೆದುಬಂದ ದಾರಿ, ಟಿ.ವಿ. ಲೋಕ ಏಕಸ್ವಾಮ್ಯದತ್ತ ವಾಲುತ್ತಿರುವ ಟಿ.ವಿ. ವಾಹಿನಿಗಳ ಚಿಂತನೆ, ಬಿ.ಎಂ.ಶ್ರೀ. ಅವರ ಕನ್ನಡ ಭಾಷಾ ಚಿಂತನೆ ಮನದಾಳದ ವಿಚಾರದ ವಿಮರ್ಶೆ ಚೆನ್ನಾಗಿವೆ.

'ಹೊಸತು' ಪತ್ರಿಕೆಯ ಲೇಖಕರು, ಅರ್ಥ ಗರ್ಭಿತ ಲೇಖನಿಯಿಂದ, ಓದುಗರಿಗೆ ಉತ್ಸಾಹ, ಪ್ರೇರಣೆ, ಶ್ರದ್ಧೆ ಮೂಡಿಸಿರುವುದು ನೆಮ್ಮದಿ ತಂದಿದೆ.

ಬಳ್ಳಾರಿ **ಮರಿದೇವರ ಸಿದ್ದಪ್ಪ**

ಮಹಾತ್ಮ ಗಾಂಧೀಜಿ ಅವರನ್ನು ಕುರಿತ ನನ್ನ ಲೇಖನದ ಬಗ್ಗೆ (ಹೊಸತು, ಅಕ್ಟೋಬರ್ – ೨೦೧೬) ಎಂ. ಕೆ. ಧರ್ಮರಾಜ್ ಅವರು ಪ್ರತಿಕ್ರಿಯಿಸಿ (ನವೆಂಬರ್ – ೨೦೧೬) 'ಗಾಂಧೀಜಿ ಅವರು ವಿವೇಕಾನಂದರಿಂದ ಪ್ರಭಾವಿತರಾದರೆಂಬುದು ಮಿಥ್ಯಾ' ಎಂದು ಅಭಿಪ್ರಾಯ ಪಟ್ಟಿದ್ದಾರೆ. ಅವರು ಗಾಂಧೀಜಿಯವರ ಆತ್ಮಕತೆಯಲ್ಲಿನ ಮಾತುಗಳನ್ನು ಗೌರವದಿಂದ ಗಮನಿಸಬೇಕು.

ಧರ್ಮರಾಜ್ ಅವರು ಹೇಳುವಂತೆ ನಾನು ನನ್ನ ಲೇಖನದಲ್ಲಿ ಯಾರನ್ನೂ ವಿಜೃಂಭಿಸುವ ಗೋಜಿಗೆ ಹೋಗಿಲ್ಲ. ಸಕಾರಣವಾಗಿ, ಹಾಗೂ ಲೇಖನಕ್ಕೆ ಪೂರಕವಾಗಿ ವಿವೇಕಾನಂದರನ್ನ, ಪ್ರೊ॥ ಗಿಲ್ಬರ್ಟ್ ಮುರ್ರೆ ಅವರನ್ನ ಹಾಗೂ ಡಾ॥ ಲೋಹಿಯಾ ಅವರನ್ನ ಉಲ್ಲೇಖಿಸಿದ್ದೇನೆ. ಪ್ರಭಾವಿತರಾಗಲು ಮುಖತಃ ಭೇಟಿಯಾಗಬೇಕಾಗಿಲ್ಲ. ದಾರ್ಶನಿಕರು ಚಿರಂಜೀವಿಗಳು. ನಿತ್ಯ ವಸಂತದಂತೆ ಅವರು ಮಾತನಾಡುತ್ತಲೇ ಇರುತ್ತಾರೆ.

ಮುಖ್ಯವಾಗಿ ಧರ್ಮರಾಜ್ ಅವರು ಹೇಳುವಂತೆ ನಾನು ಸತ್ಯಕ್ಕೆ ಅಪಚಾರ ಮಾಡಿಲ್ಲ, ಇತಿಹಾಸವನ್ನು ತಿರುಚಿಲ್ಲ. ಬದಲಿಗೆ 'ಸತ್ಯ' ಸತ್ಯಸ್ಯಸತ್ಯವಾಗಿ ಪ್ರಕಟಗೊಳ್ಳುವಂತೆ ಯತ್ನಿಸಿದ್ದೇನೆ. ನಿರ್ಧಾರಕ್ಕೆ ಬರುವಾಗ ಧರ್ಮರಾಜ್ ಅವರು ದುಡುಕಬಾರದು.

ಹಾಸನ **ಜ. ಹೊ. ನಾರಾಯಣಸ್ವಾಮಿ**

(ಕಲ್ಕತ್ತಾದಲ್ಲಿದ್ದಾಗ ಫೆಬ್ರವರಿ ೧೯೨೧ರಲ್ಲಿ ಒಮ್ಮೆ ಗಾಂಧೀಜಿ ನಡೆದುಕೊಂಡೇ ಬೇಲೂರು ಮಠಕ್ಕೆ ಹೋಗಿದ್ದರು. ಅದು ಸ್ವಾಮಿ ವಿವೇಕಾನಂದರನ್ನು ಕಾಣಲು. ಆದರೆ ಅಂದು ವಿವೇಕಾನಂದರು ಮಠದಲ್ಲಿರಲಿಲ್ಲ. ನಗರಕ್ಕೆ ತೆರಳಿದ್ದರೆಂದು ಗಾಂಧೀಜಿಗೆ ತಿಳಿಯಿತು. ಅವರನ್ನು ಕಾಣಲು ಗಾಂಧೀಜಿ ಮತ್ತೆಂದೂ ಯತ್ನಿಸಲಿಲ್ಲ. ತಾವು ವಿವೇಕಾನಂದರನ್ನು ಭೇಟಿಯಾಗಲು ಸಾಧ್ಯವಾಗಲಿಲ್ಲವೆಂದು ನಂತರ ಗೋಖಲೆಯವರಿಗೆ ಗಾಂಧೀಜಿ ತಿಳಿಸಿದರು. ಈ ಪ್ರಕರಣವೊಂದನ್ನುಳಿದು ಗಾಂಧೀಜಿಯವರ ಕೃತಿಗಳಲ್ಲಿ ವಿವೇಕಾನಂದರ ಪ್ರಸ್ತಾಪವೆಲ್ಲೂ ಬಂದಿಲ್ಲವೆಂದು ತೋರುತ್ತದೆ. – **ಸಂ.**)

## ಬಿಪನ್ ಚಂದ್ರರ ಭೂತ ಮತ್ತು ಕೃತಿ ನಿಷೇಧ

ಭಾರತ ಕಂಡ ಅಪ್ರತಿಮ ಚರಿತ್ರಕಾರ ಬಿಪನ್ ಚಂದ್ರ ಅವರ **'ಕಮ್ಯುನಾಲಿಸಂ : ಎ ಪ್ರೈಮರ್'** ಎಂಬ ಕೃತಿಯ ಪ್ರಸರಣೆ ಮತ್ತು ಉತ್ಪಾದನೆಯನ್ನು – ನ್ಯಾಶನಲ್ ಬುಕ್ ಟ್ರಸ್ಟ್ ಹಿಂತೆಗೆದುಕೊಂಡಿದೆ. ಬಿಪನ್ ಚಂದ್ರ ನಮ್ಮನ್ನಗಲಿ ಒಂದು ವರ್ಷ ಕಳೆದರೂ ಕೂಡ ಅವರ




ವಿಚಾರದ ಭೂತ ಇನ್ನೂ ಬಲಪಂಥೀಯ ಉಗ್ರ ಗುಂಪುಗಳನ್ನು ಕಾಡುತ್ತಿದೆ. ಬಿಪನ್ ಚಂದ್ರ ಅವರ ಈ ಮೊದಲಿನ ಕೃತಿ, 'ಇಂಡಿಯಾಸ್ ಸ್ಟ್ರಗಲ್ ಫಾರ್ ಇಂಡಿಪೆಂಡೆನ್ಸ್'ನ ಒಂದು ಅಧ್ಯಾಯದಲ್ಲಿ ಬಿಪನ್ ಕ್ರಾಂತಿಕಾರಿಗಳನ್ನು 'ರೆವಲ್ಯೂಶನರಿ ಟೆರರಿಸ್ಟ್' ಎಂದು ಕರೆದಿದ್ದರು ಎಂಬ ಕಾರಣಕ್ಕೆ ಹಿಂದುತ್ವವಾದಿಗಳು ಈ ಮೊದಲು ತಕರಾರು ತೆಗೆದಿದ್ದರು. 'ಭಗತ್, ಆಜ಼ಾದ್ ಮೊದಲಾದವರನ್ನು ಟೆರರಿಸ್ಟ್ ಎಂದು ಬ್ರಿಟಿಷರು ಕರೆದಿದ್ದರು, ಆದರೆ ಅವರು ಬ್ರಿಟಿಷರಲ್ಲಿ ಭಯ ಹುಟ್ಟಿಸಿದ ಕಾರಣ ನಾವು ಅವರನ್ನು ರೆವಲ್ಯೂಶನರಿ ಟೆರರಿಸ್ಟ್ ಎಂದು ಕರೆದಿದ್ದು' ಎಂಬ ಸಮಜಾಯಿಷಿ ನೀಡಿದರೂ ಕೂಡ ಬಲಪಂಥ ಇದಕ್ಕೆ ಮಣಿಯದೇ ಪುಸ್ತಕ ನಿಷೇಧಕ್ಕಾಗಿ ಆಗ್ರಹಿಸಿದ್ದುವು.

'ಕಮ್ಯುನಾಲಿಸಂ : ಎ ಪ್ರೈಮರ್' ಕೃತಿ ಹಿಂದುತ್ವವಾದಿಗಳ ಕಣ್ಣು ಕೆಂಪಾಗಿಸಲು ಕಾರಣ ಇಷ್ಟೇ : ಆ ಕೃತಿಯಲ್ಲಿ ಬಿಪನ್ ಹೇಳುವುದು ಹೀಗೆ, "ಕೋಮುವಾದವೆಂದರೆ ಅದು ಧಾರ್ಮಿಕ ಮೂಲಭೂತವಾದ ಮತ್ತು ಅದೊಂದು ಸಿದ್ಧಾಂತವಾಗಿದೆ. ಇದನ್ನು ನಿವಾರಿಸಲು ನಾವು ಜನರ ಮನದಾಳದಿಂದಲೇ ಇದನ್ನು ಸಮೂಲೋತ್ಪಾಟನೆ ಮಾಡಬೇಕು. ಕೋಮುವಾದದ ವಿರೋಧವೆಂದರೆ, ಹಲವು ತಲೆಮಾರುಗಳಿಂದ ಭಾರತೀಯ ಸಮಾಜ ಇದನ್ನು ಪೋಷಿಸದಿರುವ ವಿಷಯದ ಗ್ರಹಿಕೆ ಮತ್ತು ತಿಳುವಳಿಕೆಯೇ ಆಗಿದೆ. ಕೋಮುವಾದದ ವಿರುದ್ಧ ರಾಜಕೀಯ ಮತ್ತು ಸೈದ್ಧಾಂತಿಕ ಹೋರಾಟಗಳೆರಡೂ ಅತಿ ಪ್ರಮುಖವಾದುದಾಗಿವೆ. ರಾಷ್ಟ್ರೀಯ ಸ್ವಯಂ ಸೇವಕ ಸಂಘದ ವಿರುದ್ಧ ಕೋಮುವಾದದ ಹೋರಾಟ ಕೂಡ ಇದೇ ನೆಲೆಯಲ್ಲಿಯೇ ಆಗಬೇಕು" ಎಂಬುದಾಗಿ. ಈಗ ಹೇಳಿ ಬಿಪನ್ ಹೇಳಿದ್ದು ಸುಳ್ಳಾ ? ಅಕ್ಷರಶಃ ಸತ್ಯವಾದ ಮಾತುಗಳು. ಆದರೆ ಸಂಘ ಪರಿವಾರ ಬೆಂಬಲಿತ ಎನ್.ಡಿ.ಎ. ಸರ್ಕಾರ ಈ ಕೃತಿಯನ್ನು ಈ ಉಲ್ಲೇಖದಿಂದ ನಿಷೇಧ ಮಾಡಿದೆ. ಇದರ ಮೂಲಕ ಕೇಂದ್ರ ಸರ್ಕಾರವು ಚರಿತ್ರಕಾರ್ತಿ ಶಿರೀನ್ ಮೂಸ್ವಿ ಹೇಳುವ ಹಾಗೆ, "ಕೋಮುವಾದವನ್ನು ಇಡೀ ರಾಷ್ಟ್ರದ ಅಧಿಕೃತ ತತ್ವವನ್ನಾಗಿ ಮಾಡಲು ಹೊರಟಿದೆ."

ಎನ್.ಬಿ.ಟಿ. ಇದನ್ನು ರೊಟೀನ್ ಎಂದು ಕರೆದಿದೆ. ಆದರೆ ಭಾರತದ ಚರಿತ್ರಕಾರರು ಮತ್ತು ಅಕಡಮಿಶಿಯನ್ಸ್ ಇದನ್ನು ವಿರೋಧಿಸಿ ಸಹಿ ಸಂಗ್ರಹ ಅಭಿಯಾನವನ್ನು ನಡೆಸಿದ್ದಾರೆ. ಅವರಿಗೆ ಬಿಪನ್ ಚಂದ್ರ ಚರಿತ್ರಕಾರರಾಗಿ ದೇಶದ ಸೆಕ್ಯುಲರ್ ಮತ್ತು ಪ್ರಜಾಸತ್ತಾತ್ಮಕ ವಿಚಾರಗಳನ್ನು ಯಾವುದೇ ರಾಜಿಯಿಲ್ಲದೇ ಪ್ರಚುರಪಡಿಸಿದ ಮತ್ತು ಆ ವಿಚಾರಗಳ ಪ್ರತಿನಿಧಿಯಂತಿದ್ದ ನೆಲೆ ಮತ್ತು ನಿಲುವುಗಳು ಬಹಳ ಗಂಭೀರವಾಗಿ ಕಂಡ ಕಾರಣದಿಂದಾಗಿ. ರೊಮಿಲಾ ಥಾಪರ್, ಇರ್ಫಾನ್ ಹಬೀಬ್, ಕೆ. ಎನ್. ಪಣಿಕ್ಕರ್, ಪ್ರಭಾತ್ ಪಟ್ನಾಯಕ್, ವಿವನ್ ಸುಂದರಂ, ಆದಿತ್ಯ ಮುಖರ್ಜಿ, ಮೃದುಲಾ ಮುಖರ್ಜಿ, ಡಿ. ಎನ್. ಝಾ ಮತ್ತು ಶಿರೀನ್ ಮೂಸ್ವಿಯಂತಹ ಸುಮಾರು ೧೫೦ಕ್ಕೂ ಹೆಚ್ಚು ವಿದ್ವಾಂಸರು ಇಂತಹ ಅರ್ಜಿಯ ಸಹಿದಾರರುಗಳಾಗಿದ್ದಾರೆ.

ಎನ್.ಬಿ.ಟಿ., ಭಾರತೀಯ ಸಾಹಿತ್ಯ ಮತ್ತು ವೈಚಾರಿಕ ಕೃತಿಗಳ ಮುದ್ರಣ, ಪ್ರಸಾರ ಮತ್ತು ಪ್ರಚಾರದಲ್ಲಿ ಗಣನೀಯವಾದ ಸೇವೆಯನ್ನು ಸಲ್ಲಿಸಿದೆ. ಬಹುಶಃ ಒಂದು ವಿಶ್ವಾತ್ಮಕವಾದ, ವೈವಿಧ್ಯದ ಮತ್ತು ಬಹುಭಾರತದ ಕನ್ನಡಿ ಕೂಡ ಹೌದು. ಭಾರತದ ಸರಿಸುಮಾರು ೨೫ಕ್ಕಿಂತಲೂ ಹೆಚ್ಚು ಭಾಷೆಗಳಲ್ಲಿ ಅದು ತನ್ನ ಕೃತಿ ಮತ್ತು ತರ್ಜುಮೆಗಳನ್ನು ತರುತ್ತಿದೆ. ವೈವಿಧ್ಯದ ವಸ್ತು ವಿಚಾರಗಳ ಪುಸ್ತಕಗಳ ಪ್ರಕಟಣೆಗಳ ಮೂಲಕ ಅಖಿಲ ಭಾರತ ನೆಲೆಯ ವೈಚಾರಿಕ ಸಂವಾದ ಸಾಧಿಸಲು ಎನ್.ಬಿ.ಟಿ. ಸ್ವಾತಂತ್ರ್ಯೋತ್ತರ ಕಾಲದಿಂದ ಶ್ರಮಿಸಿದೆ. ಸ್ವತಃ ಬಿಪನ್ ಚಂದ್ರ ಅವರೇ ಎನ್.ಬಿ.ಟಿ.ಯ ಅಧ್ಯಕ್ಷರಾಗಿದ್ದಾಗಲಂತೂ ಅದ್ಭುತವಾದ ಕೃತಿಗಳನ್ನು ಭಾರತದ ವಿವಿಧ ಪ್ರದೇಶ, ಭಾಷೆ ಮತ್ತು ವಸ್ತುಗಳಿಂದ ಆಯ್ಕೆ ಮಾಡಿ ಪ್ರಕಟಿಸಿದರು. ಆದರೆ ಈಗಿನ ಎನ್.ಡಿ.ಎ. ಸರ್ಕಾರದಿಂದ ಆಯ್ಕೆಯಾದ ಸಾಹಿತ್ಯ, ಚರಿತ್ರೆ ವಿಚಾರಗಳ ಬಗ್ಗೆ ಗಂಧಗಾಳಿ ಗೊತ್ತಿಲ್ಲದ ವ್ಯಕ್ತಿ ಸಾರಾಸಗಟಾಗಿ ಬಿಪನ್‌ರ ಈ ಪುಸ್ತಕವನ್ನು ಪ್ರಕಟಣೆಯಿಂದ ಹಿಂತೆಗೆದಿರುವುದು ಒಂದು ರಾಜಕೀಯ ಪಕ್ಷದ

ಐಡಿಯಾಲಜಿಯ ಪ್ರಕಟೀಕರಣದಂತೆ ಕಾಣಿಸುತ್ತಿದೆ. ಭಾರತಕ್ಕೆ ಇಂದು ಬೇಕಿರುವುದು ಇಂತಹ ಪ್ರಕ್ರಿಯೆ, ನಿಷೇಧವಲ್ಲ ಬದಲು ಮುಕ್ತವಾಗಿ ಎಲ್ಲವನ್ನೂ ಎಲ್ಲರೂ ಅಭಿಪ್ರಾಯಿಸಲು ಬೇಕಾದ ಸಂವಾದ ಸ್ಥಿತಿ.

'ಕಮ್ಯುನಾಲಿಸಂ : ಎ ಪ್ರೈಮರ್'ನ ಇಂಗ್ಲಿಷ್ ಮೂಲ ಕೃತಿಯು ಇಂದಿಗೂ ಲಭ್ಯವಾಗುತ್ತಿದೆ ಮತ್ತು ಆಂಗ್ಲ ಪ್ರಕಾಶನವೊಂದು ಅದನ್ನು ಹೊರತಂದಿದೆ. ಎನ್.ಬಿ.ಟಿ.ಯು ಹಿಂದಿ ಆವೃತ್ತಿಯನ್ನು ವಿನಾ ಕಾರಣ ಪ್ರಕಟಣೆಯಿಂದ ನಿಲ್ಲಿಸಿದೆ. ಎನ್.ಬಿ.ಟಿ.ಯ ಈ ನಿಲುವನ್ನು ದೆಹಲಿ ವಿಶ್ವವಿದ್ಯಾನಿಲಯದ ಕೋಮುವಾದೀ ರಾಜ ಕಾರಣದ ಜತೆಯಲ್ಲಿಟ್ಟು ನಾವು ನೋಡಬಹುದಾಗಿದೆ. ಒಂದು : ಸುಮಾರು ಮೂರು ವರ್ಷಗಳ ಹಿಂದೆ ದೆಹಲಿ ವಿಶ್ವವಿದ್ಯಾನಿಲಯದಲ್ಲಿ ಬಿ.ಎ. ಚರಿತ್ರೆ ವಿದ್ಯಾರ್ಥಿ ಗಳಿಗೆ ಪಠ್ಯವಾಗಿದ್ದ, ಎ. ಕೆ. ರಾಮಾನುಜನ್ ಅವರ, '೩೦೦ ಹಂಡ್ರಡ್ ರಾಮಾಯಣಾಸ್' ಕೃತಿಯ ನಿಷೇಧದ ಮೂಲಕ. ಎರಡು : ಕೆಲವು ತಿಂಗಳ ಹಿಂದೆ ಸುಮಾರು ೧೯೮೦ರಿಂದ ಇಲ್ಲಿಯವರೆಗೂ ಚರಿತ್ರೆ ವಿಭಾಗಕ್ಕೆ ಪಠ್ಯವಾಗಿದ್ದ, ಬಿಪನ್ ಚಂದ್ರ ಕೆ. ಎನ್. ಪಣಿಕ್ಕರ್–ಸುಚೇತಾ ಮಹಾಜನ್ – ಆದಿತ್ಯ ಮುಖರ್ಜಿ–ಮೃದುಲಾ ಮುಖರ್ಜಿ ಲಿಖಿತ, 'ಇಂಡಿಯಾಸ್ ಸ್ಟ್ರಗಲ್ ಫಾರ್ ಇಂಡಿಪೆಂಡೆನ್ಸ್' ಕೃತಿಯ ಹಿಂದಿ ಅನುವಾದದ ನಿಷೇಧದ ಮೂಲಕ. ಈ ಕೃತಿಯ ಹಿಂದಿ ಅವತರಣಿಕೆಯನ್ನು ದೆಹಲಿ ವಿಶ್ವವಿದ್ಯಾನಿಲಯವೇ ಹೊರತಂದಿತ್ತು, ಆದರೆ ಈಗ ಅದೂ ಕೂಡ ಪ್ರಕಟಣೆಯಿಂದ ನಿಂತಿದೆ.

ಬಹುಶಃ ಇದಕ್ಕಿಂತ ದೊಡ್ಡ ಅಸಹಿಷ್ಣುತೆ ಇನ್ನೊಂದಿಲ್ಲ. ಅಸಹಿಷ್ಣುತೆಯ ಒಂದು ಹಿಂಸಾತ್ಮಕ ಮಾದರಿಯೆಂದೇ ಇದನ್ನು ಬಗೆಯಬಹುದು. ನಮ್ಮನ್ನು ನಾವು ಕರೆದು ಕೊಳ್ಳುವ ಆಧುನಿಕ, ಉದಾರ ಮತ್ತು ಪ್ರಜಾಪ್ರಭುತ್ವೀಯ ಎನ್ನುವ ನೆಲೆಗಳ ಘೋರ ವಿಫಲತೆ ಮತ್ತು ವ್ಯಂಗ್ಯ ಕೂಡ ಇದಾಗಿದೆ. ಬಹುಶಃ ವಾಜಪೇಯಿ ಅವರ ಕಾಲದಲ್ಲಿ ಕೂಡ (ಜೇಮ್ಸ್ ಲೇನ್‌ನ 'ದಿ ಎಪಿಕ್ ಆಫ್ ಶಿವಾಜಿ' ಕೃತಿ ನಿಷೇಧ ಹೊರತುಪಡಿಸಿ) ಅವರ ಸರ್ಕಾರವು ಬಲಪಂಥೀಯತೆಯೊಂದಿಗೆ ಸಾಂಗತ್ಯ ಸಾಧಿಸಿದ್ದಾಗ್ಯೂ ಈ ರೀತಿಯ ಪ್ರಕರಣಗಳು ನಡೆದಿರಲಿಲ್ಲ. ಇದಕ್ಕಿಂತ ದೊಡ್ಡದಾದ ಭಯೋತ್ಪಾದನೆ, ದೇಶ ವಿರೋಧೀ, ಮುಕ್ತ ಅಭಿವ್ಯಕ್ತಿ ವಿರೋಧದ ನೆಲೆಯೊಂದಿದೆಯೇ ? ಬಹುಶಃ ಇಡೀ ಭಾರತವೇ ಯೋಚಿಸಬೇಕಾಗಿದೆ.

ಕುಂದಾಪುರ **ಮಾಣಿ ಕುಮಾರ್**

## ಎಲೆಗಳು !

ವೆರಿಯರ್ ಎಲ್ವಿನ್ ಬಗೆಗಿನ ಎಸ್. ಎಲ್. ಆನಂದರ ಲೇಖನ ಉಪಯುಕ್ತವಾದುದು. 'ಗೊಂಡ ಜನಾಂಗದ ಹಳ್ಳಿಯೊಂದರ ಬದುಕ'ನ್ನು ಕುರಿತ ಎಲ್ವಿನ್ನರ 'ಲೀವ್ಸ್ ಫ್ರಂ ದಿ ಜಂಗಲ್' (ಕಾಡಿನ ಎಲೆಗಳು) ಎಂಬ ದಿನಚರಿ ಅತ್ಯಂತ ಸ್ವಾರಸ್ಯಪೂರ್ಣವಾಗಿದ್ದು, ಅದನ್ನು ನಾನು 'ಎಲ್ವಿನ್ನರ ಎಲೆಗಳು' ಎಂದು ಕನ್ನಡಿಸಿದ್ದೇನೆ. (ಪುಸ್ತಕ ಇನ್ನೂ ಹೊರಬಂದಿಲ್ಲ.) ಅವರ ಆತ್ಮಕಥೆಯನ್ನು 'ವೆರಿಯರ್ ಎಲ್ವಿನ್ನರ ಗಿರಿಜನ ಪ್ರಪಂಚ' ಎಂಬ ಹೆಸರಿನಲ್ಲಿ ಎಚ್. ಎಲ್. ನಾಗೇಗೌಡರು ಭಾಷಾಂತರಿಸಿದ್ದಾರೆ. ವಿಶಿಷ್ಟ (ವಿಚಿತ್ರ ?) ವ್ಯಕ್ತಿ ಎಲ್ವಿನ್ !

ಮೈಸೂರು *ಸಿಪಿಕೆ*

ನವೆಂಬರ್ ೨೦೧೬ರ ಸಂಚಿಕೆಯಲ್ಲಿ ಅನೇಕ ವೈಚಾರಿಕ ಲೇಖನಗಳು ಪ್ರಕಟವಾಗಿರುವುದು ಸ್ವಾಗತಾರ್ಹ.

ಮೊದಲನೆಯದಾಗಿ, ಎಂ. ಅಬ್ದುಲ್ ರೆಹಮಾನ್ ಪಾಷರವರ 'ಮಾತೃಭಾಷೆಗಳ ಸಂರಕ್ಷಣೆ : ಸಾಧಕ, ಬಾಧಕಗಳು' ಎಂಬ ಲೇಖನದಲ್ಲಿ, ಪ್ರಪಂಚದಾದ್ಯಂತ ಅನೇಕ ಭಾಷೆಗಳು ಕಣ್ಮರೆಯಾಗುತ್ತಿವೆ ಎಂಬ ಗಂಭೀರ ವಾಸ್ತವತೆಯನ್ನು ತಿಳಿಸಿದ್ದಾರೆ. ಇಂದು, ಆಧುನಿಕ ನಾಗರಿಕ ಸಮಾಜಕ್ಕೆ ಅನೇಕ ಬುಡಕಟ್ಟು ಜನಾಂಗಗಳ ಭಾಷೆಗಳ ಪರಿಚಯ ಇಲ್ಲ ಎನ್ನುವುದು ಸತ್ಯ. ಬುಡಕಟ್ಟು ಜನಾಂಗಗಳ ಜೀವನಶೈಲಿ, ವಿಚಾರಗಳು ಮತ್ತು ಸಾಂಸ್ಕೃತಿಕ ಆಚರಣೆಗಳ ವೈವಿಧ್ಯತೆ. ನಮ್ಮ ಶಿಕ್ಷಣ ವ್ಯವಸ್ಥೆಯಿಂದ ಹೊರಗೆ ಉಳಿದಿದೆ. ಲೇಖಕರು ಸ್ಪಷ್ಟಪಡಿಸಿರುವಂತೆ, ಒಂದು ಭಾಷೆ ಬರೀ ಲಿಪಿ, ವ್ಯಾಕರಣ ಮಾತ್ರವಲ್ಲ, ಅದು ಒಂದು ಜನಾಂಗದ ವಿವೇಕ ಮತ್ತು ಅನುಭವಗಳ ಶ್ರೀಮಂತ ಭಂಡಾರ ಎನ್ನುವುದು ಮನನೀಯ ವಿಷಯವಾಗಿದೆ. ನಮ್ಮ ಮಕ್ಕಳಿಗೆ ಬುಡಕಟ್ಟು ಜನಾಂಗಗಳ ಜೀವನ ಮತ್ತು ಸಂಸ್ಕೃತಿಗಳ ಪರಿಚಯದ ಅಗತ್ಯವಿದೆ. ಲೇಖಕರು ಅನೇಕ ಭಾಷೆಗಳ ಅವನತಿಗೆ ಸಾಂದರ್ಭಿಕ ಕಾರಣಗಳನ್ನೂ ನೀಡಿದ್ದಾರೆ. ಒಂದು ಭಾಷೆಯನ್ನು 'ಮಾತೃಭಾಷೆ' ಎಂದು ಗುರುತಿಸುವ ಬದಲು 'ಮನೆ ಭಾಷೆ' ಎಂದು ಗುರುತಿಸುವುದು ಹೆಚ್ಚು ಸೂಕ್ತ ಎಂದು ವಾದಿಸಿದ್ದಾರೆ. ಲೇಖಕರ ಪ್ರಕಾರ, ಒಂದು ಮಗು ಭಾಷೆಯನ್ನು ತಾಯಿಯಿಂದ ಮಾತ್ರವಲ್ಲದೆ, ಕುಟುಂಬದ ಎಲ್ಲ ಸದಸ್ಯರ ಸಂಪರ್ಕದಿಂದ ಕಲಿಯುತ್ತದೆ ಎನ್ನುವುದು ನಾವು ಕಾಣಬಹುದಾಗಿದೆ.

ಎರಡನೆಯದಾಗಿ, ಡಾ॥ ರಾಜೇಗೌಡ ಹೊಸಹಳ್ಳಿ ಅವರು 'ನಾನು ಓದಿದ ಪುಸ್ತಕ' ಎಂಬ ಅಂಕಣದಲ್ಲಿ ಬೊಳುವಾರು ಮಹಮದ್ ಕುಂಞಿ ಅವರ 'ಓದಿರಿ' ಪುಸ್ತಕದ ಪರಿಚಯವನ್ನು ನೀಡಿದ್ದಾರೆ. ಕೃತಿಕಾರರ ಮಾತು 'ಯಾವುದೇ ಒಂದು ಧರ್ಮವನ್ನು ಅಥವಾ ಧರ್ಮ ಗ್ರಂಥವನ್ನು ಸಮರ್ಥಿಸುವ ಅಥವಾ ವಿರೋಧಿಸುವ ಮೊದಲು ಕನಿಷ್ಠ ಒಂದು ಬಾರಿಯಾದರೂ ಓದಿ ಕೊಳ್ಳುವುದು ಒಳಿತು' ಎನ್ನುವುದು ಸಮಂಜಸವಾಗಿದೆ. ಜನಸಾಮಾನ್ಯರಿಗೆ ಪರಿಚಯವಿಲ್ಲದ, ಇಸ್ಲಾಂ ಧರ್ಮದ ಅನೇಕ ವಿಚಾರಗಳನ್ನು ಪ್ರವಾದಿ ಮಹಮ್ಮದರ ಜೀವನ ವೃತ್ತಾಂತಗಳನ್ನು ಪುಸ್ತಕದ ಮುಖೇನ ತಿಳಿಸಿದ್ದಾರೆ. ಪುಸ್ತಕದಲ್ಲಿ, ಸಮಾಜ ಸುಧಾರಕ ಬಸವಣ್ಣನವರ ವಚನಗಳಿಗೂ ಮತ್ತು ಇಸ್ಲಾಂ ಧರ್ಮ ನೀಡುವ ಅನೇಕ ಆದೇಶಗಳಿಗೂ ಇರುವ ಸಾಮ್ಯತೆಯನ್ನು ಗುರುತಿಸಿದ್ದಾರೆ. ಪುಸ್ತಕ ಪರಿಚಯ ಉಪಯುಕ್ತವಾಗಿದೆ.

*ಬೆಂಗಳೂರು* ***ಶಂಕರನಾರಾಯಣ***






ಖ್ಯಾತ ಲೇಖಕ ಎಸ್. ಆರ್. ಗೌತಮ್ ಅವರು ರಚಿಸಿ ನವಕರ್ನಾಟಕ ಪ್ರಕಟಿಸಿರುವ 'ನಯಾಗರಕ್ಕೆ ಐನೂರು ಮೈಲಿ' ಹಾಗೂ 'Five Hundred Miles to Niagara' ಈ ಎರಡು ಪುಸ್ತಕಗಳ ಬಿಡುಗಡೆ ಸಮಾರಂಭವು ದಿನಾಂಕ ೨೦-೧೧-೨೦೧೬ರಂದು ನಗರದ ಜನಾರ್ದನ ಹೋಟೆಲ್‌ನಲ್ಲಿ ನಡೆಯಿತು. ನಿವೃತ್ತ ನ್ಯಾಯಮೂರ್ತಿ ಶ್ರೀ ಎ. ಜೆ. ಸದಾಶಿವ ಅವರು ಸಮಾರಂಭದ ಅಧ್ಯಕ್ಷತೆ ವಹಿಸಿ ಕೃತಿಗಳನ್ನು ಅನಾವರಣಗೊಳಿಸಿದರು. ಬೆಂಗಳೂರು ಕೃಷಿ ವಿಶ್ವವಿದ್ಯಾಲಯದ ವಿಶ್ರಾಂತ ಕುಲಪತಿಗಳಾದ ಪ್ರೊ॥ ಜಿ. ಕೆ. ವೀರೇಶ್ ಅವರು ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು. ವೇದಿಕೆಯಲ್ಲಿ ನವಕರ್ನಾಟಕ ಪ್ರಕಾಶನದ ಕಾರ್ಯನಿರ್ವಾಹಕ ನಿರ್ದೇಶಕರಾದ ಶ್ರೀ ಎ. ರಮೇಶ್ ಉಡುಪ ಹಾಗೂ ಲೇಖಕ ಶ್ರೀ ಎಸ್. ಆರ್. ಗೌತಮ್ ಅವರು ಉಪಸ್ಥಿತರಿದ್ದರು.



# ಭಗವದ್ಗೀತೆ : ಒಂದು ಅವಲೋಕನ

# ೪. ನಿಷ್ಕಾಮಕರ್ಮವೆಂಬ ಮಿಥ್ಯೆ

**ಜಿ. ರಾಮಕೃಷ್ಣ**

**ಗೊಂದಲಕ್ಕೆ ಸಿಲುಕಿರುವ ವಾಸ್ತವ ಪ್ರಪಂಚದ ಸನ್ನಿವೇಶಗಳನ್ನು ಗೌಣವಾಗಿಸಿದರೆ ಸಂಘರ್ಷವನ್ನು ನಿವಾರಿಸಲಾಗದಿದ್ದರೂ ಮೊನಚನ್ನು ಕಡಿಮೆ ಮಾಡಬಹುದು. ಆದ್ದರಿಂದ ಗೀತೆಯು ಮೂರ್ತವಾದ ಪ್ರಶ್ನೆಗಳಿಗೆ ಅಮೂರ್ತತೆಯ ಕೋಟೆಯನ್ನು ಕಟ್ಟಲು ಹವಣಿಸುತ್ತದೆ.**

**ಮೊ**ದಲನೆಯ ಅಧ್ಯಾಯದ ಮೂರ್ತ ಪ್ರಶ್ನೆಗಳಿಗೆ ಗೀತೆಯ ಉಳಿದ ಹದಿನೇಳು ಅಧ್ಯಾಯಗಳು ಉತ್ತರ ಕೊಡುವ ಗೋಜಿಗೆ ಹೋಗಿಲ್ಲ. ಕೊಟ್ಟಿರುವುದೆಲ್ಲಾ ಅಮೂರ್ತ ಉತ್ತರಗಳು. ಗೀತೆಯು ಇದನ್ನು ನಿಭಾಯಿಸಿರುವುದು ಹೇಗೆ ? ರವೀಂದ್ರನಾಥ ಠಾಕೂರರು ಇದಕ್ಕೊಮ್ಮೆ ವಿವರಣೆ ನೀಡಿದ್ದರು. ಪ್ರಶ್ನಿಸುವವನನ್ನು ಎತ್ತರಕ್ಕೆ ಕೊಂಡುಹೋಗಿಬಿಟ್ಟರೆ ಆಗ ಅವನಿಗೆ ವಾಸ್ತವವು ಸ್ಫುಟವಾಗಿ ಕಾಣುವುದಿಲ್ಲ, ಹಿಡಿತಕ್ಕೆ ಸಿಕ್ಕುವುದಿಲ್ಲ. ಸಂಬಂಧಗಳು ವೈಯಕ್ತಿಕ ಆಯಾಮ ದಿಂದ ದೂರವಾಗುತ್ತವೆ, ವಾಸ್ತವವು ಮಸುಕಾಗುತ್ತದೆ. ಬೆಲೆ ಏರಿಕೆಯಿಂದ ಖಿನ್ನರಾಗಿದ್ದೀರಾ? ಬನ್ನಿ, ಕದಂಬೋತ್ಸವದಲ್ಲಿ ರಂಜನೆ ಪಡೆಯಿರಿ ! ಇಲ್ಲವೆ ಹಂಪಿ ಉತ್ಸವದಲ್ಲಿ ತಲ್ಲೀನರಾಗಿ ! ಟಾಗೋರ್ ಅವರಿಗೆ ಇದು ಗೋಚರಿಸಿದ್ದು ಮೊದಲ ಮಹಾಯುದ್ಧದ ತರುವಾಯದಲ್ಲಿ ಪರ್ಷಿಯಾ ಮೇಲೆ (ಇಂದಿನ ಇರಾನ್) ವಿಮಾನದಲ್ಲಿ ಹಾರಿಹೋಗುತ್ತಿದ್ದಾಗ. ಬ್ರಿಟನ್ನಿನ ವಾಯುಪಡೆ ಪರ್ಷಿಯಾದ ಹಳ್ಳಿಗಳ ಮೇಲೆ ಬಾಂಬುಗಳನ್ನು ಸುರಿಸಿ ಜೀವಗಳನ್ನು ಹಾಗೂ ಅವುಗಳ ನೆಲೆಗಳನ್ನು ಧ್ವಂಸ ಮಾಡಿದ್ದಿತು. ಹಾಗೆ ಮಾಡಲು ವಾಯುಪಡೆಯವರಿಗೆ ಮನಸ್ಸು ಹೇಗೆ ಬಂತು ? ವಾಸ್ತವ ಚಿತ್ರ ಅವರಿಗೆ ಕಾಣುತ್ತಿರಲಿಲ್ಲ. ಊರು, ಮನೆ, ಜನ, ದನ, ಯಾವುದೂ ಸ್ಪಷ್ಟವಾಗಿ ಗೋಚರವಲ್ಲದಾಗ ಬಾಂಬು ಸುರಿಸುವುದು ಸುಲಭ. ಎದುರಿಗೆ ನಿಂತು ತಲೆ ಕತ್ತರಿಸುವುದೇ ಬೇರೆ, ಹಿರೋಷಿಮಾದ ಮೇಲೆ ಪರಮಾಣು ಬಾಂಬು ಬೀಳಿಸುವುದೇ ಬೇರೆ. ಪರ್ಷಿಯಾ ನೋಡಿದಾಗ ಭಗವದ್ಗೀತೆಯಲ್ಲಿ ಭಗವಾನನ ತಂತ್ರ ಟಾಗೋರರಿಗೆ ಅರ್ಥವಾಯಿತಂತೆ. ಅವರ ಮಾತುಗಳನ್ನೇ ನೋಡೋಣ: "...ವಾಸ್ತವದೊಡನೆ ಮಾನವನಿಗೆ ಸ್ವಾಭಾವಿಕ ನೆಂಟಸ್ತನವಿದೆ. ಅದೇನಾದರೂ ಮಸುಕಾದರೆ ಅವನಿಗೆ ಯಾವುದರ ಬಗ್ಗೆ ಒಲವು ಇರುತ್ತದೋ ಅದು ಅದೃಶ್ಯವಾಗಿಬಿಡುತ್ತದೆ. ಗೀತೆಯ ಧೋರಣೆ ಮತ್ತು ಉಪದೇಶಗಳು ಅಂತಹ ಒಂದು 'ವಿಮಾನ'. ಅರ್ಜುನನ ಮನಸ್ಸು ಕನಿಕರದಿಂದಾಗಿ ಕೋಮಲವಾಗಿದೆ. ಆದರೆ ಅದನ್ನು ಎಷ್ಟೆತ್ತರಕ್ಕೆ ಕೊಂಡೊಯ್ಯಲಾಯಿತೆಂದರೆ ಅಲ್ಲಿಂದ ಯಾವುದೂ ಸ್ಪಷ್ಟವಾಗಿ ಗೋಚರಿಸದಂತಾಯಿತು : ಕೊಲ್ಲುವವನು ಯಾರು, ಕೊಲ್ಲಲ್ಪಡುವವನು ಯಾರು, ನಿನ್ನ ನೆಂಟರು ಇಷ್ಟರು ಯಾರು, ಯಾರು ನಿನ್ನ ಪರಕೀಯರು, ಯಾವುದೂ ತಿಳಿಯದಾಯಿತು. ತನ್ನ ಶಸ್ತ್ರಾಗಾರದಲ್ಲಿ ಮಾನವ ಇಂತಹ ಅನೇಕ 'ವಿಮಾನ'ಗಳನ್ನು ಇಟ್ಟುಕೊಂಡಿದ್ದಾನೆ. ಅವನ್ನು ಸಿದ್ಧಾಂತಗಳಿಂದ ತಯಾರಿಸಲಾಗುತ್ತದೆ. ತಾನು ಧಾಳಿ ನಡೆಸಿ ದೋಚ ಬೇಕೆಂದಿರುವುದನ್ನು ದೋಚಲು ಅನುವು ಮಾಡಿ ಕೊಡಲು ಅವನ ಈ ನೀತಿಗಳು ವಾಸ್ತವವನ್ನು ಮುಚ್ಚಿಹಾಕಿಬಿಡುತ್ತವೆ. ಅಂತೆಯೇ ಅವನ ಸಾಮಾಜಿಕ ಮತ್ತು ಧಾರ್ಮಿಕ ತತ್ತ್ವಗಳು ಗಾಳಿಯಲ್ಲಿ ತೂರಿಹೋಗುತ್ತವೆ. ಏನಾದರೂ ವಿನಾಶವು ತನ್ನ ಮೇಲೆರಗಿದಾಗ ಅಷ್ಟು ಎತ್ತರಕ್ಕೇರಿರುವ ಅವನಿಗೆ ಅಲ್ಲಿಂದ ದೊರೆಯುವ ಒಂದೇ ಸಾಂತ್ವನವೆಂದರೆ 'ನ ಹನ್ಯತೇ ಹನ್ಯಮಾನೇ ಶರೀರೇ' (ಶರೀರವು ಕೊಲ್ಲಲ್ಪಟ್ಟಾಗ ಅವನು ಕೊಲ್ಲಲ್ಪಡುವುದಿಲ್ಲ)."

ಆತ್ಮವು ನಿತ್ಯ, ಅದು ಹತ್ಯೆಗೆ ಒಳಗಾಗುವುದಿಲ್ಲ ಎಂಬುದು ಭಗವಾನನ ಘೋಷಣೆ. ಅದನ್ನು ನಿಜವೆಂದೇ ಭಾವಿಸಿಕೊಂಡರೂ ಶರೀರವಂತೂ ಹನನಕ್ಕೆ ಸಿಲುಕಿತಲ್ಲಾ, ಹಾಗಿದ್ದರೆ ಅದಕ್ಕೇನೂ ಸ್ಥಾನವೇ ಇಲ್ಲವೇ ? ಹೇಗೂ ಯಾರೂ ಕೊಲ್ಲಲ್ಪಡುವುದಿಲ್ಲ, ಕೇವಲ ಶರೀರವಷ್ಟೇ ನಷ್ಟವಾಗುತ್ತದಲ್ಲವೇ ? ಹಾಗಿದ್ದರೆ ಕುರುಕ್ಷೇತ್ರಕ್ಕೆ ಅನ್ವಯವಾಗುವ ಸತ್ಯವನ್ನು ಬೆಂಗಳೂರಿನ ಗಾಂಧಿಬಜಾರಿಗೂ ಅನ್ವಯಿಸಿಬಿಡಬಹುದಲ್ಲ ! ಗೀತೆಯ ಕರ್ತೃವು ಆ ಪ್ರಶ್ನೆಯನ್ನು ಅರ್ಜುನನಿಂದ ಕೇಳಿಸಲಿಲ್ಲ. ಆದರೆ ಗೀತೆಯ ಓದುಗರು ಕೇಳಬಾರದೆ ? ಗೀತೆಯನ್ನು ರಚಿಸಿದ ತತ್ತ್ವಶಾಸ್ತ್ರಜ್ಞನು ಬಹಳ ಜಾಣತನದಿಂದ ಭಗವಾನನ ಮೂಲಕ ಅರ್ಜುನನಿಗೆ ಮಂಕು ಹಿಡಿಸುತ್ತಾನೆ. ಅವನ ಪ್ರಶ್ನೆಗಳು ಅಸಂಗತ, ಅನವಶ್ಯಕ, ಎನಿಸಿಬಿಡುತ್ತಾನೆ. ಆತ್ಮವು 'ಶಾಶ್ವತ', ಶರೀರ 'ನಶ್ವರ'; ಅಂತೆಯೇ ಸಾಮಾಜಿಕ ವ್ಯವಸ್ಥೆಯೂ ನಶ್ವರ. "ಆದ್ದರಿಂದ ವರ್ಣವ್ಯವಸ್ಥೆ ಮುಂತಾದ ಪ್ರಶ್ನೆಗಳನ್ನೆತ್ತುವುದೇ ಮೂಢತನವಲ್ಲವೇ, ನನ್ನ ಭಕ್ತಾಗ್ರೇಸರ ಅರ್ಜುನ ?" ಎನ್ನುವ ಶೈಲಿಯಲ್ಲಿ ತಕರಾರೆತ್ತುವ ಜನರನ್ನು ಅಜಾಗರೂಕರನ್ನಾಗಿಸಿ ದಂಗುಮಾಡಿಬಿಡುತ್ತಾನೆ ಗೀತೆಯ ಕರ್ತೃ. "(ಶರೀರವುಳ್ಳ) ಆತ್ಮವನ್ನು ಶಸ್ತ್ರಗಳು ಕೊಲ್ಲುವುದಿಲ್ಲ, ಬೆಂಕಿಯು ಸುಡುವುದಿಲ್ಲ. ನೀರು ಮತ್ತು ಗಾಳಿ ಸಹ ಅದಕ್ಕೇನೂ ಮಾಡಲಾರವು" ಎನ್ನುತ್ತಾನೆ ಭಗವಾನ್. ಗೀತೆಯು ಲೋಕಾಯತರ ದೇಹಾತ್ಮವಾದವನ್ನು ನಿರಾಕರಿಸುವಷ್ಟೇ ಸಲೀಸಾಗಿ ದೇಹವನ್ನೂ ನಿರಾಕರಿಸಿ ಬಿಡುವುದು ಆಶ್ಚರ್ಯಕರವಾಗಿದೆ. ಗೀತೆಯ ಕರ್ತೃ ಅರ್ಜುನನಿಂದ ಕೇಳಿಸಬೇಕಾಗಿದ್ದ ಮರುಪ್ರಶ್ನೆ ಇದು : "ಹಾಗಾದರೆ ಭಗವಾನ್, ಅವರನ್ನು ಕೊಂದರೆ ಏನೂ ಆಗುವುದಿಲ್ಲವೆಂದಲ್ಲವೆ ನಿನ್ನ ಮಾತು ? ಅದು ಸರಿ ಯಾದರೆ, ಅವರನ್ನು ಕೊಲ್ಲುವ ಯತ್ನವನ್ನಾದರೂ ಏಕೆ ಮಾಡಬೇಕು, ಹೇಗೂ ಅವರನ್ನು ಕೊಲ್ಲಲಾಗು ವುದಿಲ್ಲ ಅಲ್ಲವೇ ?" ಭಗವಾನನಿಗೆ ಅಂತಹ ಪ್ರಶ್ನೆಗಳು ಎದುರಾಗುವುದಿಲ್ಲ. ಅದಕ್ಕೆ ಬದಲಾಗಿ ಅರ್ಜುನನಿಗೆ ಎಂತೆಂಥವೋ ಆಮಿಷಗಳನ್ನು ಒಡ್ಡಿ, ಅವನ ಹೆಮ್ಮೆ–ಚಾರಿತ್ರ್ಯ–ಕರ್ತವ್ಯ–ಕ್ಷತ್ರಿಯ ಧರ್ಮ–ಸಾಮ್ರಾಜ್ಯ ಮುಂತಾದ 'ಅಹಂ'ಗಳಿಗೆ ಸೊಪ್ಪುಹಾಕ ಲಾಗುತ್ತದೆ : "ನಿನ್ನಂಥವರಿಗೆ ಈ ಹತಾಶೆಯು ಶೋಭಿಸುವುದಿಲ್ಲ ಬಿಡು" (೨.೩), "ಇದು ಅನಾರ್ಯರ ನಡವಳಿಕೆಯಾಗಿಬಿಡುತ್ತದೆ, ನಿನ್ನ ಕೀರ್ತಿಯೆಲ್ಲಾ ಮಣ್ಣು ಪಾಲಾಗುತ್ತದೆ" (೨.೨), ಇತ್ಯಾದಿ. "ಆದರೆ ಭೀಷ್ಮ–ದ್ರೋಣರಂತಹ ಪೂಜನೀಯರಿದ್ದಾರಲ್ಲ, ಅವರನ್ನು ಹೇಗೆ ಕೊಲ್ಲುವುದು ?" ಹಿಡಿಂಬೆಯಂತಹ ಅಥವಾ ಕಿರಾತಕನಂತಹ ವ್ಯಕ್ತಿಯಾದರೆ ಭೀಮಾರ್ಜುನರಿಗೆ ಈ ಪ್ರಶ್ನೆ (೨.೪) ಬಾಧಿಸುವುದಿಲ್ಲ. ಅಲ್ಲದೆ "ಗೆಲ್ಲುತ್ತೇವೋ, ಇಲ್ಲವೋ, ಹೇಗೆ ಹೇಳುವುದು ? ಪ್ರಮುಖವಾಗಿ ನಾನು ಕೊಲ್ಲಬೇಕಾದ್ದು ಧೃತರಾಷ್ಟ್ರನ ಸಂತತಿಯವರನ್ನು, ಅಂದರೆ ನಮ್ಮವರನ್ನು. ನಾನು ದಿಙ್ಮೂಢನಾಗಿ ನಿನ್ನಲ್ಲಿ ಶಿಷ್ಯತ್ವ ವಹಿಸುತ್ತೇನೆ. ನೀನೇ ದಾರಿ ತೋರು" (೨.೫–೭) ಎನ್ನುತ್ತಾನೆ ಅವನು.

ಗೀತೆಯ ಕರ್ತೃವು ಇಲ್ಲಿಂದ ಅಮೂರ್ತ ಸಂಗತಿಗಳ ಸರಪಳಿಯನ್ನು ಹೆಣೆಯಲಾರಂಭಿಸುತ್ತಾನೆ. ಅರ್ಜುನ – ಅರ್ಥಾತ್, ವ್ಯವಸ್ಥೆಯ ಬಗ್ಗೆ ಪ್ರಶ್ನೆಗಳನ್ನೆತ್ತುವವನು – ನಿಜಕ್ಕೂ ಮೂಢ ಎನಿಸಿಬಿಡುತ್ತಾನೆ. "ಮನಸ್ಸಿನ ಕ್ಲೇಶವನ್ನು ಕಳೆದುಕೋ" ಎನ್ನುವುದಷ್ಟೇ ಉಪದೇಶ (೨.೧೧). ಪರಮಾಣು ಬಾಂಬನ್ನು ನಿರ್ಮಿಸಲು ಅಮೆರಿಕಾದ ಲೋಸಲ್ಮೋಸ್‌ನಲ್ಲಿ ಒಟ್ಟುಗೂಡಿಸಲಾಗಿದ್ದ

ವಿಜ್ಞಾನಿಗಳ ಆತಂಕಕ್ಕೆ ನೀಡಲಾದ ಉಪದೇಶವೂ ಅದೇ. ಭಗವಾನನ ಇಡೀ ಸಂದೇಶವನ್ನು ಒಂದು ವಾಕ್ಯದಲ್ಲಿ ಹೇಳಬಹುದೇನೋ : "ಯೋಧರ ಸಾವು ಎಂಬ ಮಾತು ಅರ್ಥರಹಿತ, ಏಕೆಂದರೆ ಆತ್ಮವು ನಿತ್ಯ. ಇಷ್ಟಕ್ಕೂ ಅವರೆಲ್ಲಾ ಆಗಲೇ ಸತ್ತಿದ್ದಾರೆ. ನೀನು ನಿಮಿತ್ತ ಮಾತ್ರ." ಸತ್ತಿರುವವರನ್ನು ಕೊಲ್ಲಲು ನಿಮಿತ್ತವಾದರೂ ಏಕೆ ಬೇಕು ? ಅಂದರೆ, ಗೀತೆಯ ಎರಡನೆಯ ಅಧ್ಯಾಯವು ಮೊದಲನೆಯ ಅಧ್ಯಾಯದ ಪ್ರಶ್ನೆಗಳನ್ನು ಮೂರ್ತವಾಗಿ ಕೈಗೆತ್ತಿಕೊಳ್ಳುವುದಿಲ್ಲ. ಗೀತೆಯ ಕರ್ತೃವಿಗೆ ಅವನ ಕೃತಿಯ ಮೂಲೋದ್ದೇಶ ಬೇರೆಯೇ ಇದೆ, ಅದನ್ನು ಪ್ರತಿಪಾದಿಸುವುದು ಮುಖ್ಯ ಎಂಬ ಅರಿವಿದೆ. ಈ ಕರ್ತೃವಿನ ವಿಚಾರಮಂಡನೆಯ ವಿಧಾನ ಆಕರ್ಷಣೀಯವಾಗಿದೆ, ಆದರೆ ಅವನ ಇಂಗಿತಗಳು ಅತಾರ್ಕಿಕವಾಗಿರುವುದೂ ಉಂಟು. ಒಂದೆರಡು ಉದಾಹರಣೆಗಳನ್ನು ನೋಡೋಣ: "ಈ ಶರೀರವುಳ್ಳವನಿದ್ದಾನಲ್ಲ, ಅವನ ದೇಹವು ಹಲವು ಹಂತಗಳನ್ನು ದಾಟುತ್ತಿರುತ್ತದೆ; ಬಾಲ್ಯ, ಯೌವನ, ಮುದಿತನ ಹೀಗೆ. ಅಂತೆಯೇ ಅವನಿಗೆ ದೇಹಾಂತರ ಪ್ರಾಪ್ತಿಯೂ ಉಂಟು. ಅದಕ್ಕೆ ಹಿಂಜರಿಕೆ ಏಕೆ ?" (ಗೀತೆ ೨.೧೩). ಇಲ್ಲಿನ ಚಮತ್ಕಾರ ನೋಡಿ, ಹೇಗಿದೆ ? ಬಾಲ್ಯ–ಯೌವನ–ಮುದಿತನಗಳು ಪ್ರತ್ಯಕ್ಷಸಿದ್ಧ. ಆದರೆ ದೇಹಾಂತರ ಪ್ರಾಪ್ತಿಯು ಪ್ರತ್ಯಕ್ಷಸಿದ್ಧವಲ್ಲ. ಒಂದು ಭಾಗವು ವಾಸ್ತವವಾದ್ದರಿಂದ ಇನ್ನೊಂದೂ ಅಷ್ಟೇ ವಾಸ್ತವ; ಅದು ಪ್ರಶ್ನಾರ್ಹವಲ್ಲವೆಂಬಂತೆ ಚಿತ್ರಿಸುತ್ತಾ ಗೀತೆಯ ಕರ್ತೃವು ತರ್ಕಾತೀತನಾಗಿ ಬಿಡುತ್ತಾನೆ. ಕೇಳುಗ ಆ ಬಗ್ಗೆ ಚಕಾರವೆತ್ತುವುದಿಲ್ಲ. ಮುದಿತನ ಆದಮೇಲೆ ಸಾವು ಎಂದಿರಬಹುದಿತ್ತು; ಆದರೆ ಗೀತೆಯ ಕರ್ಮಫಲ ವಾದಕ್ಕೆ ಪುನರ್ಜನ್ಮದ ಕಲ್ಪನೆ ಅಗತ್ಯವಾದ್ದರಿಂದ ಅದು ನಿಶ್ಚಿತವೆಂಬಂತೆ 'ದೇಹಾಂತರ ಪ್ರಾಪ್ತಿ'ಯನ್ನು ಊಹಿಸಿಬಿಟ್ಟಿದೆ. ನಂತರ ಇನ್ನೊಂದು ನೋಡಿ : "ಹಳೆಯ ಬಟ್ಟೆಗಳು ಜೀರ್ಣವಾಗಿ ಹೋದಾಗ ಅವನ್ನು ಬಿಸುಟು ಹೊಸವನ್ನು ಧರಿಸುತ್ತೇವೆ. ಅಂತೆಯೇ ಶರೀರಿಯು ಜೀರ್ಣವಾದ ಶರೀರವನ್ನು ತೊರೆದು ಹೊಸ ಶರೀರವನ್ನು ಪ್ರವೇಶಿಸುತ್ತಾನೆ" (೨.೨೨). ಇವತ್ತು ಯಾರಾದರೂ ಇದನ್ನು ಹೇಳಿದರೆ ಚೇಷ್ಟೆಗಾದರೂ ಹೀಗೆ ಪ್ರತಿಕ್ರಿಯಿಸಬಹುದು: "ಅಯ್ಯಾ ಭಗವಾನ್, ನೀನೆಲ್ಲಿದ್ದೀಯೆ ? ನಮ್ಮೂರಿನಲ್ಲಿ ದರಿದ್ರವಾದ ಹರಿದ ಬಟ್ಟೆಗಳನ್ನೇ ಇನ್ನೂ ತೊಡುತ್ತಿದ್ದೇವೆ ! ಅದೆಲ್ಲೋ ಮುಂಬೈನ ಬಾಂದ್ರಾದಲ್ಲಿ ಸಿನಿಮಾ ನಟಿಯರಿದ್ದಾರಂತೆ, ಅವರಿಗೆ ಬಟ್ಟೆ ಎಂದರೆ ಅಸಹ್ಯ, ಆದ್ದರಿಂದ ಅವರು ಕನಿಷ್ಠ ಬಟ್ಟೆಯನ್ನು ತೊಡುತ್ತಾರೆ. ನಿನಗಿದು ತಿಳಿಯದೇ ?" ಅದಿರಲಿ, ಹರಿದ ಬಟ್ಟೆಯ ಬದಲಾಗಿ ಹೊಸ ಬಟ್ಟೆ ಧರಿಸುತ್ತೇವೆಂಬುದು ಆತ್ಮವು ಒಂದು ಶರೀರವನ್ನು ಒಗೆದು ಬೇರೊಂದು ಶರೀರವನ್ನು ಪ್ರವೇಶಿಸುತ್ತದೆ ಎಂಬುದಕ್ಕೆ ಪುರಾವೆಯಲ್ಲ. ಆದರೆ ಅಷ್ಟು ಪುರಾವೆ ಸಾಕೆಂಬಂತೆ ಗೀತೆಯು ಮುಗ್ಧ ಮಾತುಗಳನ್ನು ಕೇಳುಗನ ಮೇಲೆ ಹೇರುತ್ತದೆ. ಉಪಮೆಯು ತರ್ಕವಲ್ಲ, ಹೇಳುವುದನ್ನು ಮನಮುಟ್ಟುವಂತೆ ಹೇಳಲು ಆಲಂಕಾರಿಕ ಭಾಷೆಯ ಪ್ರಯೋಗವಿದೆ. ಸಂವಹನದ ಕ್ರಮದಲ್ಲಿ ಅದೊಂದು ಚಮತ್ಕಾರ, ಆದರೆ ಅದು ಏನನ್ನೂ ಸಾಧಿಸಿ ತೋರಿಸುವುದಿಲ್ಲ. ಉದಾಹರಣೆಗೆ, ಉಪಮೆ ಇರುವ ಒಂದು ವಾಕ್ಯ ನೋಡಿ : "ಧೀರನು ಯುದ್ಧದಲ್ಲಿ ಕಾದಾಡಿ ದೇವರಂತೆ ಸತ್ತ." ಇದರಲ್ಲಿ ಎಷ್ಟೊಂದು ಊಹೆಗಳಿವೆ ! ದೇವರಿದ್ದಾನೆ, ಅವನು ಸಾಯುತ್ತಾನೆ, ಸಾಯುವುದಕ್ಕೆ ಅವನದೊಂದು ವಿಧಾನವಿದೆ, ಧೀರನಿಗೆ ಆ ವಿಧಾನ ಗೊತ್ತಿದೆ, ಇವೆಲ್ಲಾ ಆ ವಾಕ್ಯದಿಂದ ಸೂಚಿತವಾಗುತ್ತವೆ. ಉಪಮೆಯು ಧೀರನ ಬಗ್ಗೆ ಏನನ್ನೋ ಹೇಳುತ್ತದೆಯೇ ಹೊರತು ದೇವರಿದ್ದಾನೆ, ಅವನು ಸಾಯುತ್ತಾನೆ ಎಂಬುದಕ್ಕೆ ಪುರಾವೆ ಒದಗಿಸುವುದಿಲ್ಲ. ಈ ಹರಿದ ಬಟ್ಟೆಯ ಸಮಾಚಾರ ಅಂಥದು; ತರ್ಕವನ್ನು ಗಣನೆಗೆ ತೆಗೆದುಕೊಳ್ಳದೆ ಪುನರ್ಜನ್ಮವು ವಾಸ್ತವವೆಂಬ ತೀರ್ಮಾನ ನೀಡಲಾಗಿದೆ. ಪುಸ್ತಕವನ್ನು ಮುಂದಿಟ್ಟುಕೊಳ್ಳದೆಯೇ ಗೀತೆಯನ್ನು ದಿನಕ್ಕೆರಡು ಬಾರಿಯಾದರೂ ಪಠಿಸಿಕೊಳ್ಳುತ್ತಿದ್ದ ನನ್ನ ತಂದೆ ಈ ಶ್ಲೋಕದ ಬಗ್ಗೆ ಒಂದು ಪ್ರಶ್ನೆ ಎತ್ತುತ್ತಿದ್ದರು : "ಅದೇನೋ ಸರಿ, ಹರಿದ ಬಟ್ಟೆ ಕಳಚಿ ಹೊಸದು ಧರಿಸುವುದು ಸಾಧ್ಯವಾದರೆ ಅದನ್ನು ಮಾಡಬಹುದು. ಆದರೆ ಚಿಕ್ಕ ಮಕ್ಕಳು ಸಾಯುತ್ತಾರಲ್ಲ, ಅದಕ್ಕೇನು ಹೇಳುವುದು ? ಅವರ ಬಟ್ಟೆ ಅಷ್ಟು ಬೇಗ ಏಕೆ ಹರಿದುಹೋಗಬೇಕು ? ಭಗವಂತನು ಇದಕ್ಕೇನು ನ್ಯಾಯ ಹೇಳುತ್ತಾನೆ ?" ಅದಕ್ಕೆ ಸೈದ್ಧಾಂತಿಕ ಉತ್ತರ, ಅವರ ಪೂರ್ವಜನ್ಮದ ಕರ್ಮಫಲ ಎಂದು. ಕೆಲವರು "ಕೇಳಿಕೊಂಡು ಬಂದದ್ದು" ಅಷ್ಟನ್ನೇ ! ದೇಹದ ಆರೋಗ್ಯ–ಅನಾರೋಗ್ಯದ ವಿವರಣೆ ನೀಡುವ ಬದಲು ಹಣೆಬರಹದ ಲಘು ಮಾತು ಆಡುವುದು ಹೆಚ್ಚು ಆದರಣೀಯವಲ್ಲ. ಆದ್ದರಿಂದ ಕರ್ಮಸಿದ್ಧಾಂತದ ಮಾತನ್ನು ಹೇಳಿ ನಾನಿನ್ನೊಂದು ಮಾತು ಸೇರಿಸುತ್ತಿದ್ದೆ: "ನೋಡು, ನಿಮ್ಮ ಭಗವಂತ ಬಹಳ ಕೆಟ್ಟ ನೇಯ್ಗೆಯವನು. ಕೆಲವು ಬಟ್ಟೆಗಳನ್ನು ಬೇಗ ಹರಿದುಹೋಗುವಂತೆ ನೇಯ್ದುಬಿಟ್ಟಿದ್ದಾನೆ. ಅದರಲ್ಲಿ ನ್ಯಾಯವೇನಿದೆ !" ಏನೇ ಇರಲಿ, ಗೀತೆಯು ನೀಡಿರುವ ದೃಷ್ಟಾಂತವು ತರ್ಕಬದ್ಧವಾಗಿ ಪುನರ್ಜನ್ಮವನ್ನು ಸಾಧಿಸಿ ತೋರಿಸಿದಂತಂತೂ ಆಗುವುದಿಲ್ಲ. ಗೀತೆಯ ಬಹುತೇಕ ಓದುಗರು ಇಂತಹ ಪ್ರಶ್ನೆಯನ್ನು ಹಾಕಿಕೊಳ್ಳುವುದಿಲ್ಲ. ಬೇರೆಯವರು ಆ ಪ್ರಶ್ನೆಗಳನ್ನೆತ್ತಿದರೆ ಅವರಿಗೆ ಅಸಹನೆ.

ಪ್ರತ್ಯಕ್ಷಸಿದ್ಧ ಮತ್ತು ಪ್ರತ್ಯಕ್ಷವಾಗಿ ಸಿದ್ಧವಾಗಿಲ್ಲದುದರ ಮಿಶ್ರಣಕ್ಕೆ ಇನ್ನೊಂದು ಉದಾಹರಣೆ ನೋಡಿ: "ಜಾತಸ್ಯ ಹಿ ಧ್ರುವೋ ಮೃತ್ಯುಃ ಧ್ರುವಂ ಜನ್ಮ ಮೃತಸ್ಯ ಚ" (೨.೨೭). ಸಾವು ಗಟ್ಟಿ; ಅಂತೆಯೇ ಪುನರ್ಜನ್ಮ ಸಹ. ಹೀಗೆ ಹೇಳುವುದಕ್ಕೆ ಗೀತೆಯು ತರ್ಕವನ್ನೇನೂ ಬೆಳೆಸಿಲ್ಲ. ಇನ್ನೊಂದೆಡೆ ಬರುವ ಮಾತು: ಆಹಾರದಿಂದ ಜೀವೋತ್ಪತ್ತಿಯಾಗುತ್ತದೆ, ಮಳೆಯಿಂದ ಆಹಾರ ಉತ್ಪನ್ನವಾಗುತ್ತದೆ, ಯಜ್ಞದಿಂದ ಮಳೆಯಾಗುತ್ತದೆ (೩.೧೪). ಮೊದಲೆರಡು ಅನುಭವಕ್ಕೆ ಬಂದ ವಿಷಯಗಳು, ಆದರೆ ಮೂರನೆಯದು ಅನುಭವಕ್ಕೆ ಬಂದಿರುವಂಥದಲ್ಲ. ರಾಮಚಂದ್ರಾಪುರ ಮಠ ಆಯೋಜಿಸಿದ್ದ ಯಜ್ಞಗಳ ಪರಿಣಾಮ ಸಸಿಗಳ ಮೇಲೆ ಹೇಗಾಯಿತು, ಎಲೆಗಳ ಮೇಲೆ ಹೇಗಾಯಿತು, ಪ್ರಾಣಿಗಳ ಮೇಲೆ ಹೇಗಾಯಿತು ಇತ್ಯಾದಿ "ಸಂಶೋಧನೆ" ಮಾಡಿದ ಕೇರಳದ "ವಿಜ್ಞಾನಿಗಳು" ನೀಡಿದ ಅಪ್ರಬುದ್ಧ ತೀರ್ಮಾನಕ್ಕೆ ಸಾಟಿಯಾದುದು ಗೀತೆಯ ಈ ಮಾತು.

ಗೀತೆಯು ಕೌಮಾರ–ಯೌವನ–ಮುದಿತನದ ಮಾತನಾಡಿತಲ್ಲ (೨.೧೩), ಅದನ್ನು ದೃಷ್ಟಾಂತವಾಗಿ ನೀಡಿದ್ದು ಏನನ್ನು ಪ್ರತಿಪಾದಿಸಲು ? ಯಾರೂ ಶಾಶ್ವತವಲ್ಲ; ನಾನು ಇರಲಿಲ್ಲ. ನೀನಾಗಲೀ ಈ ರಾಜರಾಗಲೀ ಇಲ್ಲ, ನಾವು ಯಾರೂ ಇರುವುದಿಲ್ಲ, ಎಂಬುದನ್ನು ಒತ್ತಿ ಹೇಳಲು (೨.೧೨). ಯಾರೂ ಶಾಶ್ವತವಲ್ಲವೆಂಬುದು ಎಲ್ಲರನ್ನೂ ಕೊಲ್ಲಲು ಸಮರ್ಥನೆಯಾದೀತೇ ಅಥವಾ ಎಲ್ಲರೂ ಓಡುತ್ತಿರುವ ಲಾರಿಯಡಿ ಸಿಕ್ಕು

ಸಾಯಬೇಕು ಎಂಬುದರ ಸಮರ್ಥನೆಯೇ ? ನೈನಂ ಛಿಂದಂತಿ ಶಸ್ತ್ರಾಣಿ (೨.೨೩), ಅಂದರೆ ಆತ್ಮನನ್ನು ಶಸ್ತ್ರಗಳು ಭಗ್ನಗೊಳಿಸುವುದಿಲ್ಲ. ಆದ್ದರಿಂದ ದೇಹವನ್ನು ಈ ಕ್ಷಣದಲ್ಲೇ ತುಂಡರಿಸಬೇಕೇ ? ಯಾರೂ ಸಾಯುವುದಿಲ್ಲವೆಂಬುದು ಯುದ್ಧವನ್ನು ಅಪ್ರಸ್ತುತಗೊಳಿಸುತ್ತದೆ. ಹಾಗಿದ್ದರೆ, "ನಿನ್ನದು ಕ್ಷತ್ರಿಯ ಧರ್ಮ, ನೀನು ಸ್ವಧರ್ಮದಲ್ಲಿ ನಿರತನಾಗು" ಎಂದು ಹೇಳುವುದು, ಯುದ್ಧದಲ್ಲಿ ಪಾಲ್ಗೊಳ್ಳಲು ಪ್ರೇರೇಪಿಸುವುದು, ಅರ್ಥರಹಿತವಲ್ಲವೇ ? ಅರ್ಜುನನ ಅಳುಕು, ಖೇದ, ಸಂಶಯ ಇವೆಲ್ಲಾ ಅಪ್ರಾಸಂಗಿಕವೆನ್ನುವ ಭಗವಾನ್, ಯುದ್ಧವನ್ನೇ ಅಪ್ರಾಸಂಗಿಕವೆನ್ನಬಹುದಿತ್ತು. ಹಾಗೆ ಮಾಡಿದ್ದರೆ ಗೀತೆಯ ಕರ್ತೃವಿಗೆ ತನ್ನ ತತ್ತ್ವಸಿದ್ಧಾಂತ ಮಂಡಿಸಲು ಅವಕಾಶವಿರುತ್ತಿರಲಿಲ್ಲ. ಆದ್ದರಿಂದಲೇ ನಾವು ಮೊದಲಿಗೆ ತಿಳಿಯಬೇಕಾದ್ದು, ಗೀತೆಯ ನಿಜವಾದ ವಿಷಯ ಆಗ್ಗೆ ಉಂಟಾಗಿದ್ದ ಸಮಾಜದ ತುಮುಲಗಳನ್ನು ಅಪ್ರಾಸಂಗಿಕವೆಂದು ಪ್ರತಿಪಾದಿಸುವುದೇ ಆಗಿದೆ ಎಂದು. ಹೋಗಲಿ, ಯುದ್ಧವೇನಾದರೂ ಸಾಮಾಜಿಕ ಪಿಡುಗಿನ ವಿರುದ್ಧವೇ ? ಅಲ್ಲ, ಅದು ಸ್ವ-ಜನರ ವಿರುದ್ಧದ ಯುದ್ಧ, ವ್ಯವಸ್ಥೆಯ ಅಸಮಂಜಸತೆಯ ಬಗ್ಗೆ ಪ್ರಶ್ನೆ ಎತ್ತುವವರ ವಿರುದ್ಧದ ಯುದ್ಧ. ಇದು ಗೀತೆಯು ಪ್ರಬುದ್ಧವಾಗಿ ನಡೆಸ ಹೊರಟಿರುವ ಸೈದ್ಧಾಂತಿಕ ಯುದ್ಧ. ಅರ್ಜುನನನ್ನು ಹುರಿದುಂಬಿಸುವಾಗ ಭಗವಾನ್ ಹೇಳುತ್ತಾನೆ (೨.೩೧), "ಸ್ವಧರ್ಮವನ್ನು ನೆನೆದರೆ ನೀನು ಡೋಲಾಯಮಾನ ಮನಸ್ಸನ್ನು ತಿದ್ದಿಕೊಳ್ಳಲು ಸಾಧ್ಯ; ಕ್ಷತ್ರಿಯರಿಗೆ ಯುದ್ಧಕ್ಕಿಂತಲೂ ಬೇರೆ ಯಾವ ಧರ್ಮ ತಾನೆ ಶ್ರೇಯಸ್ಕರವಿದ್ದೀತು ? ಕ್ಷತ್ರಿಯರಿಗೆ ಇಂತಹ ಅವಕಾಶ ಲಭಿಸುತ್ತದಲ್ಲ, ಅದೇ ವಿಶೇಷ ಸುಖ" ಎಂದು. ಗೀತೆಯ ಈ ವಾಕ್ಯವನ್ನು ಶೂದ್ರರಿಗೆ ಅನ್ವಯವಾಗುವಂತೆ ಹೇಗೆ ಹೇಳಬೇಕು ? "ಸುಖಿನಸ್ತು ಶೂದ್ರಾಸ್ಸರ್ವೇ ಲಭಂತೇ ಸೇವಿತುಂ ಸದಾ" (ಇತರರ ಸೇವೆ ಮಾಡುವ ಸದವಕಾಶ ಹೊಂದಿದ ಶೂದ್ರರೇ ಧನ್ಯರು). ಗೀತೆಯು ಸ್ವ-ಧರ್ಮಕ್ಕೆ ಅಷ್ಟೊಂದು ಪ್ರಾಧಾನ್ಯ ನೀಡುವುದರ ಉದ್ದೇಶವೇ ಅದು.

ಸೈದ್ಧಾಂತಿಕವಾಗಿ ಗೀತೆಯು ಯಥಾಸ್ಥಿತಿ ವಾದಕ್ಕೆ ಅಂಟಿಕೊಂಡಿದೆ, ಅದರ ಪರವಾಗಿ ವಕಾಲತ್ತು ವಹಿಸಿದೆ. ಈ ಹುಮ್ಮಸ್ಸಿನಲ್ಲಿ ತನ್ನ ಆಂತರಿಕ ವಿರೋಧಗಳಿಂದ ಗೀತಾಮಾತೆಗೆ ಮುಜುಗರವೇ ಇಲ್ಲವೆಂಬುದು ಒಂದು ಸ್ವಾರಸ್ಯ. "ನೀನು ಈ ಯುದ್ಧದಲ್ಲಿ ಪಾಲ್ಗೊಳ್ಳದಿದ್ದರೆ ನಿನ್ನ ಧರ್ಮ, ಕೀರ್ತಿ, ಎಲ್ಲಾ ಕಳೆದುಕೊಂಡ ಪಾಪಿಯಾಗುತ್ತೀಯೆ. ನಿನ್ನಂಥ ಸಂಭಾವಿತನಿಗೆ ಅದು ಯೋಗ್ಯವೇ ? ನೀನೆಂತಹ ಹೇಡಿ ಎಂದಾರು ಜನ, ಮರೆಯದಿರು. ಅವರ ದೃಷ್ಟಿಯಲ್ಲಿ ನೀನು ಅಲ್ಪನಾಗುತ್ತೀಯೆ. ನಿನ್ನ ಬಗ್ಗೆ ಎಂತೆಂತಹ ಆಪಾದನೆಗಳು ಬಂದಾವು ಎಂಬುದನ್ನು ತಿಳಿ. ಅದಕ್ಕಿಂತಲೂ ಹೀನಾಯವಾದದ್ದು ಇನ್ನೇನಿದೆ ! ಆದ್ದರಿಂದ ಸ್ವರ್ಗ ಮತ್ತು ಸಾಮ್ರಾಜ್ಯ ಎರಡೂ ನಿನ್ನವೇ. ಸತ್ತರೆ ಸ್ವರ್ಗ, ಗೆದ್ದರೆ ಸಾಮ್ರಾಜ್ಯ" (೨.೩೩-೩೮). ಪುಸಲಾಯಿಸುವುದು, ಪ್ರಲೋಭನೆ ಒಡ್ಡುವುದು ಎಂದರೆ ಇದಲ್ಲವೇ! ಅರ್ಜುನ ಹೇಳಬಹುದಿತ್ತು : "ಭಗವಾನರೇ, ಈಗ

## ಅಭಿನಂದನೆಗಳು ............

ಕರ್ನಾಟಕ ಲಲಿತಕಲಾ ಅಕಾಡೆಮಿಯ ೨೦೧೬ರ ಗೌರವ ಪ್ರಶಸ್ತಿಯು ಹಿರಿಯ ಕಲಾವಿದರಾದ ಶ್ರೀ ಕೆ. ಕೆ. ಮಕಾಳಿ ಅವರಿಗೆ ಲಭಿಸಿದೆ. ಕಲಾವಿದರಿಗೆ 'ನವಕರ್ನಾಟಕ' ಹಾಗೂ 'ಹೊಸತು' ಬಳಗದ ಅಭಿನಂದನೆಗಳು.

ತಾನೇ ಹೇಳಿದಿರಿ, ಸಾವೇ ಇಲ್ಲ, ಆತ್ಮ ನಿತ್ಯ ಇತ್ಯಾದಿ. ಸಾವೇ ಇಲ್ಲವೆಂದಾಗ ಇನ್ನು ಬೇರೆ ಏನು ತಾನೇ ಭೀಕರವಾದೀತು, ಬಿಡಿ" ಎಂದು. ಹಾಗೆನ್ನುವುದರ ಬದಲು ಕೂಡಲೇ ಸ್ಥಿತಪ್ರಜ್ಞನ ಲಕ್ಷಣಗಳನ್ನು ತಿಳಿಯಲು ಅರ್ಜುನ ಉತ್ಸುಕನಾಗಿದ್ದಾನೆ. ಶಾಂತ-ತೃಪ್ತ ಸ್ವಭಾವದ ಅನನ್ಯ ಚಿತ್ರಣ ಇಲ್ಲಿ ಲಭ್ಯವಿದೆ (೨.೫೪-೭೨). ವಿಶ್ವ ಸಾಹಿತ್ಯದಲ್ಲಿ ಮಾನಸಿಕ ಸಮಸ್ಥಿತಿಯನ್ನು, ಅವಿಚಲಿತ ವ್ಯಕ್ತಿತ್ವವನ್ನು, ಇಷ್ಟು ಸಂಕ್ಷಿಪ್ತವಾಗಿ ಮತ್ತು ಸೊಗಸಾಗಿ ನಿರೂಪಿಸುವ ಬೇರೆ ಮಾದರಿಗಳು ಬಹಳವಿಲ್ಲ. ಅದೂ ಎಷ್ಟು ಕಾವ್ಯಮಯವಾಗಿದೆ ! ಯಾ ನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿ ಸಂಯಮೀ। ಯಸ್ಯಾಂ ಜಾಗ್ರತಿ ಭೂತಾನಿ ಸಾ ನಿಶಾ ಪಶ್ಯತೋ ಮುನೇಃ॥ (೨.೬೯) ಎಂಬಲ್ಲಿ ಎಷ್ಟು ಅದ್ಭುತವಾದ ರೂಪಕವಿದೆ, ಎಷ್ಟು ಪದರಗಳಲ್ಲಿ ಅರ್ಥವು ಅನುರಣಿತವಾಗುತ್ತದೆ ! ಕತ್ತಲು ಮತ್ತು ಎಚ್ಚರ ಇಲ್ಲಿ ಪ್ರಧಾನಾಂಶಗಳು. ಯಾವುದರ ಬಗ್ಗೆ ಆಸಕ್ತಿ, ಯಾವುದರ ಬಗ್ಗೆ ಅನಾಸಕ್ತಿ ಎಂಬುದನ್ನು ಎಷ್ಟು ಬೇಕಾದರೂ ವಿಸ್ತರಿಸಬಹುದು. ಆಕರ್ಷಣೆ-ವಿಕರ್ಷಣೆ, ಧ್ರುವ-ಅಧ್ರುವ, ಶ್ರೇಯಸ್ಸು-ಪ್ರೇಯಸ್ಸು, ಶಾಂತಿ-ತಲ್ಲಣ, ಹೀಗೆ ಹಿತ ಮತ್ತು ಅಹಿತವನ್ನು ಗುರುತಿಸುವ ಗೀತೆಯ ಈ ಭಾಗವು ಆಂಗ್ಲ ಕವಿ ವಿಲಿಯಂ ಬ್ಲೇಕ್‌ನ ಅನೇಕ ಕವಿತೆಗಳನ್ನು ನೆನಪಿಸುತ್ತದೆ. ಒಂದೇ ನ್ಯೂನತೆಯೆಂದರೆ ಇದೆಲ್ಲಾ ಅರ್ಜುನನ ಸಂದರ್ಭಕ್ಕೆ ಅನೌಚಿತ್ಯದ ದೋಷದಿಂದ ಕೂಡಿದೆ.

ಸ್ಥಿತಪ್ರಜ್ಞನ ಲಕ್ಷಣಗಳನ್ನು ಹೇಳುವಾಗ ಗೀತೆಯು ಸಮಸ್ಥಿತಿಯನ್ನು ಪಡೆಯುವ ಮಾರ್ಗವೇನಾದರೂ ಉಂಟೇ, ಹಾಗಾದರೆ ಆ ಮಾರ್ಗ ಯಾವುದು ಎಂಬುದನ್ನು ಹೇಳಿಲ್ಲ. ಮುಂದಿನ ಬೇರೆ ಅಧ್ಯಾಯಗಳಲ್ಲಿ ಅಭ್ಯಾಸ, ಪ್ರಯತ್ನ, ವೈರಾಗ್ಯ ಮುಂತಾದವುಗಳ ಮೂಲಕ ಯೋಗ, ತಪಸ್ಸು, ಇವುಗಳ ಸಾಧನೆಯ ಪ್ರಸ್ತಾಪವಿದೆ. (ಉದಾಹರಣೆಗೆ ಅಧ್ಯಾಯ ೫, ೬ ಮತ್ತು ೧೭). ಕಠೋಪನಿಷತ್ತಿನಲ್ಲಿ ಯೋಗವನ್ನು ಕುರಿತಂತೆ ವಿಶೇಷವಾಗಿ ಮೂರು ಮತ್ತು ಆರನೆಯ ವಲ್ಲಿಗಳಲ್ಲಿ ವಿವರಣೆಗಳಿವೆ. ಪತಂಜಲಿಯ ಯೋಗಸೂತ್ರದಲ್ಲಿ ಅದನ್ನಿನ್ನೂ ಹೆಚ್ಚು ವ್ಯವಸ್ಥಿತವಾಗಿ ನಿರೂಪಿಸಲಾಗಿದೆ. ಗೀತೆಯ ಯೋಗಾಭ್ಯಾಸದ ಹಲವು ಆಯಾಮಗಳನ್ನು ದೀರ್ಘವಾಗಿ ಪ್ರತಿಪಾದಿಸಿದೆ. ಈ ವಿಷಯವನ್ನು ಒಂದೆಡೆ ಸಕ್ರಮವಾಗಿ ಹೇಳಹೋಗದಿರುವುದು ಗೀತೆಯ ಕ್ರಮ. ಅಲ್ಲಲ್ಲಿ ಚದುರಿಹೋಗಿರುವ ಅಂಶಗಳನ್ನೆಲ್ಲಾ ವಿಷಯಾನುಸಾರ ಸಂಗ್ರಹಿಸಿದರೆ ಯೋಗಶಾಸ್ತ್ರದ ಮೂಲಭೂತ ಗ್ರಂಥವೊಂದು ನಮಗೆ ಲಭ್ಯವಾಗುತ್ತದೆ. ಹಾಗೆ ನೋಡಿದರೆ ಇಡೀ ಗೀತೆಯ ಯೋಗಾಭ್ಯಾಸದ ಅವಶ್ಯಕತೆ, ಕ್ರಮ ಮತ್ತು ಫಲಗಳನ್ನು ವಿಶದೀಕರಿಸುವಷ್ಟು ಬೇರಾವ ವಿಷಯವನ್ನೂ ವಿಶದೀಕರಿಸಿಲ್ಲ. ಯೋಗಿ ಎನಿಸಿಕೊಳ್ಳಲು ಯೋಗ್ಯವಾದ ಮನಃಸ್ಥಿತಿಯನ್ನು ತಲುಪುವುದು ಪ್ರಶಸ್ತವೆಂಬುದು ಗೀತೆಯ ಒಂದು ಮಹತ್ವದ ಸಂದೇಶ. "ನೀನು ಭಾವಿಸಿಕೊಂಡಂತೆ ನೀನಾಗುತ್ತೀಯೆ, ಆದ್ದರಿಂದ ನಿನ್ನ ಭಾವನೆಯು ಮುಖ್ಯ, ಪರಿಸರ ಇತ್ಯಾದಿಗಳೆಲ್ಲಾ ಗೌಣ" ಎಂಬರ್ಥ ಬರುವ ಮಾತುಗಳು ನಮ್ಮ ಅನೇಕ ತತ್ತ್ವಶಾಸ್ತ್ರ ಗ್ರಂಥಗಳಲ್ಲಿವೆ. ಗೀತೆಯು ಹಾಗೆನ್ನುವುದಿಲ್ಲ, ಬದಲಾಗಿ ಮನಸ್ಸನ್ನು ಮತ್ತು ತನ್ಮೂಲಕ ವ್ಯಕ್ತಿತ್ವವನ್ನು ರೂಢಿಸಿಕೊಳ್ಳುವುದಕ್ಕೆ ಅದು ಆದ್ಯತೆ ನೀಡುತ್ತದೆ, ಆ ದಿಕ್ಕಿನಲ್ಲಿ ಹೆಜ್ಜೆ ಹಾಕಲು ಪ್ರಾಯೋಗಿಕ ಸೂಚನೆಗಳನ್ನು ಕೊಡುತ್ತದೆ. ಸಮಾಜದ ಶ್ರೇಣೀಕೃತ ವ್ಯವಸ್ಥೆಯನ್ನು ಅಲುಗಿಸಬಾರದೆಂಬ ದೃಷ್ಟಿಯನ್ನು ಪ್ರಧಾನ ಆಶಯವನ್ನಾಗಿ ಇರಿಸಿಕೊಂಡಿರುವ ಗೀತೆಯು ವೈಯಕ್ತಿಕವಾಗಿ ಮನಃಸ್ಥಿತಿಯನ್ನು ರೂಢಿಸಿಕೊಳ್ಳುವ ವಿಧಾನಕ್ಕೆ ಬಹಳ ಒತ್ತುಕೊಟ್ಟಿದೆ. ಆದ್ದರಿಂದಲೇ ಗೀತೆಯ ಶ್ಲೋಕಗಳ ಉದ್ಧರಣ ಮಾಡುವವರಿಗೆ ಇದು ಮೂಲಸೆಲೆ ಆಗಿಹೋಗಿದೆ. ಆ ರೀತಿಯ ಉದ್ಧರಣ ಮಾಡುವ ಹವ್ಯಾಸವನ್ನು ಬಿಟ್ಟು ಆಚರಣೆಗೆ ಮಹತ್ವದ ಸ್ಥಾನ ನೀಡಿದರೆ ಗೀತೆಯ ಶ್ರೇಷ್ಠತೆ ಅಪಾರವಾದೀತು. ಗೀತೆಯಲ್ಲಿ ಅದೆಷ್ಟು ವಿಪುಲವಾಗಿ ವ್ಯಂಗ್ಯಗಳನ್ನು ಪೋಣಿಸಲಾಗಿದೆಯೆಂಬುದನ್ನು ಗಮನಿಸಿದರೆ ಆಶ್ಚರ್ಯವಾಗುತ್ತದೆ. ವ್ಯವಸ್ಥೆಯ ಯಥಾಸ್ಥಿತಿಯನ್ನು ಬಲವಾಗಿ ಸಮರ್ಥಿಸುತ್ತಲೇ ಗೀತೆಯು, ಆ ವ್ಯವಸ್ಥೆಯಲ್ಲೂ ವ್ಯಕ್ತಿಗೆ ಶಾಂತಚಿತ್ತ, ಸಮಭಾವ, ನಿರಾಸಕ್ತಿಗಳನ್ನು ಪೋಷಿಸಿಕೊಂಡು ಸಂವೇದದಿಂದ ದೂರವಿರಲು ಸಾಧ್ಯವೆಂದು ಪ್ರತಿಪಾದಿಸುವುದು ಅಂತಹ ಒಂದು ವ್ಯಂಗ್ಯ. ಹೃದಯರಹಿತ ವ್ಯವಸ್ಥೆಯ ಕ್ರೌರ್ಯ ಒಂದು ಕಡೆ, ಅದನ್ನು ಸಹಿಸುತ್ತಲೇ ಮ್ಲಾನಕ್ಕೆ ತುತ್ತಾಗದಿರುವಂತೆ ಅನನ್ಯವಾದ ಶಿಸ್ತೊಂದನ್ನು ಪಾಲಿಸುವುದು ಇನ್ನೊಂದು ಕಡೆ : ಇದು ಗೀತೆಯ ಬೋಧನೆಯ ಒಂದು ವೈಶಿಷ್ಟ್ಯ. ಯುದ್ಧವನ್ನು ನಿರಾಕರಿಸಿ ಸ್ವ-ಧರ್ಮವನ್ನು ಬಿಟ್ಟುಕೊಡಬೇಡ ಎಂದು ಅರ್ಜುನನಿಗೆ ತಾಕೀತು ಮಾಡುವ ಗೀತೆಯು ಅನುಪಾಧಿಕ ಭಕ್ತಿಮಾರ್ಗವನ್ನೂ, ಯೋಗದಿಂದ ಲಭಿಸುವ ಆತ್ಮಶಾಂತಿಯನ್ನೂ ಅವನಿಗೆ ಉಪದೇಶಿಸುತ್ತದೆ. ಇದು ಇನ್ನೊಂದು ವ್ಯಂಗ್ಯ. ಇದು ದೂಷಣೆ ಅಥವಾ ಟೀಕೆಯ ಮಾತಲ್ಲ. ಜೀವನದಲ್ಲಿ ಪರಸ್ಪರ ವಿರೋಧಿ ಲಕ್ಷಣಗಳು ಏಕತ್ರ ಹೇಗೆ ಸಮ್ಮಿಳಿತವಾಗಿರುತ್ತವೆ, ಸಮ್ಮಿಳಿತವಾಗಿರಬಹುದು, ಎಂಬುದರ ದ್ಯೋತಕ. ಗೀತೆಯು ಎತ್ತಿಹಿಡಿಯುವ ವರ್ಣಧರ್ಮ, ಕರ್ಮಫಲತ್ಯಾಗ ಮುಂತಾದ ಪ್ರಶ್ನಾರ್ಹ ಸಂಗತಿಗಳ ನಡುವೆಯೂ, ಅದು ನಿರೂಪಿಸುವ ನಿಶ್ಚಲ ಮತಿಗೆ ಉದಾತ್ತ ಮೌಲ್ಯವಿದೆಯೆಂಬುದು ಮನಮುಟ್ಟುವ ಸಂಗತಿ. ಅಸ್ತಿತ್ವದಲ್ಲಿರುವ ವ್ಯವಸ್ಥೆಯನ್ನು ಪ್ರಶ್ನಿಸಿ, ಅದಕ್ಕೆ ಮಾನವಮುಖಿ ಉದಾತ್ತ ಮೌಲ್ಯದ ಅಡಿಪಾಯವನ್ನು ಹಾಕಿ ಪರ್ಯಾಯವನ್ನು

ನಿರ್ಮಿಸಲು ತಹತಹಿಸುವವರಿಗೂ ಸಮಚಿತ್ತದ ಅಗತ್ಯವಿದೆ. ಅವರೆಲ್ಲಾ ಕ್ರೋಧದ ಬೆಂಕಿಯಲ್ಲಿ ತೀರಾ ಬೆಂದುಹೋಗುವಂಥವರಲ್ಲ, ಕಷ್ಟಸಹಿಷ್ಣುಗಳು ಮತ್ತು ಸಹನೆಯ ಮೂರ್ತ ರೂಪಗಳು. ಬುದ್ಧ, ಮಾರ್ಕ್ಸ್, ಗಾಂಧಿ, ಅಂಬೇಡ್ಕರ್, ಹೀಗೆ ಅಂದಂದಿನ ವ್ಯವಸ್ಥೆಯ ವಿರೋಧಿಗಳೆಲ್ಲಾ ವೈಯಕ್ತಿಕವಾಗಿ ಸ್ನೇಹಪ್ರಿಯರು, ಸಮಚಿತ್ತದವರು. ಅವರೆಲ್ಲರ ತತ್ತ್ವಶಾಸ್ತ್ರದ ಬುನಾದಿ ಅಂತಹದು.

ಗೀತೆಯು ಬೋಧಿಸುವ 'ನಿಷ್ಕಾಮಕರ್ಮ' ಎಂಥದು ಎಂಬ ಪ್ರಶ್ನೆಗೆ ಈಗ ಹಿಂದಿರುಗೋಣ. ಫಲವನ್ನು ಅಪೇಕ್ಷಿಸದೆ ಕೆಲಸಗಳನ್ನು ಮಾಡಬೇಕೆಂಬ ನಿರೀಕ್ಷೆ ಭಾರತೀಯ ಸಂಸ್ಕೃತಿಯಲ್ಲಿಲ್ಲ. ಬೇರೆ ಸಂಸ್ಕೃತಿಗಳಲ್ಲೂ ಇಲ್ಲವೆಂದು ತೋರುತ್ತದೆ. ಶ್ರದ್ಧೆ ಮತ್ತು ನಿಷ್ಠೆಗಳಿಂದ ಕೆಲಸ ಮಾಡುವುದು ಬೇರೆ, ಫಲವನ್ನು ಅಪೇಕ್ಷಿಸದೆ ಕೆಲಸ ಮಾಡುವುದು ಬೇರೆ. ಆದಿಮ ಬುಡಕಟ್ಟುಗಳ ಆಚರಣೆಗಳೆಲ್ಲಾ ನಿರ್ದಿಷ್ಟ ಫಲಗಳ ಈಡೇರಿಕೆಗಾಗಿಯೇ ಇವೆ. ಮಳೆಗಾಗಿ, ಬಿತ್ತನೆಯ ವೇಳೆಯಲ್ಲಿ, ಕುಯ್ಲಿನ ಸಂದರ್ಭದಲ್ಲಿ, ಹೀಗೆ ಯಾವಾಗಲೂ ಫಲ ದೊರೆಯಲೆಂದೇ ಕ್ರಿಯೆಗಳಿವೆ. ಋಗ್ವೇದದ ಕವಿಗಳು ಅದೇ ಸಂಪ್ರದಾಯದವರು. "ನಿನಗೆ ಪ್ರಿಯರಾಗಿರುವಂತೆ ನಮಗೆ ಇಂತಿಂಥದು ಮಾಡು ಅಥವಾ ಕೊಡು" ಎಂಬ ಮಾತು ಹತ್ತಾರು ಬಾರಿ ಅಲ್ಲಿ ಬರುತ್ತದೆ. ಅಥಾ ತೇ ಸ್ಯಾಮ ವರುಣ ಪ್ರಿಯಾಸಃ, ಧಿಯಾ ಸ್ಯಾಮ ರಥ್ಯಃ ಸದಾಸಾಃ, ಬೃಹದ್ವದೇಮ ವಿದಥೇ ಸುವೀರಾಃ, ಇತ್ಯಾದಿ. "ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ" (ಸ್ವರ್ಗಕಾಮಿಯು ಜ್ಯೋತಿಷ್ಟೋಮ ಯಜ್ಞ ಮಾಡಲಿ) ಎಂಬಂತಹ ವಾಕ್ಯಗಳು ನೂರಾರಿವೆ. ಮೀಮಾಂಸಕ ಕುಮಾರಿಲ ಭಟ್ಟ ಹೇಳಿದ, "ಪ್ರಯೋಜನದ ಉದ್ದೇಶವಿಲ್ಲದೆ ಹುಚ್ಚನು ಸಹ ಕಾರ್ಯಪ್ರವೃತ್ತನಾಗುವುದಿಲ್ಲ" (ಪ್ರಯೋಜನಮನುದ್ದಿಶ್ಯ ನ ಮಂದೋऽಪಿ ಪ್ರವರ್ತತೇ) ಎಂದು. ವ್ರತ ಮಾಡಿದರೆ, ಗಣೇಶನ ವ್ರತದ ನಂತರ ಕತೆ ಕೇಳಿದರೆ, ಒಂದು ಸ್ತೋತ್ರ ಹಾಡಿದರೆ ಏನೇನು ಲಾಭ ದಕ್ಕುತ್ತದೆಂಬ ಪಟ್ಟಿ ಯಾವಾಗಲೂ ಇದ್ದೇ ತೀರುತ್ತದೆ. ಹಾಗಿದ್ದರೆ, ಗೀತೆಯು ಬೇರೆ ರಾಗ ಹಾಡಿರುವುದರ ವಿಚಿತ್ರವನ್ನು ಹೇಗೆ ಅರ್ಥೈಸಿಕೊಳ್ಳಬೇಕು? ಅರ್ಜುನನು ಯುದ್ಧದಿಂದ




ವಿಮುಖನಾಗದಿರಬೇಕಾದ್ದು ಸ್ವರ್ಗಪ್ರಾಪ್ತಿಗೆ ಇಲ್ಲವೆ ಸಾಮ್ರಾಜ್ಯದ ಸುಖಕ್ಕೆಂದು ಗೀತೆ ಹೇಳುತ್ತದೆ. ಅದು ನಿಷ್ಕಾಮಕರ್ಮವಂತೂ ಅಲ್ಲ. ಗೀತೆಯ ಪಠಣ ಮತ್ತು ಶ್ರವಣದಿಂದ ಏನು ದಕ್ಕುತ್ತದೆಂಬುದನ್ನು ಗೀತೆ ಹೇಳಿದೆ. ಅದು ಗೀತೆಯ ಆದೇಶವನ್ನು ಪಾಲಿಸುವುದರ ಫಲವಲ್ಲ; ಕೇವಲ ಗೀತೆಯ ಪಠಣವನ್ನು ಕೇಳಿಸಿಕೊಂಡುದರಿಂದಲೇ ಫಲಿಸುವ ಲಾಭ. "ಶ್ರದ್ಧೆ ಉಳ್ಳವರು, ಅಸೂಯೆ ಇಲ್ಲದವರು, ಗೀತೆಯ ಪಠಣ ಕೇಳಿದರೂ ಸಾಕು; ಅವರಿಗೆ ಪುಣ್ಯಕರ್ಮಗಳಿಂದ ಲಭಿಸುವಂತಹ ಶುಭಲೋಕಗಳ ಪ್ರಾಪ್ತಿಯು ಖಚಿತ" (೧೮.೭೧–೭೨). ಇದರಿಂದಾಗಿಯೇ ಗೀತೆಯ ಗ್ರಹಿಕೆ ಮತ್ತು ಧೋರಣೆಗಳ ಪಾಲನೆಗಿಂತಲೂ ಪಠಣಕ್ಕೆ ಮಹತ್ವ ದೊರಕಿಬಿಟ್ಟಿದೆಯೇನೊ! ಹೀಗಿರುವಾಗ ಕ್ರಿಯೆಯಿಂದ ದೊರಕಬಹುದಾದ ಲಾಭವನ್ನು ಪರಿಗಣಿಸದೆ ಕರ್ಮ ಮಾಡುವುದೆಂದರೇನು? ಪಠಣ ಮಾಡಿ ಪುನೀತರಾಗುವವರಿಗೊಂದು ನೀತಿ, ದುಡಿಮೆ ಮಾಡಿ ಜೀವಿಸುವವರಿಗೆ ಬೇರೊಂದು ನೀತಿ!

ಅಂದರೆ, ಒಂದೊಂದು ವರ್ಣದವರಿಗೆ ಒಂದೊಂದು ರೀತಿಯ ಜೀವನ ಕ್ರಮ. ಅದೇ "ಸ್ವ–ಧರ್ಮ" ಎಂಬುದರ ಘನ ಗುಟ್ಟು. "ಬಗ್ಗಿ ನಡೆ, ತಗ್ಗಿ ನಡೆ" ಎಂದು ಕೆಳಹಂತದ ಜನರಿಗೆ ಬೋಧಿಸುತ್ತಾರಲ್ಲ, ಅದೇ ಇದು. ತಲೆಯೆತ್ತಿ ನಡೆಯುವುದು ಕೆಲವರಿಗೆ ಮೀಸಲಾದ ಸವಲತ್ತು; ಇನ್ನಿತರರು ಆ ದೊಡ್ಡವರ ಆಣತಿಯನ್ನು ಪಾಲಿಸುವುದರಲ್ಲೇ ತೃಪ್ತಿ ಹೊಂದಬೇಕು. "ನಿನ್ನ ಜವಾಬ್ದಾರಿ ಇರುವುದು ಕರ್ಮವೆಸಗುವುದರಲ್ಲಿ ಮಾತ್ರ, ಫಲಕ್ಕಾಗಿ ಎಂದೂ ಆಗ್ರಹಿಸುವಂತಿಲ್ಲ. ಕರ್ಮಫಲದ ಪ್ರಾಪ್ತಿಗೆ ನೀನು ಕಾರಣನಾಗುವುದು ಬೇಡ, ಅಂತೆಯೇ ನಿಷ್ಕ್ರಿಯೆಯು ನಿನಗೆ ಸಂಗಾತಿಯಾಗುವುದೂ ಬೇಡ" (೨.೪೭: ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ । ಮಾ ಕರ್ಮ ಫಲಹೇತುರ್ಭೂಃ ಮಾ ತೇ ಸಂಗೋऽಸ್ತ್ವ ಕರ್ಮಣಿ ॥) ಎಂದು ಹೇಳುವುದಕ್ಕೊಂದು ಪೀಠಿಕೆ ಇದೆ. ನಿಸ್ತೇಜನಾಗಿದ್ದವನನ್ನು ಹುರಿದುಂಬಿಸಿ ಭಗವಾನ್ ನುಡಿಯುವ ಮಾತಿದು: ಸುಖವೋ ದುಃಖವೋ, ಲಾಭವೋ ನಷ್ಟವೋ, ಜಯವೋ ಅಪಜಯವೋ ಎಲ್ಲಾ ಒಂದೇ ಎಂದು ತಿಳಿದು ಯುದ್ಧಕ್ಕೆ ಸನ್ನದ್ಧನಾಗು. ಇಷ್ಟು ಬುದ್ಧಿ ಹೇಳಿದ್ದು ಸಾಲದಾದರೆ ಹೇಳು, ನಿನಗೆ ಕರ್ಮದ ಫಲಕ್ಕೆ ಅಂಟಿಕೊಳ್ಳದಿರುವುದನ್ನು ಉಪದೇಶಿಸುತ್ತೇನೆ. ನಿನ್ನ ಧರ್ಮವನ್ನು ಕಿಂಚಿತ್ತು ಪಾಲನೆ ಮಾಡಿದರೂ ಒಳ್ಳೆಯದೇ; ಅದರಿಂದ ಕರ್ಮಫಲ ಇಲ್ಲದಾಗುವುದಿಲ್ಲ, ಫಲ ದಕ್ಕದೆಯೂ ಇರುವುದಿಲ್ಲ. ಇದು ನಿಶ್ಚಿತವಾದ ಬುದ್ಧಿ. ನಿಶ್ಚಿತವಲ್ಲದ ಬುದ್ಧಿಗೆ ಹತ್ತಾರು ಆಕರಗಳಿವೆ (ಅಂದರೆ, ನಿಶ್ಚಿತವಲ್ಲದ್ದನ್ನು ಹೇಳುವ ಚಿಂತನಾ ಶಾಖೆಗಳು ಹಲವಿವೆ). ವಿಶೇಷ ತಿಳಿವಳಿಕೆ ಇಲ್ಲದವರ ಸೊಗಸು ಮಾತುಗಳು, ವೇದವಾದಗಳಲ್ಲಿ ಮುಳುಗಿಹೋಗಿರುವವರು ಬೋಧಿಸುವ ಕ್ರಿಯಾಫಲಗಳು, ಇವನ್ನು ಕೇಳಿದರೆ ಫಲವಲ್ಲದೆ ಬೇರೇನೂ ಇಲ್ಲ ಎನಿಸಬಹುದು; ಏನೇನೋ ಆಸೆಗಳನ್ನು, ಸ್ವರ್ಗ ಬೇಕೆನ್ನುವುದನ್ನು, ಅಥವಾ ಬೇರೆ ಬೇರೆ ಭೋಗ ಮತ್ತು ಐಶ್ವರ್ಯಗಳನ್ನು ಗಳಿಸಲು ಯಾವ ಯಾವ ಕ್ರಿಯೆಗಳು ಸೂಕ್ತವೆಂದು ಹೇಳುವವರನ್ನು ನಾವು ಕಾಣುತ್ತೇವೆ. ಅವರಿಗೆ ಪ್ರಾಯೋಗಿಕವಾದ (ವ್ಯವಸಾಯಾತ್ಮಿಕಾ) ಬುದ್ಧಿ ಉಂಟು, ಆದರೆ ಅದು ಸಮಸ್ಥಿತಿಯನ್ನು ಪಡೆಯಲು ಪೂರಕವಲ್ಲ. ವೇದಗಳು ತ್ರಿಗುಣಗಳ ಪರಿಣಾಮಕ್ಕೆ ಕಟ್ಟುಬಿದ್ದಿವೆ. ಆದರೆ ನೀನು ಗುಣಾತೀತನಾಗಬೇಕು. ದ್ವಂದ್ವವಿಲ್ಲದಂತಹ ಸತ್ವಕ್ಕೆ ನೀನು ಬದ್ಧ, ಆಸೆಗಳ ಪೂರೈಕೆಗಲ್ಲ. ಹೇರಳವಾಗಿ ನೀರು ತುಂಬಿದ್ದರೂ ನಿನಗೆ ಬೇಕಾದಷ್ಟನ್ನು ತಾನೆ ನೀನು ಬಳಸೀಯೆ! ಅಷ್ಟರಮಟ್ಟಿಗೆ ಮಾತ್ರವೇ ವೇದವಿಧಿಗಳಿಗೆ ಒಗ್ಗೊಡಬೇಕು" (೨.೩೮–೪೬). ಇದಾದ ಕೂಡಲೆ ಬರುವ ಮಾತು "ಕರ್ಮಣ್ಯೇವಾಧಿಕಾರಸ್ತೇ..."

**ಜಿ. ರಾಮಕೃಷ್ಣ**
೨–ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್
೨೨/೧, ೪ನೇ ಕ್ರಾಸ್, ಕಾವೇರಿನಗರ
ಬನಶಂಕರಿ ೩ನೇ ಹಂತ ಬೆಂಗಳೂರು – ೫೬೦ ೦೮೫

# ಅಸ್ಮಿತೆಯ ಚಳುವಳಿಗಳು ಜನಪರ ಚಳುವಳಿಯ ಒಕ್ಕೂಟವಾಗಬೇಕು

ನಾಡಿನ ಸಂವೇದನಾಶೀಲ ಸಾಹಿತಿ, ಚಿಂತಕ ನಾಡೋಜ ಡಾ॥ ಬರಗೂರು ರಾಮಚಂದ್ರಪ್ಪನವರು ರಾಯಚೂರಿನಲ್ಲಿ ನಡೆಯಲಿರುವ ೮೨ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಆಯ್ಕೆಯಾಗಿದ್ದಾರೆ. ಅವರ ಸಂದರ್ಶನವನ್ನು ಡಾ॥ ಎನ್. ಗಾಯತ್ರಿ ಹಾಗೂ ಡಾ॥ ಸಿದ್ದನಗೌಡ ಪಾಟೀಲ ಅವರು ನಡೆಸಿ ಹೊಸತು ಓದುಗರಿಗೆ ಒದಗಿಸಿದ್ದಾರೆ.

**ಹೊಸತು :** ಸರ್, ರಾಯಚೂರಿನಲ್ಲಿ ನಡೆಯಲಿರುವ ಅಖಿಲ ಕರ್ನಾಟಕ ಸಾಹಿತ್ಯ ಪರಿಷತ್ತಿನ ಸಮ್ಮೇಳನದ ಅಧ್ಯಕ್ಷರಾಗಿ ಆಯ್ಕೆಯಾಗಿರುವುದಕ್ಕೆ ನಮ್ಮ ಹೃತ್ಪೂರ್ವಕ ಅಭಿನಂದನೆಗಳು.

**ಬರಗೂರು :** ಸಂತೋಷ.

**ಹೊಸತು :** ಸರ್, ನಿಮ್ಮ ಬರಹಗಳಿಗೆ ಒತ್ತಾಸೆಯಾದ ನಿಮ್ಮ ಬಾಲ್ಯದ ಕೌಟುಂಬಿಕ ವಿವರಗಳನ್ನು ನಮ್ಮೊಡನೆ ಹಂಚಿಕೊಳ್ಳುವಿರಾ ?

**ಬರಗೂರು :** ಬರಹಕ್ಕೆ ಒತ್ತಾಸೆಯಾದ್ದು ಅಂತ ಅಲ್ಲ, ಆದರೆ ನನ್ನ ಬಾಲ್ಯ ಕುರಿತು ಹೇಳೋದಾದ್ರೆ, ಆಗ ನಮಗೆ ಒಂದು ರೀತಿಯಲ್ಲಿ ಐಡೆಂಟಿಟಿ ಕ್ರೈಸಿಸ್ ಇತ್ತು. ಅದು ಜಾತಿಯ ಅಸ್ಮಿತೆಯ ಪ್ರಶ್ನೆಯೂ ಹೌದು. ಊರಿನಲ್ಲಿ ನಾವು ಸಾಮಾಜಿಕವಾಗಿಯೂ, ಆರ್ಥಿಕವಾಗಿಯೂ ಬಲಾಢ್ಯರಲ್ಲ, ನನ್ನ ಸ್ನೇಹಿತರ ಬಳಗದಲ್ಲಿ ಎಲ್ಲ ಜಾತಿಯವರು ಇದ್ದರು. ಅವರು ನನ್ನೊಂದಿಗೆ ಚೆನ್ನಾಗಿಯೇ ನಡ್ಕೊಳ್ತಿದ್ರು. ಯಾರೂ ನನ್ನನ್ನು ಕೀಳರಿಮೆಯಿಂದ ನರಳುವಂತೆ ಮಾಡಲಿಲ್ಲ. ಆದರೆ ದೀಪಾವಳಿಗೆ ಬೇರೆಯವರು ಪಟಾಕಿ ಹಚ್ಚಿದರೆ ನಮಗೆ ಪಟಾಕಿಯಿರ್ತಿರಲಿಲ್ಲ. ಹಾಗೆಯೇ ನಾನು ಪಿ.ಯು.ಸಿ. ಮುಗಿಸುವವರೆಗೂ ನನ್ನ ಕಾಲಿಗೆ ಚಪ್ಪಲಿ ಇರಲಿಲ್ಲ. ಇಂತಹ ಸಂದರ್ಭದಲ್ಲಿ ಎಲ್ಲರೂ ನನ್ನನ್ನು ಗುರ್ತಿಸಬೇಕಾದ್ರೆ, ನಾನು ಚೆನ್ನಾಗಿ ಓದಿ ಬುದ್ಧಿವಂತ ಆಗಬೇಕು. ಅವರು ನನ್ನನ್ನು ಗುರ್ತಿಸಬೇಕು, ಅನ್ನುವ ಆಸೆ ನನ್ನಲ್ಲಿತ್ತು.

**ಹೊಸತು :** ನಿಮ್ಮ ತಾಯ್ತಂದೆಯವರು ಓದಿದವರಾ ?

ನನ್ನ ತಂದೆ ಆ ಕಾಲದ ಎಲ್.ಎಸ್. ಓದಿದ್ದರು. ಕೂಲಿ ಮಠದಲ್ಲಿ ಮೇಷ್ಟರಾಗಿದ್ದರು. ಅವರ ಮನೆಯಲ್ಲಿ ಅವರೇ ಓದಿದವರು. ಉಳಿದವರು ಓದಿರಲಿಲ್ಲವಾದ್ದರಿಂದ, ಅವರ ಪಾಲಿಗೆ ಬಂದ ನೀರಾವರಿ ಜಮೀನನ್ನು ಅವರ ಅಣ್ಣಂದಿರಿಗೆ ಬಿಟ್ಟುಕೊಟ್ಟು ಸ್ವಲ್ಪ ಖುಷ್ಕಿ ಭೂಮಿಯನ್ನು ಮಾತ್ರ ಇಟ್ಟುಕೊಂಡಿದ್ದರು. ನಮ್ಮ ತಂದೆಗೆ ನಾವು ಮೂವರು ಗಂಡುಮಕ್ಕಳು ಮತ್ತು ಆರು ಜನ

ಸಂದರ್ಶಕರು
**ಡಾ॥ ಎನ್. ಗಾಯತ್ರಿ**
**ಡಾ॥ ಸಿದ್ದನಗೌಡ ಪಾಟೀಲ**

ಚಿತ್ರಗಳು
**ಮೈತ್ರಿ**



ಹೆಣ್ಣುಮಕ್ಕಳು. ಇಬ್ಬರು ಅಣ್ಣಂದಿರು ಮೇಷ್ಟ್ರು ಆಗಿದ್ದರು.

ಚಿಕ್ಕವರಿದ್ದಾಗ ಶಿಕ್ಷಣ ತುಂಬ ಮುಖ್ಯ ಅಂತ ಕಂಡುಕೊಂಡೆ. ನಾನು ಎಲ್ಲಾ ತರಗತಿಯಲ್ಲೂ ಕ್ಲಾಸಿಗೆ ಫಸ್ಟ್ ಬರುತ್ತಿದ್ದೆ. ಅದಕ್ಕೆ ಡಬಲ್ ಪ್ರೊಮೊಷನ್ ಕೊಟ್ಟು ಮುಂದಿನ ತರಗತಿಗಳಿಗೆ ಹಾಕುತಿದ್ರು.

**ಹೊಸತು :** ನಿಮ್ಮ ಬರವಣಿಗೆಗೆ ಪ್ರೋತ್ಸಾಹ ಎಲ್ಲಿಂದ ಬಂತು ?

**ಬರಗೂರು :** ನಾನು ಮಿಡ್ಲ್ ಸ್ಕೂಲಿನಲ್ಲಿ ಓದುತ್ತಿದ್ದಾಗ ನಮಗೆ ರವೀಂದ್ರನಾಥ ಠಾಗೋರರ 'ನನ್ನ ಬಾಲ್ಯ' ಎನ್ನುವುದು ಉಪಪಠ್ಯವಾಗಿತ್ತು. ಅದು ಅವರ ಆತ್ಮಚರಿತ್ರೆಯ ಒಂದು ಭಾಗ. ಅದು ನನ್ನನ್ನು ಆ ವಯಸ್ಸಿಗೇ ಬಹು ಪ್ರಭಾವಿಸಿತು. ರವೀಂದ್ರರಾದರೋ ಆಗರ್ಭ ಶ್ರೀಮಂತರು. ಅವರು ಶಾಲೆಯಲ್ಲಿ ತಾವು ರಚಿಸಿದ ಕವನಗಳನ್ನು ವಾಚಿಸಿದಾಗ ಉಪಾಧ್ಯಾಯರು ಬಹಳ ಪ್ರಶಂಸಿಸುತ್ತಾರೆ ಮತ್ತು ತರಗತಿಯ ಮಕ್ಕಳೆಲ್ಲಾ ಚಪ್ಪಾಳೆ ತಟ್ಟಿ ತಮ್ಮ ಮೆಚ್ಚುಗೆಯನ್ನು ಸೂಚಿಸುತ್ತಾರೆ. ಅದನ್ನು ಓದಿ ನನಗನ್ನಿಸಿತು, ನಾನೂ ಕವಿಯಾಗಬೇಕು. ಶ್ರೀಮಂತರು ಮಾತ್ರ ಕವನ ಬರೆಯುವುದಾ, ನಾನೂ ಕವಿಯಾಗಿ ಎಲ್ಲರ ಮೆಚ್ಚುಗೆ ಗಳಿಸಬೇಕಂತ ಅನ್ನಿಸಿತು.

ನನಗೊಬ್ಬ ಗೆಳೆಯ ಇದ್ದ. ಅವನು ನಮ್ಮ ಶಾಲೆ ಬಿಟ್ಟು ಹೊರಟುಹೋದ. ಆಗ ಅವನನ್ನು ಕುರಿತು, "ಈ ಶಾಲೆಯಿಂದ ದೂರ ಆದೆ ಏಕೆ ಗೆಳೆಯನೇ" ಅಂತ ಹಾಡು ಬರೆದಿದ್ದೆ. ಇದು ಆ ಕಾಲದಲ್ಲಿ ತುಂಬ ಪ್ರಸಿದ್ಧವಾಗಿದ್ದ ರಾಜಕುಮಾರ್ ಚಿತ್ರ "ಓಹಿಲೇಶ್ವರ"ದ "ಈ ದೇಹದಿಂದ ದೂರ ಆದೆ ಏಕೆ ಆತ್ಮನೇ ?" ಎಂಬ ಹಾಡಿನ ಧಾಟಿಯಲ್ಲಿ ರಚಿತವಾಗಿತ್ತು. ರವೀಂದ್ರರ ಆ ಪುಸ್ತಕದಲ್ಲಿ ರವೀಂದ್ರರು ಬಿಡಿಸಿದ ಕೆಲವು ಚಿತ್ರಗಳಿದ್ದವು. ಅದನ್ನು ನೋಡಿ ನನಗೂ ಚಿತ್ರ ಬರೆಯಬೇಕೆನಿಸಿ, ನಾನು ಚಿತ್ರ ಬರೆಯಲು ಆರಂಭಿಸಿದೆ. ಹೀಗೆ ನನಗೆ ಅವರಿಗಿದ್ದ ಸೌಲಭ್ಯಗಳಿಲ್ಲದಿದ್ದರೂ ನಾನು ಅವರಂತೆ ಏಕೆ ಆಗಬಾರದು, ಆಗಬೇಕು ಎನ್ನುವ ಛಲ ನನ್ನನ್ನು ಅಲ್ಲಿಂದ ಇಲ್ಲಿಯವರೆಗೂ ಕರೆದುಕೊಂಡು ಬಂದಿದೆ. ಇದನ್ನು ವೈಯಕ್ತಿಕ ಒತ್ತಡ ಎನ್ನುವುದಕ್ಕಿಂತ ಸಾಮಾಜಿಕ, ಆರ್ಥಿಕ ಒತ್ತಡ ಅಂತ ನಾನು ಗುರ್ತಿಸುತ್ತೇನೆ. ನಮ್ಮ ಊರಿನಲ್ಲಿ ನನ್ನನ್ನು ಚಂದ್ರಣ್ಣ ಎಂದು ಕರೆಯುತ್ತಿದ್ದರು. ಚಂದ್ರಣ್ಣ, ಅಂದರೆ ಏನೋ ವಿಶೇಷ ಅಂತ ಎಲ್ಲರ ಭಾವನೆ. ಊರಿಗೆ ನಾನೇ ದೊಡ್ಡ ಕವಿ ಅನ್ನಿಸ್ಕೊಂಡಿದ್ದೆ.

**ಹೊಸತು :** ನಿಮ್ಮ ಓದು ಎಲ್ಲ ಎಲ್ಲಿ ನಡೆದದ್ದು ?

**ಬರಗೂರು :** ನಾನು ಹೈಸ್ಕೂಲು, ನಂತರ ಕಾಲೇಜು ಓದಿದ್ದು ತುಮಕೂರಿನಲ್ಲಿ. ನಮ್ಮೂರಿನಲ್ಲಿ ಎಸ್.ಎಸ್.ಎಲ್.ಸಿ.ಯಲ್ಲಿ ಫಸ್ಟ್ ಕ್ಲಾಸ್ ತಗೊಂಡವರಲ್ಲಿ ನಾನೇ ಮೊದಲಿಗ. ಹಾಗೆಯೇ ನಮ್ಮೂರಲ್ಲಿ ಎಂ.ಎ. ಓದಿದವರಲ್ಲಿಯೂ ನಾನೇ ಮೊದಲಿಗ. ನಮ್ಮ ಊರಿನಲ್ಲಿ ಹೈಸ್ಕೂಲ್ ಮುಗಿಸಿದ ಮೇಲೆ ತುಮಕೂರಿನಲ್ಲಿ ಓದು ಮುಂದುವರಿಸಿದೆ. ತುಮಕೂರಿನಲ್ಲಿ ಒಂದು ರೂಮ್ ಮಾಡಿಕೊಂಡು, ಅಡಿಗೆ ಮಾಡಿಕೊಂಡು ಓದಿದ್ದು. ತುಮಕೂರಿನಲ್ಲಿ ಬಿ.ಎ. ಆದಮೇಲೆ ತಕ್ಷಣ ಎಂ.ಎ. ಮಾಡುವುದು ಸಾಧ್ಯವಾಗಲಿಲ್ಲ. ನಮ್ಮ ತಂದೆ ಹೆಣ್ಣುಮಕ್ಕಳ ಮದುವೆಗೆಂದು ಸಾಲ ಮಾಡಿಕೊಂಡಿದ್ದರು. ಅವರಿಗೆ ಸಾಲ ತೀರಿಸಲು ಸಹಾಯ ಮಾಡಬೇಕಿತ್ತು. ನಮ್ಮಿಬ್ಬರು ಅಣ್ಣಂದಿರೂ ಅಷ್ಟೇ. ಓದು ಮುಗಿಸಿ ಕೆಲಸಕ್ಕೆ ಸೇರಿ ತಂದೆಗೆ ಸಹಾಯ ಮಾಡ್ತಿದ್ದರು. ಬಿ.ಎ. ಆದಮೇಲೆ ಪಾವಗಡ ತಾಲ್ಲೂಕಿನ ಕೊಂಡೆತಿಮ್ಮನ ಹಳ್ಳಿಯಲ್ಲಿ ಕನ್ನಡ ಮೇಷ್ಟ್ರು ಆಗಿ ಕೆಲಸಕ್ಕೆ ಸೇರಿದೆ. ಅದೊಂದು ಪ್ರೈವೇಟ್ ಸ್ಕೂಲ್. ಹೆಸರಿಗೆ ಕನ್ನಡ ಮೇಷ್ಟ್ರು ಆದರೂ ಸಮಾಜಶಾಸ್ತ್ರ, ಗಣಿತ, ಡ್ರಿಲ್ ಹೇಳಿಕೊಡೋದು ಎಲ್ಲಾ ಮಾಡುತ್ತಿದ್ದೆ. ಇದರ ಜೊತೆಗೆ ನಾಟಕ ಬರೆಯೋದು, ಮಕ್ಕಳಿಂದ ನಾಟಕ ಆಡಿಸೋದು, ಎಲ್ಲಾ ಮಾಡ್ತಿದ್ದೆ. ವಾರದಲ್ಲಿ ಒಂದು ದಿನ ವಿದ್ಯಾರ್ಥಿಗಳಿಗೆ ಭಾಷಣ ಸ್ಪರ್ಧೆ ಅಥವಾ ಆಶುಭಾಷಣದ ಕಾರ್ಯಕ್ರಮ ಏರ್ಪಡಿಸುತ್ತಿದ್ದೆ.

ಹೀಗೆ ಒಂದು ವರ್ಷ ಅಲ್ಲಿ ಕೆಲಸ ಮಾಡಿ ದುಡಿದ ದುಡ್ಡನ್ನು ನಮ್ಮ ತಂದೆಯವರಿಗೆ ಕೊಟ್ಟು ಜೇಬಲ್ಲಿ ೨೦೨ ರೂಪಾಯಿಟ್ಟುಕೊಂಡು ಬೆಂಗಳೂರಿಗೆ ಎಂ.ಎ. ಓದಲಿಕ್ಕೆ ಬಂದೆ. ಆಗ ಮೆಜೆಸ್ಟಿಕ್‌ನಲ್ಲಿ ಬಂಡಿ ಶೇಷಮ್ಮ ಛತ್ರ ಅಂತ ಇತ್ತು. ಅದು ಫ್ರೀ ಹಾಸ್ಟೆಲ್. ಅಲ್ಲಿ ಉಳ್ಕೊಂಡು ಹೆಬ್ಬಾಳದಲ್ಲಿ ಒಂದಷ್ಟು ಹುಡುಗರಿಗೆ ಪಾಠ ಹೇಳ್ಕೊಂಡು ಎಂ.ಎ. ಓದ್ತಿದ್ದೆ.

**ಹೊಸತು :** ಕಾವ್ಯ, ಕಥೆ, ಕಾದಂಬರಿ, ಪ್ರಬಂಧ – ಹೀಗೆ ಎಲ್ಲ ಪ್ರಕಾರಗಳಲ್ಲೂ ಕೃಷಿ ಮಾಡಿದ್ದೀರಿ. ಇದರಲ್ಲಿ ನಿಮ್ಮ ಇಷ್ಟವಾದ ಮಾಧ್ಯಮ ಯಾವುದು ?

**ಬರಗೂರು :** ನನಗೆ ತುಂಬ ಇಷ್ಟವಾದ್ದು ಕಥಾ ಸಾಹಿತ್ಯ ಮತ್ತು ವೈಚಾರಿಕ ಸಾಹಿತ್ಯ. ಶಾಲಾ ಮಕ್ಕಳಿಗೆ ಆಡಿಸಲೆಂದು ಸುಮಾರು ಎಂಟು ನಾಟಕಗಳನ್ನು ಬರೆದಿದ್ದೀನಾದರೂ ಅದನ್ನು ಪ್ರಕಟಿಸಿಲ್ಲ. ಇನ್ನು ನನ್ನ ಕವಿತೆಗಳು ಚೆನ್ನಾಗಿವೆ ಎಂದು ಸ್ನೇಹಿತರು ಹೇಳಿದ್ದಾರೆ.

**ಹೊಸತು :** ಸಾಮಾಜಿಕ ಕಾಳಜಿಯ ನಿಮ್ಮ ಚಟುವಟಿಕೆ ಆರಂಭವಾದದ್ದು ಯಾವಾಗ ?

**ಬರಗೂರು :** ಸಾಮಾಜಿಕ ಕಾಳಜಿಯೆಂಬುದು ಪ್ರಜ್ಞಾಪೂರ್ವಕವಾಗಿ ಹುಟ್ಟಿಕೊಂಡದ್ದಲ್ಲ. ಅದು ನನ್ನ ಬದುಕಿನ ವಾಸ್ತವವೇ ಆ ಪ್ರಜ್ಞೆಯಾಗಿ ರೂಪುಗೊಂಡಿದೆ. ಉದಾಹರಣೆಗೆ, ನಾನು ಮೇಷ್ಟ್ರು ಆಗಿದ್ದಾಗ ಒಂದು 'ಪೊರಕೆ ವೀರ' ಎಂದು ಕವನ ಬರೆದಿದ್ದೆ. ನಮ್ಮ ಶಾಲೆಯ ಕೆಲವು ಮಕ್ಕಳು ನನ್ನ ಕೊಠಡಿಯಲ್ಲಿ ಮಲಗಿಕೊಳ್ಳುತ್ತಿದ್ದರು. ಅವರಿಗೆ ಬೆಳಗ್ಗೆ ಎದ್ದಾಗ ಕಾಣುವಂತೆ ಪೊರಕೆಯಿಟ್ಟಿರುತ್ತಿದ್ದೆ. ಪೊರಕೆಯನ್ನು ಅಶುಭ, ಎದ್ದ ತಕ್ಷಣ ನೋಡಬಾರದು ಎನ್ನುವ ನಂಬಿಕೆಯನ್ನು ವಿರೋಧಿಸುವುದಕ್ಕಾಗಿಯೇ ಹೀಗೆ ಮಾಡುತ್ತಿದ್ದೆ. ಪೊರಕೆ ಶುದ್ಧಿ ಮಾಡುವ ಸಾಧನ. ಅದಕ್ಕೆ ಯಾಕೆ ಅಂತ ಕಳಂಕ ? ಅಂದರೆ ಒಂದು ತಪ್ಪಾದ ನಂಬಿಕೆಯನ್ನು ಮೀರುವ ಪ್ರಯತ್ನವಾಗಿ ಹೀಗೆ ಮಾಡುತ್ತಿದ್ದೆ.

ನಮ್ಮ ಊರಿನಲ್ಲಿದ್ದಾಗಲೂ ಊರಿನ ಹಿರಿಯರನ್ನು ಕೇಳದೆ ಯಾವ ಕೆಲಸವನ್ನೂ ಮಾಡಬಾರದು ಅಂತ ಒಂದು ಪದ್ಧತಿ. ಆದರೆ ನಾನು ಪಿ.ಯು.ಸಿ. ಓದುತ್ತಿದ್ದಾಗ ನಾನು ಊರಿನಲ್ಲಿ ಯಾರ ಅನುಮತಿಯನ್ನು ಕೇಳದೆ ಒಂದು ಕನ್ನಡ ಸಂಘವನ್ನು ಶುರು ಮಾಡಿದ್ದೆ. ನಾಟಕವನ್ನು ಆಡಿಸುತ್ತಿದ್ದೆ.

**ಹೊಸತು :** ನಿಮ್ಮ ವೈಚಾರಿಕ ಚಿಂತನೆಯ ಬೆಳವಣಿಗೆಗೆ ಯಾರು ಕಾರಣ ?


ಸಂದರ್ಶಕರಾದ ಡಾ॥ ಎನ್. ಗಾಯತ್ರಿ, ಡಾ॥ ಸಿದ್ದನಗೌಡ ಪಾಟೀಲ ಬರಗೂರರೊಂದಿಗೆ

**ಬರಗೂರು :** ನನ್ನನ್ನು ಚಿಕ್ಕವನಿರುವಾಗ ಪ್ರಭಾವಿಸಿದ್ದು ಗಾಂಧಿಯವರ ಸತ್ಯ ಕಥೆ. ನನಗೆ ಈಗಲೂ ಪ್ರಾಮಾಣಿಕತೆ ಮತ್ತು ಸತ್ಯನಿಷ್ಠೆಗೆ ಅವರೇ ಮಾದರಿ. ನನ್ನ ಮೊದಲ ಅಣ್ಣ ಬೆಂಗಳೂರಿಗೆ ಬರುತ್ತಿದ್ದಾಗ ಅವರ ಸ್ನೇಹಿತರ ಜೊತೆ ಆಗ ಮೆಜೆಸ್ಟಿಕ್‌ನಲ್ಲಿದ್ದ ನವಕರ್ನಾಟಕ ಪ್ರಕಾಶನದ ಅಂಗಡಿಗೆ ಹೋಗುತ್ತಿದ್ದರು. ಅಲ್ಲಿ ಸೋವಿಯೆತ್ ಸಾಹಿತ್ಯದ ಕೆಂಪು ಪುಸ್ತಕಗಳು ಉಚಿತವಾಗಿ ಸಿಕ್ಕುತ್ತಿತ್ತೆಂದು ತರುತ್ತಿದ್ದರು. ಅದನ್ನು ನಾನು ತೆಗೆದುಕೊಂಡು ಓದುತ್ತಿದ್ದೆ. ಅದರಲ್ಲಿ ಈಗಲೂ ನನಗೆ ನೆನಪಿರುವುದು ಲೆನಿನ್ ಬರೆದ 'ಕರ್ತವ್ಯವೇನು' ಎನ್ನುವ ಪುಸ್ತಕ. ಇದು ನನಗೆ ಯೋಚಿಸುವಂತೆ ಮಾಡುತ್ತಿತ್ತು. ಹಾಗೆಯೇ ನಾನು ಅಂಬೇಡ್ಕರ್‌ರನ್ನು ಓದ್ಕೊಂಡಿದ್ದೆ.

ನನ್ನ ಸಾಮಾಜಿಕ ಪ್ರಜ್ಞೆ ನನಗೆ ಓದಿನಿಂದ ಬಂದದ್ದು ಅಂತ ನಾನು ತಿಳ್ಕೊಂಡಿಲ್ಲ. ನನ್ನ ಎದುರಿಗೆ ಶ್ರೀಮಂತರನ್ನು, ಅವರ ಜೀವನಶೈಲಿಯನ್ನು ನೋಡುತ್ತಿದ್ದೆ. ಹಾಗೆಯೇ, ನಮ್ಮ ಒಟ್ಟು ಸಮಾಜದ ಸಂರಚನೆಯಲ್ಲೇ ಇರುವ ಬಡವ-ಬಲ್ಲಿದರ ಕುರಿತಾದ ತಾರತಮ್ಯಗಳು ನನಗೆ ಎದ್ದು ಕಾಣುತ್ತಿದ್ದವು. ನನ್ನ ಗೆಳೆಯರಲ್ಲಿ ಅಸ್ಪೃಶ್ಯರಿದ್ದರು. ಹಾಗೆಯೇ ನಾಗರಾಜರಾವ್ ಅಂತ ನನಗೆ ತುಂಬ ಹತ್ತಿರದ ಬ್ರಾಹ್ಮಣ ಗೆಳೆಯನೊಬ್ಬನಿದ್ದ. ಹೀಗೆ ಎಲ್ಲ ಸ್ತರದ ಜೀವನವನ್ನು ನಾನು ಹತ್ತಿರದಿಂದ ಕಂಡಿದ್ದೆ. ಈ ಅನುಭವಗಳಿಗೆ ನಾನು ಓದಿಕೊಂಡ ವಿಚಾರಗಳು ತಾಳೆಯಾಗುತ್ತಿದ್ದವು. ೧೯೩೨ರ ನಂತರದ ಗಾಂಧಿ ನನಗೆ ತುಂಬ ಮುಖ್ಯ ಆಗುತ್ತಿದ್ದರು. ಅವರ ವಿಚಾರಗಳಲ್ಲೇ ಒಂದು ಮಹತ್ತರ ಬದಲಾವಣೆ ಯಾಗಿರುವುದನ್ನು ನಾವು ಕಾಣುತ್ತೇವೆ. ಆ ನಂತರ ಗಾಂಧಿ ಜಾತಿ, ವರ್ಗವನ್ನು ಕುರಿತು ಮುಕ್ತವಾಗಿ ಮಾತನಾಡುತ್ತಾರೆ. ಒಬ್ಬ ಅಮೇರಿಕನ್ನರಿಗೆ ನೀಡಿದ ಸಂದರ್ಶನದಲ್ಲಿ ಅವರು "ನಮಗೆ ವರ್ಗರಹಿತ ಸಮಾಜ ಬೇಕು" ಅಂತ ಹೇಳ್ತಾರೆ. ನಾನು ಅಂಬೇಡ್ಕರ್‌ರಲ್ಲಿ ಗಾಂಧಿಯನ್ನು ನೋಡೋದಕ್ಕೆ ಇಷ್ಟಪಡುತ್ತೀನಿ. ಗಾಂಧಿ ಯವರ ಆರಂಭದ ನಂಬಿಕೆಗಳನ್ನು ನಾವು ಒಪ್ಪದಿರ ಬಹುದು. ಆದರೆ ಅವರು ಎಂದೂ ಅಪ್ರಾಮಾಣಿಕ ರಾಗಿರಲಿಲ್ಲ. ಹಾಗೆಯೇ ನನ್ನ ಜೀವನಾನುಭವಗಳನ್ನು ಅರ್ಥೈಸಿಕೊಳ್ಳೋದಕ್ಕೆ ನನಗೆ ಅಂಬೇಡ್ಕರ್ ಮತ್ತು ಮಾರ್ಕ್ಸ್ ವಿಚಾರಗಳು ತಾಳೆ ಆದವು. ಮಾರ್ಕ್ಸ್ ಕೂಡ ಜಾತಿಯನ್ನು ಕುರಿತು ಬರೆದಿದ್ದಾರೆ. ಅವರು ಭಾರತದ ಸ್ವಾತಂತ್ರ್ಯ ಹೋರಾಟದ ಬಗ್ಗೆ ಬರೆಯುತ್ತಾ ಜಾತಿ ವಿನಾಶದ ಕುರಿತು ಬರೆಯುತ್ತಾರೆ. ಕೈಗಾರೀಕರಣ ಆಗುತ್ತಿದ್ದ ಸಂದರ್ಭದಲ್ಲಿ ಮಾರ್ಕ್ಸ್‌ನ ವಿಚಾರಗಳು ಸತ್ಯವಾಗುತ್ತಾ ಹೋದವು. ಅಂಬೇಡ್ಕರ್ ಒಂದು ಕಡೆ "ಮಾರ್ಕ್ಸ್‌ವಾದ ಉಲ್ಲಂಘಿಸಲಾರದ ವೇದವಾಕ್ಯ ಆಗಬಾರದು" ಅಂತ ಹೇಳುತ್ತಾರೆಯೇ ಹೊರತು ಅವರು ಎಂದೂ ಕಮ್ಯೂನಿಸಂ ವಿರೋಧಿಯಾಗಿರಲಿಲ್ಲ. ಅವರು ಕಮ್ಯೂನಿಸ್ಟರ ಕೆಲವು ಆಚರಣೆಗಳನ್ನು ವಿರೋಧಿಸುತ್ತಿದ್ದರು, ಅಷ್ಟೆ. ಹಾಗಾಗಿ ಗಾಂಧಿ, ಅಂಬೇಡ್ಕರ್ ಮತ್ತು ಮಾರ್ಕ್ಸ್ ಎಲ್ಲರ ಮೌಲ್ಯಗಳನ್ನೂ ನನ್ನೊಳಗೆ ಒಪ್ಪಿಕೊಂಡು ಅವು ನನ್ನ ಮೌಲ್ಯಗಳೂ ಆದವು. ನನ್ನ ಜೀವನಾನುಭವಗಳೇ ನನ್ನ ವಿಚಾರವನ್ನು ಗಟ್ಟಿ ಮಾಡಿದವು.

## ಕಾಮ ಮೋಹ

ಅವಳೆನ್ನ ಮೋಹಕ
ಕಂಗಳ ಸೆರೆಮನೆಯಲ್ಲಿಟ್ಟಿದ್ದಾಳೆ.
ಹಾಳು ಗಂಡಸುತನದ
ಅವಸಾನ ಎಂದು ಆಗತ್ತೊ ???
ಅಂದು ಬುದ್ಧನ ಸನಿಹ
ಓಡಿ ಹೋಗಬೇಕು,
ಗಂಡು ಕಲ್ಲು ಬಂಡೆ
ಶಿಲೆಯಾದರೂ ಆಗಲಿ
ಅವಳಿಗೆ ಕರಗಿ
ಮಣ್ಣಾಗದಿರಲಿ !!!
ಸುಖದಮಲಿಗೆ ಹಂಬಲಿಸುವ
ಕಾಮದಕ್ಷಿಯ ನಗೆಯ
ನೋಟಕೆ ಬೆವರಿನರಿವು
ದೇಹಗಳೆರಡ ಬೆಚ್ಚಗಿರಿಸಿ.

ಜೀವದೊಡಲು ಕಣ್ತೆರೆದು
ನೋಡಿದೆ ನಗುತ್ತ
ನೀನೊಬ್ಬ ಬಾಕಿ ಇದ್ದೆ
ಬಾ ನನ್ನತ್ತವೆಂದು
ಮುಗಿಯದೂರಿನ ಪಯಣವಿದು
ಪಂಜನ್ನು ಹಚ್ಚಿ ಅಣಿಯಾಗಿರು
ಕತ್ತಲಾಟದ ಕೊನೆಯ ಗಳಿಗೆಗೆ
ಸಾವೆಂಬುದು ಪೂರ್ಣವಿರಾಮವಿಡುವುದೆಂದು.

**ರಾಜುಗೌಡ ನಾಗಮಂಗಲ**
ನಂ. ೧೪೧, ಗಾಂಧಿಬಜಾರ್ ಸರ್ಕಲ್ ಬಸವನಗುಡಿ, ಬೆಂಗಳೂರು – ೫೬೦ ೦೦೪

**ಹೊಸತು :** ಸರ್, ನಿಮ್ಮ ಸಂಘಟನಾತ್ಮಕ ಪ್ರವೃತ್ತಿ ಅಭಿವ್ಯಕ್ತಿ ಪಡೆದದ್ದು ಯಾವಾಗಿನಿಂದ ?

**ಬರಗೂರು :** ನನ್ನ ಮೊದಲ ಚಟುವಟಿಕೆ ಆರಂಭವಾದದ್ದೇ ಕನ್ನಡಪರ ಚಟುವಟಿಕೆಯಿಂದ. ಪಿ.ಯು.ಸಿ. ಮುಗಿಸಿ ಊರಿಗೆ ಹಿಂತಿರುಗಿದ ನಂತರ ಊರಿನಲ್ಲಿ ಒಂದು ಕನ್ನಡ ಸಂಘವನ್ನು ಕಟ್ಟಿದೆವು. ಅದರಲ್ಲೂ ಒಂದು ರೀಡಿಂಗ್ ರೂಮ್ ಅಂತ ಮಾಡಿದ್ದೆವು. ಇದಕ್ಕೆ ತಿಂಗಳಿಗೆ ೬ ರೂಪಾಯಿ ಬಾಡಿಗೆ ಕೊಡ್ತಿದ್ವಿ. ಆ ಊರಿನ ಧನಿಕರನ್ನು ಕೇಳಿ ಅವರು ಒಂದೊಂದು ಪತ್ರಿಕೆಯನ್ನು ನಮ್ಮ ರೀಡಿಂಗ್ ರೂಮ್‌ಗೆ ಹಾಕಿಸ್ತಿದ್ವಿ. ನಾನು ಊರಲ್ಲಿ ಇರದಾಗಲೂ ಬೇರೆಯವರು ಅದನ್ನು ನಡೆಸಿಕೊಂಡು ಹೋಗುತ್ತಿದ್ದರು. ಊರಿನವರು ಯಾರು ಬೇಕಾದರೂ ಬಂದು ಇಲ್ಲಿ ಪೇಪರ್ ಓದಬಹುದಿತ್ತು. ಸುಮಾರು ಆರು ವರ್ಷಗಳ ಕಾಲ ಈ ರೀಡಿಂಗ್ ರೂಮ್ ನಡೆಸಿದೆವು.

ಸ್ಕೂಲಿನಲ್ಲಿದ್ದಾಗಲೂ ನಾನೇ ಮಾನಿಟರ್ ಆಗಿದ್ದೆ. ಹಾಗೆ ಕಾಲೇಜಿಗೆ ಹೋದಮೇಲೆ ವಿದ್ಯಾರ್ಥಿ ಕ್ರಿಯಾ ಸಮಿತಿಯ ನೇತೃತ್ವ ವಹಿಸಿದ್ದೆ. ನಂತರದ ದಿನಗಳಲ್ಲಿ ನನ್ನ ಓದು ಮತ್ತು ಅನುಭವದಿಂದಾಗಿ ಒಂದು ಎಡಪಂಥೀಯ ವಿಚಾರಧಾರೆಯ ಖಚಿತತೆ ಮತ್ತು ಸ್ಥೂಲವಾದ ಗ್ರಹಿಕೆ ನನ್ನೊಳಗಿತ್ತು. ಇದಕ್ಕೆ ನನ್ನ ಪರಿಸರವೂ ಸಹಾಯ ಮಾಡಿತು. ನಾನು ಎಂ.ಎ. ಮುಗಿಸಿದ ಮೇಲೆ ತುಮಕೂರಿನಲ್ಲಿ ಕಾಲೇಜೊಂದರಲ್ಲಿ ಶಿಕ್ಷಕನಾಗಿ ಕೆಲಸ ಮಾಡುತ್ತಿದ್ದೆ. ಅಲ್ಲಿ ಎಚ್. ಜಿ. ಸಣ್ಣಗುಡ್ಡಯ್ಯ, ಕೆ. ಆರ್. ನಾಯಕ್, ವಿ. ಚಿಕ್ಕವೀರಯ್ಯ, ರಾಮಯ್ಯ – ಇವರುಗಳು ಕ್ರಿಯಾಶೀಲವಾಗಿದ್ದರು. ಅದರಲ್ಲಿ ರಾಮಯ್ಯನವರು ಕಮ್ಯೂನಿಸ್ಟ್ ಪಕ್ಷದವ ರಾಗಿದ್ದು ಯುವಜನ ಸಭಾ ಸಂಘಟನೆಯನ್ನು ಕಟ್ಟಿದ್ದರು. ಅದರ ಉದ್ಘಾಟನೆಗೆ ಡಾ॥ ಜಿ. ಆರ್. ಅವರು ಬಂದಿದ್ದರು. ಸಾವಿತ್ರಮ್ಮನ ಛತ್ರದಲ್ಲಿ ಅಂದು ಜಿ. ಆರ್. ಮಾಡಿದ ಭಾಷಣ ನನಗೆ ಈಗಲೂ ನೆನಪಿದೆ.

**ಹೊಸತು :** ಸರ್, ನಿಮಗೆ ಬಂಡಾಯ ಸಾಹಿತ್ಯ ಸಂಘಟನೆಯನ್ನು ಪರ್ಯಾಯವಾಗಿ ಕಟ್ಟ ಬೇಕೆಂದೆನಿಸಿದ್ದು ಏಕೆ ?

**ಬರಗೂರು :** ಬಂಡಾಯ ಸಾಹಿತ್ಯ ಸಂಘಟನೆಯು ಆರಂಭವಾಗುವುದಕ್ಕೂ ಮುಂಚಿನಿಂದಲೂ ಲೇಖಕನ ಸಾಮಾಜಿಕ ಕಾಳಜಿಯ ಬಗ್ಗೆ ನಾನು ಸಾಕಷ್ಟು ಚಿಂತಿಸಿದ್ದೆ. ಬರೆದಿದ್ದೆ ಕೂಡ. ಆದರೆ ೧೯೭೯ರಲ್ಲಿಯೇ ಇಂತಹದೊಂದು ಸಂಘಟನೆಯ ಹುಟ್ಟಿಗೆ ಹಲವಾರು ಕಾರಣಗಳಿವೆ. ಹಂಪ ನಾಗರಾಜಯ್ಯನವರು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದಾಗ ಧರ್ಮಸ್ಥಳದಲ್ಲಿ ಅಡಿಗರು ಅಧ್ಯಕ್ಷರಾಗಿ ನಡೆದ ಸಮ್ಮೇಳನವದು. ನವ್ಯ ಪ್ರವರ್ತಕರಾದ ಅಡಿಗರು ಬರಿ ಸಾಹಿತಿಯಾಗಿರಲಿಲ್ಲ. ಅವರು ಜನಸಂಘದಿಂದ ಚುನಾವಣೆಗೆ ನಿಂತಿದ್ದರು. ಅವರು ಪ್ರತಿನಿಧಿಸಿದ ತಾತ್ವಿಕತೆಗೆ ನಮ್ಮ ವಿರೋಧವಿತ್ತು. ಸಾಹಿತ್ಯ ವಿಮರ್ಶೆಯ ಪರಿಭಾಷೆ ಮತ್ತು ಕೃತಿಯ ಶಿಲ್ಪದ ಬಗ್ಗೆ ಮೌಲಿಕವಾಗಿ ಚಿಂತಿಸಿದ ನವ್ಯ ಸಾಹಿತ್ಯದ ಬಗ್ಗೆ ನಮಗೆ ಗೌರವವಿದ್ದರೂ ವೈಯಕ್ತಿಕ ಅನುಭವಕ್ಕೆ ಹೆಚ್ಚು ಒತ್ತು ನೀಡಿದ ನವ್ಯ ಸಾಹಿತ್ಯದ ಬಗೆಗೂ ನಮಗೆ ವಿರೋಧವಿತ್ತು. ಈ ರೀತಿ ಚಿಂತಿಸುವ ಹಲವಾರು ಮಂದಿ ನಮ್ಮ ರಾಜ್ಯದಲ್ಲಿದ್ದರು. ಮೊದಲಿಗೆ ಈ ಬಂಡಾಯದ ಬೀಜ ಹುಟ್ಟಿಕೊಂಡದ್ದು ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ವಿಭಾಗದಲ್ಲಿ. ನನ್ನ ಸಹೋದ್ಯೋಗಿ ಗಳಾಗಿದ್ದ ಡಿ.ಆರ್.ಎನ್., ಸಿದ್ದಲಿಂಗಯ್ಯ, ಕಾಳೇಗೌಡ ಮುಂತಾದವರು ಕೂಡ ಇದೇ ರೀತಿ ಯೋಚಿಸಿ ಒಂದು ಪರ್ಯಾಯ ಸಮ್ಮೇಳನ ಮಾಡುವ ವಿಚಾರ ಹೊತ್ತು ನನ್ನ ಬಳಿ ಬಂದರು. ನಾನು "ಇದೊಂದು ಕೇವಲ ಸಮ್ಮೇಳನವಾದರೆ ಅದಕ್ಕೆ ನನ್ನ ಸಮ್ಮತಿಯಿಲ್ಲ, ಅದನ್ನು ಮುಂದೆ ಚಳುವಳಿಯಾಗಿ ಮುಂದಕ್ಕೊಯ್ಯಬೇಕು ಮತ್ತು ಅದಕ್ಕೊಂದು ಸಂಘಟನೆಯ ಸ್ವರೂಪ ಬೇಕು" ಎಂದೆ. ಎಲ್ಲರೂ ಇದಕ್ಕೆ ಒಪ್ಪಿದರು.

ಕನ್ನಡ ಸಾಹಿತ್ಯ ಪರಿಷತ್ ಜಡವಾಗಿದೆ

ಎಂಬುದು ನಮ್ಮ ನಿಲುವಾಗಿತ್ತು. ಈ ಸಮ್ಮೇಳನದಲ್ಲಿ ಒಂದು ದಲಿತ ಸಾಹಿತ್ಯದ ವಿಚಾರಗೋಷ್ಠಿಯನ್ನು ಏರ್ಪಡಿಸಿ ಎಂದು ಚನ್ನಣ್ಣ ವಾಲೀಕರ ಅವರು ಹಂಪನಾ ಅವರನ್ನು ಕೇಳಿಕೊಂಡಿದ್ದರು. ಅವರು ಆಗ ದಲಿತ ಪತ್ರಿಕೆಯೊಂದನ್ನು ಹೊರತರುತ್ತಿದ್ದರು. ಅವರ ಬೇಡಿಕೆಗೆ ಹಂಪನಾ ಅವರು 'ಆಗುವುದಿಲ್ಲ', ಎಂದಿದ್ದರಂತೆ. ಈ ಕಾರಣವೂ ಸೇರಿ ನಮ್ಮ ನಿರ್ಧಾರ ಗಟ್ಟಿಯಾಯಿತು. ಇದಕ್ಕೆಂದು ಬರೆದ ಕರಪತ್ರದಲ್ಲಿ "ಎಡ ಮತ್ತು ಪ್ರಜಾಸತ್ತಾತ್ಮಕ ನಿಲುವಿಗೆ ಬದ್ಧರಾದ ಎಲ್ಲರೂ ಇದರಲ್ಲಿ ಭಾಗವಹಿಸಬಹುದು. ಈ ಸಮ್ಮೇಳನ ಒಂದು ವ್ಯಕ್ತಿ ಅಥವಾ ಸಂಸ್ಥೆಯ ವಿರುದ್ಧ ನಡೆಯುತ್ತಿಲ್ಲ" ಎಂಬುದನ್ನು ಸ್ಪಷ್ಟಪಡಿಸಿದ್ದೆವು. ಇದಕ್ಕಾಗಿ ಹಲವಾರು ಸಭೆಗಳನ್ನು ಮಾಡಿ ವಿಶಾಲ ವೇದಿಕೆಯನ್ನು ನಿರ್ಮಿಸಿಕೊಂಡೆವು. ಆಗಲೇ ಶೂದ್ರ ಶ್ರೀನಿವಾಸ್, ಸಿ. ಜಿ. ಕೃಷ್ಣಸ್ವಾಮಿ, ಪ್ರಸನ್ನ ಮುಂತಾದವರು ಇದರಲ್ಲಿ ಸೇರಿಕೊಂಡರು. ಮುಖ್ಯವಾಗಿ ಹಂಪನಾ ಅವರು ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ನಮ್ಮ ಸಹೋದ್ಯೋಗಿಯಾಗಿದ್ದವರು. ಆದ್ದರಿಂದ ನಮ್ಮ ಕರಪತ್ರ ತೆಗೆದುಕೊಂಡು ನಾವೆಲ್ಲರೂ ಒಟ್ಟಾಗಿ ಅವರ ಬಳಿ ಹೋಗಿ, ನಮ್ಮ ವಿಚಾರವನ್ನು ಅವರಿಗೆ ವಿವರಿಸಿದೆವು.

ಕೊನೆಗೆ ಧರ್ಮಸ್ಥಳದಲ್ಲಿ ಅಡಿಗರ ಅಧ್ಯಕ್ಷತೆಯಲ್ಲಿ ಪರಿಷತ್ತಿನ ಸಮ್ಮೇಳನ ನಡೆದ ದಿನದಂದೇ ಬೆಂಗಳೂರಿನಲ್ಲೂ ಬಂಡಾಯದ ಪ್ರಥಮ ಸಮ್ಮೇಳನ ನಡೆದು ನಂತರ ಮೂವರು ರಾಜ್ಯ ಸಂಚಾಲಕರು ಆಯ್ಕೆಯಾದರು. ನಾನು, ಇಂದೂಧರ ಮತ್ತು ಸಿದ್ದಲಿಂಗಯ್ಯ ಮೂವರು ಸಂಚಾಲಕರಾಗಿ ಚುನಾಯಿತರಾದೆವು. ಬಿಜಾಪುರ ಸಮ್ಮೇಳನದಲ್ಲಿ ನಾನೊಬ್ಬನೇ ರಾಜ್ಯ ಸಂಚಾಲಕನಾಗಿ ಸುಮಾರು ೮ ವರ್ಷಗಳ ಕಾಲ ಆ ಸ್ಥಾನದಲ್ಲಿ ಕೆಲಸ ಮಾಡಿದೆ.

**ಹೊಸತು :** ಬಿಜಾಪುರ ಸಮ್ಮೇಳನದಲ್ಲಿ ಬಂಡಾಯ ಸಂಘಟನೆಯ ಪದಾಧಿಕಾರಿಗಳು ಪರಿಷತ್ತಿನ ಕಾರ್ಯಕ್ರಮಗಳಲ್ಲಿ ಭಾಗಿಯಾಗುವುದು ಬೇಡ ಎಂಬ ನಿರ್ಣಯ ತೆಗೆದುಕೊಂಡರಲ್ಲಾ, ನಂತರ ಅದು ಹೇಗೆ ಬದಲಾಯಿತು ?

**ಬರಗೂರು :** ಹೌದು, ಇಂತಹದೊಂದು ನಿರ್ಣಯದ ಬಗ್ಗೆ ಬಿಜಾಪುರ ಸಮ್ಮೇಳನದಲ್ಲಿ ಚರ್ಚೆಯಾಯಿತು. ಸಾಹಿತ್ಯ ಪರಿಷತ್ತು ಕೂಡ ಪ್ರಜಾಸತ್ತಾತ್ಮಕ ಸಂಘಟನೆ, ಅದರಲ್ಲಿ ಭಾಗವಹಿಸಬಹುದು, ಎಂದು ಕೆಲವರು ಇಂಥ ನಿರ್ಣಯಕ್ಕೆ ಒಪ್ಪಲಿಲ್ಲ. ಆದರೆ ಬಹುಪಾಲು ಮಂದಿಯ ಅಭಿಪ್ರಾಯ ಬೇರೆಯಾಗಿತ್ತು. ಇದನ್ನೊಂದು ತಾತ್ವಿಕತೆಯ ಪ್ರಶ್ನೆಯಾಗಿ ತೆಗೆದುಕೊಳ್ಳದೆ, ಕಾರ್ಯತಂತ್ರದ ಪ್ರಶ್ನೆಯಾಗಿ ತೆಗೆದುಕೊಂಡು 'ನಾವು ಪರಿಷತ್ತಿನ ಕಾರ್ಯಕ್ರಮದಲ್ಲಿ ಭಾಗವಹಿಸದಿದ್ದರೆ ಸಂಘಟನೆಗೆ ಬಲ ಬರುತ್ತದೆ' ಎಂದು ಅಂತಹ ನಿರ್ಣಯಕ್ಕೆ ಒಪ್ಪಿಗೆ ಸೂಚಿಸಿದರು.

ಈ ಮಧ್ಯೆ ನನ್ನನ್ನು ಸಾಹಿತ್ಯ ಅಕಾಡೆಮಿಯ ಸದಸ್ಯನನ್ನಾಗಿ ನಾಮಕರಣ ಮಾಡಿದ್ದರು. ಆಗ ಹಾ. ಮಾ. ನಾಯಕರು ಅಧ್ಯಕ್ಷರಾಗಿದ್ದರು. ಬಂಡಾಯದ ಸದಸ್ಯರು ಅಕಾಡೆಮಿಯ ಸದಸ್ಯರಾಗಬಹುದೋ ಬೇಡವೋ ಎಂಬ ಪ್ರಶ್ನೆಗಳು ಎದ್ದವು. ಆಗ ನಾನು ನನ್ನ ಸದಸ್ಯ ಸ್ಥಾನಕ್ಕೆ ರಾಜೀನಾಮೆ ಕೊಟ್ಟು ಬಂಡಾಯದ ಸದಸ್ಯರ ಸಭೆ ಕರೆದು ಬಂಡಾಯ ಸದಸ್ಯರು ಅಕಾಡೆಮಿಯ ಸದಸ್ಯತ್ವ ಒಪ್ಪಿಕೊಳ್ಳಬಹುದೋ ಬೇಡವೋ ಎಂಬುದರ ಬಗ್ಗೆ ಚರ್ಚೆ ನಡೆಸಿದ್ದೆವು. ಆದರೆ ಸಭೆಯಲ್ಲಿ ಎಲ್ಲರೂ ಅಕಾಡೆಮಿಯು ಸರ್ಕಾರದ ಸಂಸ್ಥೆಯಾದ್ದರಿಂದ ಅದರ ಸದಸ್ಯರಾಗಬಹುದು ಎಂದೇ ತೀರ್ಮಾನಿಸಿದರು.

ನಂತರ, ದಾವಣಗೆರೆಯಲ್ಲಿ ನಡೆದ ಬಂಡಾಯ ಸಾಹಿತ್ಯ ಸಮ್ಮೇಳನದಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಮತ್ತು ಇತರ ಯಾವುದೇ ವೇದಿಕೆಯ ಕಾರ್ಯಕ್ರಮಗಳಲ್ಲಿ ಬಂಡಾಯದ ಸದಸ್ಯರು ಭಾಗವಹಿಸಬಹುದು, ಆದರೆ ಸದಸ್ಯರಾಗುವಂತಿಲ್ಲ, ಎಂಬ ತೀರ್ಮಾನಕ್ಕೆ ಬರಲಾಯಿತು.

ಇದಾದ ಮೇಲೆ, ಮತ್ತೊಂದು ಘಟನೆ ನಡೆಯಿತು. ಬಂಡಾಯ ಸಾಹಿತ್ಯ ಸಂಘಟನೆಯ ದಶಮಾನೋತ್ಸವದ ಸಂದರ್ಭದಲ್ಲಿ ಜಿ. ಎಸ್. ಸಿದ್ದಲಿಂಗಯ್ಯನವರು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದಾಗ ಬಂಡಾಯ ಸಾಹಿತ್ಯ ಸಂಘಟನೆಯನ್ನು ಕುರಿತು ವಿಚಾರ ಸಂಕಿರಣವನ್ನು ಏರ್ಪಡಿಸಿದ್ದರು. ಹೀಗಾಗಿ ಸಾಹಿತ್ಯ ಪರಿಷತ್ತು ಬಂಡಾಯ ಸಾಹಿತ್ಯ ಸಂಘಟನೆಯನ್ನು ಅಧಿಕೃತವಾಗಿ ಒಪ್ಪಿಕೊಂಡಂತಾಯಿತು.

**ಹೊಸತು :** 'ಸಾಂಸ್ಕೃತಿಕ ನೀತಿ'ಯನ್ನು ಕುರಿತು ನೀವು ಸರ್ಕಾರಕ್ಕೆ ನೀಡಿರುವ ವರದಿ ಇನ್ನು ಅನುಷ್ಠಾನವಾಗಿಲ್ಲ. ಇದರ ಬಗ್ಗೆ ನಿಮಗೇನನ್ನಿಸುತ್ತದೆ ?

**ಬರಗೂರು :** ಹೌದು ಸಾಂಸ್ಕೃತಿಕ ನೀತಿ ಅನುಷ್ಠಾನವಾಗುವುದರಲ್ಲಿ ತಡವಾಗಿದೆ. ಅದಕ್ಕೆ ನನಗೆ ಅಸಮಾಧಾನವಿದೆ. ಆದರೂ ಇನ್ನೊಂದು ರೀತಿಯಲ್ಲಿ ಸರ್ಕಾರ ಇದಕ್ಕೆ ಸಕಾರಾತ್ಮಕವಾಗಿ ಸ್ಪಂದಿಸಿದೆಯೆಂದು ಹೇಳಬಹುದು. ಅಂದರೆ, ಒಮ್ಮೆ ನಾನು ಈ ಕುರಿತು ಮುಖ್ಯಮಂತ್ರಿಯವರಲ್ಲಿ ಮಾತನಾಡಿದೆ. ಅವರು ಕೂಡಲೆ ಸಂಸ್ಕೃತಿ ಸಚಿವೆಯವರಲ್ಲಿ ಈ ಬಗ್ಗೆ ಹೇಳಿದ್ದಾರೆ. ಈ ವರದಿ ಮೂರು ಬಾರಿ ಕ್ಯಾಬಿನೆಟ್ಟಿಗೆ ಬಂದು ಹೋಗಿದೆ. ಉಪಸಮಿತಿಯಲ್ಲೂ ಚರ್ಚೆಯಾಗಿದೆ. ಶೀಘ್ರವಾಗಿ ಸಕಾರಾತ್ಮಕವಾದ ನಿಲುವು ಬರಬಹುದೆಂಬ ಸೂಚನೆಯಿದೆ. ನೋಡಬೇಕು.

**ಹೊಸತು :** ಇದರ ಮುಖ್ಯ ಲಕ್ಷಣಗಳೇನು ?

**ಬರಗೂರು :** ಇದನ್ನು ಎರಡು ನೆಲೆಯಲ್ಲಿ ಮಂಡಿಸಲಾಗಿದೆ. ಒಂದು ಆಶಯಗಳು : ಲಿಂಗತ್ವ ಸಮಾನತೆ, ಚಲನಶೀಲ ಜಾನಪದ, ಜಾತ್ಯತೀತತ್ವ, ಸಾಂಸ್ಕೃತಿಕ ಸ್ವಾಯತ್ತತೆ ಮತ್ತು ಬಹುತ್ವವನ್ನು ಕಾಪಾಡುವುದು – ಇವೇ ಮುಂತಾದ ಸಂವಿಧಾನದತ್ತವಾಗಿರುವ ಆಶಯಗಳು. ಎರಡನೆಯದು, ಇವುಗಳ ಅನುಷ್ಠಾನಕ್ಕೆ ಳಳ ಶಿಫಾರಸ್ಸುಗಳನ್ನು ಮಾಡಲಾಗಿದೆ. ಅತ್ಯಂತ ಕಡಿಮೆ ಅವಧಿಯಲ್ಲಿ, ಕಡಿಮೆ ಖರ್ಚಿನಲ್ಲಿ ಸಿದ್ಧಗೊಳಿಸಿದ ವರದಿಯಿದು. ಇದಕ್ಕೆಂದು ಖರ್ಚಾಗಿರುವ ಹಣ ಕೇವಲ ೮೮,೮೫೦ ರೂಪಾಯಿಗಳು.

**ಹೊಸತು :** ಚಳುವಳಿಗಳ ಉತ್ಕರ್ಷದ ಕಾಲದಲ್ಲಿ ಕ್ರಿಯಾಶೀಲರಾಗಿ ತೊಡಗಿ ಕೊಂಡ ನೀವು ಇಪ್ಪತ್ತೊಂದನೆಯ ಶತಮಾನದ ಅಸ್ಮಿತೆಯ ಚಳುವಳಿಗಳನ್ನು ಹೇಗೆ ವ್ಯಾಖ್ಯಾನಿಸುತ್ತೀರಾ ?

**ಬರಗೂರು :** ಇಪ್ಪತ್ತನೆಯ ಶತಮಾನವನ್ನು ನಾನು 'ಸಂಘಟನೆಯ ಶತಮಾನ' ಎಂದು, ಇಪ್ಪತ್ತೊಂದನೆಯ ಶತಮಾನವನ್ನು 'ವಿಘಟನೆಯ ಶತಮಾನ' ಎಂದು ಕರೆಯಲು ಇಚ್ಛಿಸುತ್ತೇನೆ. ೨೦ನೆಯ ಶತಮಾನದಲ್ಲಿ ಸಂಘಟನೆಗಳಿಗೆ ಒಂದು ತಾತ್ವಿಕ ದಿಕ್ಸೂಚಿಯಿತ್ತು. ಈಗ ಇಪ್ಪತ್ತೊಂದನೆಯ ಶತಮಾನದಲ್ಲಿ ಅಸ್ಮಿತೆಯ ಹುಡುಕಾಟ ದೊಂದಿಗೆ ತಮ್ಮನ್ನು ಗುರುತಿಸಿಕೊಳ್ಳಬಯಸುವ ಹಲವಾರು ಸಮುದಾಯಗಳು ಕಾರ್ಯಪ್ರವೃತ್ತವಾಗಿವೆ. ಇದು ಒಂದು ರೀತಿಯಲ್ಲಿ ಆರೋಗ್ಯಕರ ಪ್ರವೃತ್ತಿಯಾದರೂ, ಮುಂದುವರಿದಂತೆ ಈ ಗುಂಪುಗಳು ವಿಶಾಲ ವೇದಿಕೆಯನ್ನು ಕಟ್ಟಿಕೊಳ್ಳುವ ಮತ್ತು ಪ್ರಗತಿಪರ ಒಕ್ಕೂಟವಾಗುವ ಅಗತ್ಯವಿದೆ. ಅಂತಹ ಮುನ್ಸೂಚನೆಗಳು ಇನ್ನೂ ಸ್ಪಷ್ಟವಾಗಿ ಕಾಣುತ್ತಿಲ್ಲ. ಹಾಗೆ ಆಗದೆ ಇದ್ದರೆ, ಪ್ರತ್ಯೇಕ ಚಳುವಳಿಗಳು, ಪ್ರತಿಗಾಮಿಗಳು ಮತ್ತು ಕೋಮುವಾದಿಗಳು ಬೆಳೆಯುವುದಕ್ಕೆ ಸಹಕಾರಿಯಾಗುತ್ತದೆ, ಎನ್ನುವ ಆತಂಕವಿದೆ.

**ಹೊಸತು :** ನಿಮ್ಮ ಅಮೂಲ್ಯ ಸಮಯವನ್ನು ನಮಗೆ ನೀಡಿದ್ದೀರಿ. ನಮಸ್ಕಾರ, ವಂದನೆಗಳು.

ಸಂದರ್ಶನ ಸಿದ್ಧಪಡಿಸಿದವರು : **ಡಾ॥ ಎನ್. ಗಾಯತ್ರಿ**
ನಂ. ೨೦೧, 'ಸ್ಕೈಲೈನ್ ಗೋಲ್ಡನ್ ರೇಸ್', ಛತ್ರಂ ಬ್ಲಾಕ್, ಗವಿಪುರಂ, ಬೆಂಗಳೂರು – ೧೯

### ಡಾ॥ ಬರಗೂರು ರಾಮಚಂದ್ರಪ್ಪ

ಡಾ॥ ಬರಗೂರು ರಾಮಚಂದ್ರಪ್ಪ ಅವರ ಹೆಸರಿನ ಭಾಗವಾಗಿರುವ ಬರಗೂರು ತುಮಕೂರು ಜಿಲ್ಲೆಯ ಶಿರಾ ತಾಲೂಕಿನ ಹಳ್ಳಿ. ಅಲ್ಲಿ ಕೆಂಚಮ್ಮ ಮತ್ತು ರಂಗದಾಸಪ್ಪ ಅವರ ಒಂಬತ್ತು ಮಕ್ಕಳಲ್ಲಿ ಒಬ್ಬರಾಗಿ ೧೯೪೬ರ ಅಕ್ಟೋಬರ್ ೧೮ರಂದು ಜನಿಸಿದರು. ಆ ಹಳ್ಳಿಯೇ ಮೆಚ್ಚುವಂತೆ ಕಲಿಕೆಗೆ ಮಾದರಿಯಾದ ಇವರು ಕನ್ನಡದ ಸಾರಸ್ವತಲೋಕದಲ್ಲಿ 'ಬರಗೂರು' ಎಂಬ ಹೆಸರನ್ನು ಅಮರಾಂಕಿತಗೊಳಿಸಿದ್ದಾರೆ. ಸಾಮಾಜಿಕ ಬದ್ಧತೆಯ ಸಾಹಿತಿಯಾಗಿ ೧೧ ಕಾದಂಬರಿಗಳನ್ನು, ೬ ಕವನ ಸಂಕಲನಗಳನ್ನು, ೩ ಸಣ್ಣ ಕಥಾ ಸಂಕಲನಗಳನ್ನು, ೧೨ ವೈಚಾರಿಕ ಗ್ರಂಥಗಳನ್ನು ರಚಿಸಿದ್ದಾರೆ. ಚಲನಚಿತ್ರ ನಿರ್ದೇಶಕರಾಗಿಯೂ ಪ್ರಸಿದ್ಧರಾಗಿರುವ ಬರಗೂರರು ಸುಮಾರು ೧೮ ಚಿತ್ರಗಳನ್ನು ತೆಗೆದಿದ್ದಾರೆ ಮತ್ತು ಚಲನಚಿತ್ರರಂಗದ ೧೮ ಪ್ರಶಸ್ತಿಗಳನ್ನು ಪಡೆದಿದ್ದಾರೆ. ಇವರು ಕರ್ನಾಟಕ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾಗಿಯೂ ಮತ್ತು ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಮುಖ್ಯಸ್ಥರಾಗಿಯೂ ಕೆಲಸ ಮಾಡಿದ್ದಾರೆ. ಇವರ ಸಾಹಿತ್ಯಿಕ ಸಾಧನೆಗೆ ಕರ್ನಾಟಕ ಸರ್ಕಾರದ ಪ್ರತಿಷ್ಠಿತ 'ಪಂಪ ಪ್ರಶಸ್ತಿ' ಮತ್ತು ಹಂಪಿ ವಿಶ್ವವಿದ್ಯಾಲಯದ 'ನಾಡೋಜ' ಪ್ರಶಸ್ತಿ ದೊರೆತಿವೆ. ಅಲ್ಲದೆ, ಕುವೆಂಪು ವಿಶ್ವವಿದ್ಯಾಲಯ, ತುಮಕೂರು ವಿ.ವಿ. ಮತ್ತು ಚೆನ್ನಮ್ಮ ವಿಶ್ವವಿದ್ಯಾಲಯಗಳು ಗೌರವ ಡಾಕ್ಟರೇಟ್ ಪ್ರಶಸ್ತಿ ನೀಡಿ ಗೌರವಿಸಿವೆ.

ಪ್ರಧಾನಿ ನೆಹರೂ ಅವರು ಮೊದಮೊದಲು ಪ್ರಾಂತಭಾಷಾ ರಚನೆಗೆ ಅಷ್ಟು ಒತ್ತು ಕೊಟ್ಟಿರಲಿಲ್ಲ. ಇದೇ ಕಾಲಕ್ಕೆ ಆಂಧ್ರಪ್ರದೇಶದಲ್ಲಿ ಪೊಟ್ಟಿ ಶ್ರೀರಾಮಲು ಅವರು ಉಪವಾಸ ಸತ್ಯಾಗ್ರಹ ಆರಂಭಿಸಿದರು. ಉಪವಾಸದ ಕಾರಣವಾಗಿ ಅವರು ತೀರಿಕೊಂಡರು. ಆಂಧ್ರ ಹೊತ್ತಿ ಉರಿಯಿತು. ಆಗ ನೆಹರೂ ಅವರು ಆಂಧ್ರ ರಾಜ್ಯ ರಚನೆಗೆ ಚಾಲನೆ ನೀಡಿದರು. ಇದೇ ಕಾರಣವನ್ನು ಮುಂದಿಟ್ಟುಕೊಂಡು ಕರ್ನಾಟಕದಲ್ಲಿ ಅದರಗುಂಚಿ ಶಂಕರಗೌಡರು ಉಪವಾಸ ಸತ್ಯಾಗ್ರಹ ಆರಂಭಿಸಿದರು. ಸರ್ಕಾರ ಕನ್ನಡಿಗರ ಧ್ವನಿಗೆ ಓಗೊಟ್ಟು ೧೯೫೬ ನವೆಂಬರ್ ೧ರಂದು 'ವಿಶಾಲ ಮೈಸೂರು' ರಾಜ್ಯ ನಿರ್ಮಾಣಕ್ಕೆ ಚಾಲನೆ ನೀಡಿತು. ನಂತರ 'ಮೈಸೂರು ರಾಜ್ಯ' ಎಂಬ ಚಾಲನೆಗೆ ಬಂದಿತು. ೧೯೭೩ರಲ್ಲಿ ದೇವರಾಜ ಅರಸರು ಮುಖ್ಯಮಂತ್ರಿಗಳಾಗಿದ್ದ ಸಂದರ್ಭದಲ್ಲಿ 'ಮೈಸೂರು' ಹೆಸರು ಹೋಗಿ 'ಕರ್ನಾಟಕ' ರಾಜ್ಯ ಎಂದು ಪುನರ್ ನಾಮಕರಣವಾಯಿತು.



# ಕರ್ನಾಟಕ ಏಕೀಕರಣ ಅರವತ್ತರ ಸಂಭ್ರಮ

**ಏಕೀಕರಣ ಚಳುವಳಿಯ ಉಗಮ**

ಇಡೀ ಭಾರತದಲ್ಲಿ ಭಾಷಾವಾರು ಪ್ರಾಂತರಚನೆ ಮಾಡುವ ವಿಚಾರ ಪ್ರಥಮ ಬಾರಿಗೆ ೧೮೯೬ರಲ್ಲಿ ಬಿಹಾರದಲ್ಲಿ ಮೂಡಿತು. ಅಲ್ಲಿಯ ಮಹೇಶ ನಾರಾಯಣ ಎಂಬುವರು ಈ ವಿಚಾರ ಮೊದಲು ಪ್ರತಿಪಾದಿಸಿದರು. ಅವರು ಬಿಹಾರ ಜನಸಮುದಾಯ ದಲ್ಲಿ ಬಹುದೊಡ್ಡ ಆಂದೋಲನವನ್ನೇ ರೂಪಿಸಿದರು. ನಂತರ ಉತ್ಕಲ ಪ್ರಾಂತದ ಜನ ೧೯೦೩ರಲ್ಲಿ ಪ್ರತ್ಯೇಕ ಪ್ರಾಂತದ ಬೇಡಿಕೆಯಿಟ್ಟರು. ಲೋಕಮಾನ್ಯ ತಿಲಕರು ರಾಯಲ್ ಕಮಿಷನ್ ಮುಂದೆ ರಾಷ್ಟ್ರೀಯತ್ವದ ದೃಷ್ಟಿಯಿಂದ ಭಾರತವು ಭಾಷಾನ್ವಯವಾಗಿ ವಿಭಾಗಿಸಲ್ಪಡುವುದು ಅತ್ಯವಶ್ಯವೆಂದು ಹೇಳಿದರು. ೧೯೦೫ರಲ್ಲಿ ಲಾರ್ಡ್ ಕರ್ಜನ್ ಬಂಗಾಲ ವಿಭಜನೆ ಮಾಡಿದ. ವಂಗಭಂಗ ಚಳವಳಿಯನ್ನು ಬಂಗಾಲಿಗರು ಹೂಡಿದರು. ಮುಂದೆ ೧೯೧೧ರಲ್ಲಿ ಬಂಗಾಲ ಮತ್ತೆ ಒಂದಾಯಿತು.

೧೯೦೫ರ ಬಂಗಾಲ ವಿಭಜನೆ ಇಡೀ ದೇಶದಲ್ಲಿ ಕೋಲಾಹಲವನ್ನುಂಟುಮಾಡಿತು. ಆದರೆ ಕರ್ನಾಟಕ ದಲ್ಲಿ ಈ ವಿಷಯ ಕುರಿತು ಯಾರೊಬ್ಬರಿಗೂ ಏನೊಂದು ಪರಿಣಾಮವಾಗದೇ ಗಾಢ ನಿದ್ರೆಯಲ್ಲಿ ಮುಳುಗಿದ ಸಂದರ್ಭದಲ್ಲಿ ಕರ್ನಾಟಕದ ಗಾಂಧಿ ಯೆಂದೇ ಖ್ಯಾತರಾದ ಹರ್ಡೇಕರ ಮಂಜಪ್ಪನವರು ಈ ವಿಷಯವನ್ನು ವಿರೋಧಿಸಿ ಧನುರ್ಧಾರಿ ಪತ್ರಿಕೆಯಲ್ಲಿ ಅಗ್ರಲೇಖನಗಳನ್ನು ಬರೆದರು.

ಈ ವಿಷಯದ ಮುಂದುವರಿದ ಭಾಗವೆನ್ನುವಂತೆ ೧೯೧೩ರಲ್ಲಿ ಆಂಧ್ರರು ಪ್ರಾಂತರಚನೆ ಬೇಡಿಕೆ ಮುಂದಿಟ್ಟು ಅಲ್ಲಲ್ಲಿ ಹೋರಾಟದ ಹೆಜ್ಜೆಗಳನ್ನು ರೂಪಿಸತೊಡಗಿದರು. ಆಗಲೂ ಕನ್ನಡಿಗರಾರೂ ಈ ವಿಷಯ ಕುರಿತು ಚಕಾರವೆತ್ತಲಿಲ್ಲ. ೧೯೧೫ರಲ್ಲಿ ಲೋಕಮಾನ್ಯ ತಿಲಕರ ಆಶಯದ ಮೇರೆಗೆ ಪುಣೆಯಲ್ಲಿ ಜರುಗಿದ ರಾಷ್ಟ್ರೀಯ ಪರಿಷತ್ತಿನಲ್ಲಿ ಅಧ್ಯಕ್ಷ ಸ್ಥಾನ ವಹಿಸಿದ್ದ ಜೊಸೆಫ್ ಬ್ಯಾಪ್ಟಿಸ್ಟಾ ಅವರು ಭಾಷಾನ್ವಯ ಪ್ರಾಂತರಚನೆಯ ಸಿದ್ಧಾಂತವನ್ನು ಎತ್ತಿಹಿಡಿದರು. ೧೯೧೭ರಲ್ಲಿ ಆಂಧ್ರಪ್ರದೇಶಕ್ಕೆ ಪ್ರತ್ಯೇಕ ಕಾಂಗ್ರೆಸ್ ಸರ್ಕಲ್ ದೊರೆಯಿತು. ೧೯೧೮ರಲ್ಲಿ ಬಿ. ಎನ್. ಶರ್ಮಾರವರು ದಿಲ್ಲಿಯ ಹಳೇ ಕೇಂದ್ರ ಶಾಸನ ಸಭೆಯಲ್ಲಿ ಹಿಂದೂಸ್ಥಾನವನ್ನು ಭಾಷಾನ್ವಯವಾಗಿ ವಿಭಾಗಿಸಬೇಕೆಂಬ ಸೂಚನೆ ತಂದರು. ಲಯೋನಲ್ ಕರ್ಟಿಸರು ಈ ತತ್ವವನ್ನು ಕೃತಿಯಲ್ಲಿ ತರಬೇಕೆಂದು ಚೆನ್ನಾಗಿ ವಿವೇಚಿಸಿದರು. ೧೯೨೦ರಲ್ಲಿ ನಾಗಪುರ ಕಾಂಗ್ರೆಸ್ ಅಧಿವೇಶನದಲ್ಲಿ ಮಹಾತ್ಮಾ ಗಾಂಧಿ ಭಾರತದ ಎಲ್ಲ ಪ್ರಾಂತಗಳನ್ನು ಭಾಷಾನ್ವಯ ತತ್ವದಂತೆ ರಚಿಸಿಬಿಟ್ಟರು. ೧೯೩೫ರಲ್ಲಿ ಕಾನೂನು ನಿಯಮದಂತೆ ಪಾರ್ಲಿಮೆಂಟ್‌ನಲ್ಲಿ ಸಿಂಧ ಮತ್ತು ಓಡಿಸಾಗಳನ್ನು ಪ್ರತ್ಯೇಕ ಪ್ರಾಂತ ಮಾಡಿದರು. ಅದೇ ಕಾಲಕ್ಕೆ ಪ್ರಾಂತ ನಿರ್ಮಾಣದ ಅಧಿಕಾರವನ್ನು ವೈಸರಾಯರಿಂದ ಕಸಿದುಕೊಂಡು ಪಾರ್ಲಿಮೆಂಟಿ ನವರು ತಮ್ಮ ಕಡೆಗೆ ಇಟ್ಟುಕೊಂಡರು. ಈ ಕಾರಣವಾಗಿ ೧೯೨೧ರ ಕೇಳಕರರ ನಿರ್ಣಯದಂತೆ ಬಳ್ಳಾರಿ ಗಡಿಸೀಮೆಯ ಪ್ರಶ್ನೆ ತಾತ್ಪೂರ್ತಿಕವಾಗಿ ಬಿಡಿಸಲ್ಪಟ್ಟಿತು. ೧೯೨೪ ಕರ್ನಾಟಕದ ಇತಿಹಾಸದಲ್ಲಿ ಸ್ಮರಣೀಯ ವರ್ಷ. ಬೆಳಗಾವಿಯಲ್ಲಿ ಗಾಂಧೀಜಿ ಅವರ ಅಧ್ಯಕ್ಷತೆಯಲ್ಲಿ ೩೯ನೇ ಅಖಿಲ ಭಾರತ ಕಾಂಗ್ರೆಸ್ ಅಧಿವೇಶನ ಜರುಗಿತು. ಅದೇ ಸಂದರ್ಭದಲ್ಲಿ ಬೆಳಗಾವಿಯಲ್ಲಿ ಸುಮಾರು ೨೦ಕ್ಕೂ ಹೆಚ್ಚು ಪರಿಷತ್ತು-ಅಧಿವೇಶನಗಳು ಜರುಗಿದವು. ಅವುಗಳಲ್ಲಿ ಸರ್ ಸಿದ್ಧಪ್ಪ ಕಂಬಳಿಯವರ ಅಧ್ಯಕ್ಷತೆಯಲ್ಲಿ ಬ್ರಾಹ್ಮಣೇತರ ಚಳವಳಿ ಅಧಿವೇಶನ ಮತ್ತು ಕಡಪಾ ರಾಘವೇಂದ್ರರಾಯರ 'ಏಕೀಕರಣ ಸಂಘ' ಸ್ಥಾಪನೆ ತುಂಬ ಮುಖ್ಯವಾದವು.

ಕರ್ನಾಟಕಕ್ಕೆ ಉಜ್ವಲ ಗತವೈಭವದ ಇತಿಹಾಸ ಇದೆ. ಆರನೆಯ ಶತಮಾನದಿಂದ ಹದಿನಾರನೆಯ ಶತಮಾನದವರೆಗಿನ ಕನ್ನಡ ನಾಡಿನ ಇತಿಹಾಸ ವೈಭವದ ಇತಿಹಾಸವಾಗಿದೆ. ಅದರ ಅರಸರು ದೂರ ದೂರದವರೆಗೆ ತಮ್ಮ ಸಾಮ್ರಾಜ್ಯದ ಗಡಿಯನ್ನು ಬೆಳೆಸಿದರು. ಕನ್ನಡ ನಾಡಿನ ಕಲೆ, ಸಾಹಿತ್ಯ, ಸಂಸ್ಕೃತಿ ಭರತ ದೇಶದ ವೈಭವಕ್ಕೆ ಅತ್ಯಮೋಘವಾದ ಕಾಣಿಕೆಯನ್ನು ಸಲ್ಲಿಸಿವೆ. ಇಂದಿನ ಕನ್ನಡ ಜನತೆಗೆ ಒಂದು ಭಾಷೆ, ಒಂದು ಸಂಸ್ಕೃತಿ ಇದೆ. ೧೯೦೭ರಿಂದಲೂ ಕನ್ನಡಿಗರು ಏಕತಂತ್ರ ಆಡಳಿತವನ್ನು ನಿರ್ವಹಿಸುವ ಪ್ರಾಂತರಚನೆಗೆ ಹೋರಾಡುತ್ತಲೇ ಬಂದಿದ್ದಾರೆ. ಆದರೆ ಅದು ಬ್ರಿಟಿಷರ ಆಳ್ವಿಕೆಯ ಕಾಲ. ಜನತೆಯ ಹಿತದ ಕಾರ್ಯ ಅವರ ಪಾಲಿನ ಕಹಿ ಗುಳಿಗೆ. ಕನ್ನಡದ ಜನತೆ ಅವರ ಕಿವಿಯಲ್ಲಿ ಏಕೀಕೃತವಾಗದ ಕನ್ನಡ ನಾಡು ಪ್ರಗತಿಯನ್ನು ಸಾಧಿಸಲಾರದೆಂದು ಕೂಗಿ ಕೂಗಿ ಹೇಳಿತ್ತು. ಆದರೆ ಅದೆಲ್ಲ ಅರಣ್ಯರೋದನವಾಯಿತು.

**ಪ್ರಕಾಶ ಗಿರಿಮಲ್ಲನವರ**

೧೯೨೧ರಲ್ಲಿ ಕಾಂಗ್ರೆಸ್ಸು ಕಂಡ ಸತ್ಯವನ್ನು ಬ್ರಿಟಿಷ್ ಸರಕಾರ ಕೊನೆಗೂ ಒಪ್ಪಲಿಲ್ಲ.

"ನಿಮ್ಮ ಬೇಡಿಕೆ ನ್ಯಾಯವಾಗಿದೆ ಬ್ರಿಟಿಷ್ ಕರ್ನಾಟಕದ ವಿಸ್ತಾರ, ಜನಸಂಖ್ಯೆಯೇ ಈಗ ಸಾಕು. ಮೈಸೂರು ದೇಶಕ್ಕಿಂತಲೂ ಅದು ದೊಡ್ಡದಿದೆ. ಸಿಂಧದ ಎರಡು ಪಾಲಿನಷ್ಟು ವಿಸ್ತಾರವಿದೆ. ವಾಯವ್ಯ ಗಡಿನಾಡಿನ ಪ್ರಾಂತಕ್ಕಿಂತ ಮೂರು ಪಾಲು ದೊಡ್ಡದಿದೆ. ಕೊಡಗು ನಾಡಿನ ಪ್ರವೇಶಕ್ಕಿಂತ ೨೦ ಮೈಲು ಹೆಚ್ಚು, ಅದರ ಜನಸಂಖ್ಯೆಗಿಂತ ೪೦ ಪಾಲು ಹೆಚ್ಚು ಜನಸಂಖ್ಯೆ! ಮೈಸೂರು ಹೈದರಾಬಾದಿನ ಬಹು ಭಾಗವೆಲ್ಲ ಕನ್ನಡವನ್ನಾಡುವ ಜನರಿಂದ ತುಂಬಿದೆ. ಇದೆಲ್ಲ ಭಾಗ ಸಮಾವೇಶವಾದರೆ ಏಕೀಕೃತ ಕರ್ನಾಟಕ ಹಿಂದುಸ್ಥಾನದಲ್ಲೇ ಮಹತ್ವದ ದೊಡ್ಡ ಪ್ರಾಂತವಾಗುವಲ್ಲಿ ಸಂದೇಹವೇನು ?

ವಿನಯಪೂರ್ಣವಾದ ನಿಮ್ಮ ಬೇಡಿಕೆ ಗೌರವಾರ್ಹವಾಗಿದೆ. ಸಂಸ್ಥಾನಗಳಲ್ಲಿ ಸೇರಿಹೋದ ಕನ್ನಡ ನಾಡಿನ ಭಾಗಕ್ಕೆ ನೀವು ಈಗ ಮನಸ್ಸು ಮಾಡಿಲ್ಲ. ಬ್ರಿಟಿಷ್ ಕರ್ನಾಟಕದ ಭಾಗವಷ್ಟೇ ಒಂದು ಪ್ರಾಂತದ ಆಡಳಿತದಲ್ಲಿ ಬರಬೇಕೆಂದು ನೀವು ಅಪೇಕ್ಷಿಸುತ್ತಿದ್ದೀರಿ. ಇದು ಸಮಂಜಸವೂ, ಸಾಧುವೂ ಆದ ಬೇಡಿಕೆಯೇ ಸರಿ. ಯಾರು ಇದಕ್ಕೆ ಸಮ್ಮತವನ್ನಿತ್ತಾರು. ಆದರೆ ಹಿಂದೂಸ್ಥಾನ ಸ್ವಾತಂತ್ರ್ಯವನ್ನು ಪಡೆದಾಗಲೇ ಕನ್ನಡಿಗರ ಈ ಬೇಡಿಕೆ ಕಾರ್ಯರೂಪಕ್ಕೆ ಇಳಿಯಲು ಮಾತ್ರ ಸಾಧ್ಯ. ಬ್ರಿಟಿಷರು ಇಲ್ಲಿರುವವರೆಗೂ ಈಗಿನ ಪ್ರಾಂತಗಳಲ್ಲಿ ಇನ್ನೇನೂ ವ್ಯತ್ಯಾಸವಾಗಲಾರದು.

ಭಾರತದ ಬಿಡುಗಡೆಯ ಹೋರಾಟದಲ್ಲಿ ಕರ್ನಾಟಕ ಮಹತ್ವದ ಪಾತ್ರವನ್ನು ವಹಿಸಿದೆ. ಸ್ವತಂತ್ರ ಹಿಂದೂದೇಶ ಇದನ್ನು ಮರೆಯಲಾರದು. ತಮ್ಮ ಅಧಿಕಾರ ಬಲದಿಂದ ಸಿಕ್ಕ ಸಿಕ್ಕ ಹಾಗೆ ಪ್ರಾಂತಗಳನ್ನು ನಿರ್ಮಿಸಿ ಭಾಷೆಗಳ ಮೇಲೆ ಬ್ರಿಟಿಷರು ಮಾಡಿದ ದಬ್ಬಾಳಿಕೆಯನ್ನು ನಿರ್ಮೂಲನಗೊಳಿಸಿ ಕೂಡಲೆ ಭಾಷಾವಾರು ಪ್ರಾಂತ ರಚನೆಯನ್ನು ಮಾಡುವುದೇ ಸ್ವತಂತ್ರ ಹಿಂದೂ ದೇಶದ ಪ್ರಥಮ ಕರ್ತವ್ಯವಾಗುವಲ್ಲಿ ನನಗೆ ಸಂದೇಹವೇ ಇಲ್ಲ. ಪ್ರಗತಿ ಪಥದಲ್ಲಿ ನಡೆಯಬಯಸಿದ ಹಿಂದೂಸ್ಥಾನವು ಭಾಷಾನುಗುಣ ಪ್ರಾಂತಗಳನ್ನು ರಚಿಸಲೇಬೇಕಾಗುವುದು. ೧೯೨೦ರಂದು ನಾಗಪುರ ಅಧಿವೇಶನದ ಸಮಯದಲ್ಲಿ ಅಖಿಲ ಭಾರತ ರಾಷ್ಟ್ರೀಯ ಕಾಂಗ್ರೆಸ್ಸು ಅಂಗೀಕರಿಸಿದ ಘಟನೆಯು ತನ್ನ ಮೊದಲನೆಯ ಕಲಮಿನಲ್ಲಿಯೇ ಭಾಷೆಯ ತಳಹದಿಯ ಮೇಲೆ ಪ್ರಾಂತಗಳನ್ನು ವಿಂಗಡಿಸಬೇಕೆಂಬ ತತ್ವವನ್ನು ಒಪ್ಪಿಕೊಂಡಿತು !

ನಾನು ನಿಮಗೆ ಮಾತು ಕೊಡುತ್ತೇನೆ. ಇನ್ನು ಬಹಳ ದಿನ ಆಗಲಾರದು. ಕರ್ನಾಟಕ ಪ್ರಾಂತ ನಿರ್ಮಾಣದ ಸಮಯವು ಸನ್ನಿಹಿತವಾಗಿದೆ. ಹರಿದು ಹಂಚಿಹೋದ ಕನ್ನಡ ನಾಡು ಒಂದಾಗುವುದು. ಅದಕ್ಕೊಂದು ವಿಶ್ವವಿದ್ಯಾಲಯ ವಾಗುವುದು. ಅದರ ಛತ್ರರಿಗೆಯಡಿಯಲ್ಲಿ ಸ್ವಾಭಿಮಾನಪೂರ್ಣ ಬದುಕು ಹುಲುಸಾಗಿ ಬೆಳೆಯುವುದೆಂಬ ಭರವಸೆಯನ್ನು ಕೊಡುತ್ತೇನೆ."

ವಲ್ಲಭಭಾಯಿ ಪಟೇಲರ ಭಾಷಣ ಕನ್ನಡಿಗರಲ್ಲಿ ಸ್ಫೂರ್ತಿ–ಚೈತನ್ಯ–ಸ್ವಾಭಿಮಾನವನ್ನು ಉಂಟುಮಾಡಿತು. ಇದರ ಪರಿಣಾಮವಾಗಿ ನಿಜಲಿಂಗಪ್ಪನವರು ಏಕೀಕರಣ ಚಳುವಳಿಯ ಪ್ರಮುಖ ಭಾಗವಾಗಿ ಮಿಂಚಿದರು. ಕಾಂಗ್ರೆಸ್ ಅಧ್ಯಕ್ಷರಾಗಿದ್ದ ಬಾಬುರಾಜೇಂದ್ರ ಪ್ರಸಾದ ಅವರೊಂದಿಗೆ ಸುದೀರ್ಘವಾಗಿ ಚರ್ಚಿಸಿದರು. ಬಾಬುರಾಜೇಂದ್ರ ಪ್ರಸಾದರು ೧೯೪೮ ಫೆಬ್ರವರಿ ೯ರಂದು ನಿಜಲಿಂಗಪ್ಪನವರಿಗೆ ಈ ರೀತಿ ಪತ್ರ ಬರೆದರು.

"ಕಾಂಗ್ರೆಸ್ಸು ಭಾಷಾನುಗುಣ ಪ್ರಾಂತರಚನೆಯ ತತ್ವವನ್ನು ಒಪ್ಪಿಕೊಂಡ ಸಂಗತಿ ನಿಮಗೆ ತಿಳಿದೇ ಇದೆ. ಕಾಂಗ್ರೆಸ್ಸಿನ ಘಟನೆಯು ಈ ವಿಷಯವನ್ನೊಳಗೊಂಡಿದೆ.




# ಕಲ್ಬುರ್ಗಿಯ ಕೊಲೆಯ ನಂತರ...

ಶಬ್ದಕ್ಕಿಂತಲೂ
ನಿಶ್ಶಬ್ದವೇ
ಹೆಚ್ಚು ಜನರಿಗೆ ಕೇಳಿಸಿತು
ಮಾತಿಗಿಂತಲೂ
ಮೌನವೇ
ಹೆಚ್ಚು ಜನರನ್ನು ಬಾಧಿಸಿತು

ಸಾಯಿಸಿದವರು
ಓಡಿ ಹೋದರು
ಆದ್ದರಿಂದಲೇ
ಅವರು ಹೇಡಿ ದೆವ್ವಗಳು
ವಿಚಾರಕ್ಕಿಂತಲೂ
ಡ್ರಾಯಿಂಗ್ ರೂಂ ವಿಶ್ಲೇಷಣೆಯೇ
ಹೆಚ್ಚು ನೋಯಿಸಿತು

ಒಂದು ಕಾಗೆ ಸತ್ತರೆ
ನೂರಾರು ಕಾಗೆಗಳು
ಗುಂಪುಗೂಡುತ್ತವೆ
ಒಂದು ಇರುವೆಯ ಶವವನ್ನು
ಸಾವಿರಾರು ಇರುವೆಗಳು
ಹೆಗಲಿನ ಮೇಲೆ ಹೊತ್ತೊಯ್ಯುತ್ತವೆ
ಆದರೆ
ಗುಂಡಿಗೆಯ ಬದಲು
ಝೆಂಡಾಗಳನ್ನು ಹೊರುವುದು ವಿಷಾದ

ಕವಿಗಳು ಕೂಡಾ ಹಕ್ಕಿಗಳೇ
ಹಸಿರು ಮರಗಳ ಮೇಲೆ ಕುಲುಕುತ್ತಾ
ಮರುಭೂಮಿಗಳ ಬಗ್ಗೆ ಹಾಡುತ್ತಾರೆ
ನಿಶ್ಚಲನವನ್ನು ಗೇಲಿ ಮಾಡುತ್ತಾ
ಹಾರಾಡುವದೊಂದೇ
ಹೆಚ್ಚು ಜಾಗೃತಗೊಳಿಸಿತು

ದಿಲ್ಲಿಯೊಂದೇ
ಇಂಡಿಯಾ ಅಲ್ಲ
ರಾಜ್ಯಗಳು ಕೇಂದ್ರಕ್ಕೆ
ಆ್ಯಷ್‌ಟ್ರೇಗಳಲ್ಲ
ಲೇಖಕರನ್ನು ಬಗೆದರೆ
ಮಾನವೀಯತೆಯನ್ನು ಬಗೆದಂತೆ
ಹೊರಗೇನೋ ಮಾತನಾಡುತ್ತಾರೆ
ಒಳಗೇನೋ ಮತ್ತೊಂದು ಅಂತರಾರ್ಥ

ಏನಾದರಾಗಲಿ
ಇದೊಂದು ಸಾಂಸ್ಕೃತಿಕ ಕ್ಷಣ
ಉದ್ರಿಕ್ತ ಗಣ
ಸರಿಯಾದ ಸ್ಪಂದನವೇ
ಮಾನವ ಲಕ್ಷಣ



ತೆಲುಗು ಮೂಲ : **ಡಾ॥ ಎನ್. ಗೋಪಿ**
ಕನ್ನಡಕ್ಕೆ: **ರಾಮಣ್ಣ ಆರ್ಥೆಜ್ಜೆ**

೧–೪–೮೪೭ / ೧೦೭, ಅಂಬೇಡ್ಕರ್ ನಗರ, ಐ. ಬಿ. ರಸ್ತೆ, ರಾಯಚೂರು – ೫೮೪ ೧೦೧

ಆದುದರಿಂದ ಈ ಬಗೆಗೆ ಕಾಂಗ್ರೆಸ್ಸಿನ ಅಭಿಪ್ರಾಯವೇನಿದೆ ಎಂಬುದನ್ನು ತಿಳಿಸುವ ಅಗತ್ಯವೇ ಇಲ್ಲ.

"ಭಾಷಾವಾರು ಪ್ರಾಂತರಚನೆಯ ಕಾರ್ಯವನ್ನು ನಿರ್ವಹಿಸುವ ಹೊಣೆ ಸರಕಾರಕ್ಕೆ ಸೇರಿದುದಾಗಿದೆ. ಆಡಳಿತ ವರ್ಗದ ಸೌಕರ್ಯವನ್ನು ಮನಗಂಡು ಸರಕಾರವೂ ಘಟನಾ ಸಭೆಯೂ ಈ ದಿಶೆಯಲ್ಲಿ ಕಾರ್ಯವನ್ನು ಮುಂದುವರಿಸಬೇಕಾಗುವುದು. ಕರ್ನಾಟಕಕ್ಕೆ ಅನ್ಯಾಯವೇನೂ ಆಗಬೇಕಾದುದಿಲ್ಲ. ಘಟನಾಸಭೆಯೂ, ಸರಕಾರವೂ ಅಂತ ಅನ್ಯಾಯವಾಗದಂತೆ ನೋಡಿಕೊಳ್ಳುವವು."

**ಏಕೀಕರಣಕ್ಕೆ ಪ್ರಬಲ ವಿರೋಧ**

ಏಕೀಕರಣ ಚಳುವಳಿಯ ಶ್ರೇಯಸ್ಸಿನ ಫಲ ಬ್ರಾಹ್ಮಣರಿಗೂ ಸಮಪಾಲು ಎಂದು ಇಂದಿನ ವಿದ್ವಾಂಸರು ಹೇಳುತ್ತಿರುವುದು ವಿಷಾದನೀಯ. ಅಂದು ಬ್ರಾಹ್ಮಣರು ಕರ್ನಾಟಕ ಏಕೀಕರಣಕ್ಕೆ ಬಲವಾಗಿ ವಿರೋಧಿಸಿದರು ಎಂಬುದಕ್ಕೆ ಸಾಕಷ್ಟು ಪುರಾವೆಗಳು ಇವೆ. ೧೯೩೫ರಲ್ಲಿ ಮಿಂಚಿನ ಬಳ್ಳಿ ಮಾಲೆಯಲ್ಲಿ ಪ್ರಕಟವಾದ 'ಕರ್ನಾಟಕ ದರ್ಶನ' ಎಂಬ ಪುಸ್ತಕದಲ್ಲಿ ಈ ಕುರಿತು ಸ್ಪಷ್ಟವಾದ ದಾಖಲೆಯಿದೆ. ೧೯೦೩ರಲ್ಲಿ ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘದ ವಾರ್ಷಿಕೋತ್ಸವದ ಸಂದರ್ಭದಲ್ಲಿ ಮಂಗಳೂರಿನ ಶ್ರೀಮಾನ್ ಬೆನಗಲ್ ರಾಮರಾಯರು "ಕರ್ನಾಟಕವು ಹತ್ತಾರು ತುಂಡುಗಳಾಗಿ ಬೇರೆ ಬೇರೆ ಆಡಳಿತೆಗೆ ಗುರಿಯಾದದ್ದೇ ಕನ್ನಡದ ವಿಪನ್ನಾವಸ್ಥೆಗೆ ಕಾರಣ. ಕನ್ನಡ ನಾಡು ಒಂದಾಗಬೇಕು. ಅಂದರೆ ಕನ್ನಡವು ಬೆಳೆಯುವುದು; ಕನ್ನಡಿಗರೂ ಬದುಕಿ ಬಾಳುವರು" ಎಂಬುದಾಗಿ ಸಾರಿದರು. ಈ ಅವರ ನುಡಿಯು ಕನ್ನಡಿಗರಿಗೆ ದಿವ್ಯವಾಣಿಯಾಯಿತು. ದಾದಾಭಾಯಿ ನವರೋಜಿಯವರು ಹಿಂದೂಸ್ಥಾನಕ್ಕೆ ೧೯೦೬ರಲ್ಲಿ 'ಸ್ವರಾಜ್ಯ'ದ ಸಂದೇಶವನ್ನು ಅರುಹಿದರು. ಅದಕ್ಕೂ ಮೂರುವರೆ ವರುಷ ಮೊದಲು ಕನ್ನಡಿಗರಿಗೆ ತಮ್ಮ ಉದ್ಧಾರದ ದಾರಿಯನ್ನು ತನ್ನ ಏಕನಿಷ್ಠ ಭಕ್ತರಾದ ಶ್ರೀ ರಾಮರಾಯರ ಮುಖಾಂತರವಾಗಿ ಕನ್ನಡ ವಾಕ್‌ಶಕ್ತಿಯೇ ಒಡನುಡಿದಳು. ಆಗಿನಿಂದ ಅಖಂಡ ಕರ್ನಾಟಕದ ರಾಷ್ಟ್ರೀಯತ್ವಕ್ಕೆ ಜೀವಾಳದ ಮಾತಾದ "ಕರ್ನಾಟಕ ಏಕೀಕರಣ"ದ ಪ್ರಶ್ನೆಯು ವಿಚಾರವಂತರೆದುರಿಗೆ ಪ್ರಾಮುಖ್ಯವಾಗಿ ಬರಹತ್ತಿತು. ಲೋಕಮಾನ್ಯರ ಪರಮ ಸ್ನೇಹಿತರಾಗಿದ್ದ ಬೆಂಗಳೂರಿನ ಶ್ರೀನಿವಾಸ ಅಯ್ಯಂಗಾರರು ೧೯೦೬ರ ಮಾರ್ಚ್ ತಿಂಗಳಲ್ಲಿ ಧಾರವಾಡಕ್ಕೆ ಬಂದಾಗ್ಗೆ ಒಂದು ಸಾರ್ವಜನಿಕ ಪ್ರಸಂಗದಲ್ಲಿ ಭಾಷಣ ಮಾಡುವಾಗ್ಗೆ 'ಬಂಗಾಲವು ಎರಡು ಭಾಗಗಳಾಗಿ ವಿಭಾಗಿಸಲ್ಪಟ್ಟರೆ ಬಂಗಾಲಿಗಳು ನೆಲ-ಮುಗಿಲುಗಳೊಂದಾಗುವಂತೆ ನಿಷೇಧಕ ಚಳುವಳಿಯನ್ನು ನಡೆಸಿ ಮತ್ತೆ ಒಂದಾಗಲೇಬೇಕೆಂಬ ಹಟತೊಟ್ಟು ಕೋಲಾಹಲವೆಬ್ಬಿಸಿಬಿಟ್ಟಿದ್ದಾರೆ. ಆದರೆ ನಮ್ಮ ಕರ್ನಾಟಕವು ಐದು ಭಾಗಗಳಾಗಿ ವಿಭಾಗಿಸಲ್ಪಟ್ಟು ಎಷ್ಟೆಷ್ಟೋ ವರ್ಷಗಳಾದವು. ಐದು ಸರಕಾರಗಳ ರಾಜ್ಯಾಂಗ ವ್ಯವಸ್ಥೆಯಲ್ಲಿ ಕನ್ನಡಕ್ಕೆ ಗತಿಗೋತ್ರವೇ ಇಲ್ಲದಾಗಿದೆ. ಸರಕಾರದ ಏಕಸೂತ್ರತೆಯ ಸಂರಕ್ಷಣೆಯಿಲ್ಲದೆ ಅಥವಾ ಜನತೆಯ ಸಾಹಸಕ್ಕೆ ಸರಕಾರದ ಹಾರ್ದಿಕ ಬೆಂಬಲವಿಲ್ಲದೆ ಕನ್ನಡವು ಮುಂದಾಗುವುದು ಅಶಕ್ಯ. ಕನ್ನಡವು ಉತ್ಕರ್ಷ ಹೊಂದದೆ ಕರ್ನಾಟಕವು ತಲೆಯೆತ್ತಲಾರದು' ಎಂದು ಹೇಳಿ ಕರ್ನಾಟಕದ ಏಕೀಕರಣ ವಿಚಾರವನ್ನು ಪುರಸ್ಕರಿಸಿದ್ದುಂಟು. ೧೯೦೭, ೧೯೦೮ರಲ್ಲಿ ಕನ್ನಡಿಗರ, ಅರ್ಥಾತ್ ಕರ್ನಾಟಕದ, ಏಕೀಕರಣಕ್ಕಾಗಿ ಕನ್ನಡ ಗ್ರಂಥಕಾರರ ಹಾಗೂ ಲೇಖಕರ ಸಮ್ಮೇಳನಗಳು ಧಾರವಾಡದಲ್ಲಿ ಕೂಡಿದವು. ಈ ಪ್ರಯತ್ನವೇ ಮುಂದೆ ೧೯೧೫ರಲ್ಲಿ 'ಕರ್ನಾಟಕ ಸಾಹಿತ್ಯ ಪರಿಷತ್ತಿ'ನ ಪ್ರತಿಷ್ಠಾಪನೆಗೆ ಕಾರಣವಾಗಿ ಕರ್ನಾಟಕದ ಸಾಂಸ್ಕೃತಿಕ ಏಕೀಕರಣದ ಕಾರ್ಯವು ಶ್ರೇಯಸ್ಸಿನ ದಾರಿಯನ್ನು ಹಿಡಿಯಿತು.




ಬಂಗಾಲಿಗಳ ದಿವ್ಯದೃಷ್ಟಾಂತವನ್ನೇ ಕಣ್ಣಮುಂದಿಟ್ಟುಕೊಂಡು ಸಂಸ್ಥಾನಗಳಿಗೆ ಅಧೀನವಾದ ಪ್ರದೇಶವನ್ನು ಬಿಟ್ಟುಕೊಟ್ಟು ಬ್ರಿಟಿಷ್ ಕರ್ನಾಟಕದ ಭಾಗಗಳನ್ನೇ ಒಂದುಗೂಡಿಸಿ ಒಂದು ಪ್ರಾಂತವನ್ನಾಗಿ ಮಾಡಿಕೊಳ್ಳಬೇಕೆಂಬ ರಾಜಕೀಯ ಏಕೀಕರಣದ ಪ್ರಶ್ನೆಯನ್ನು ಕನ್ನಡಿಗರು ಕೈಕೊಂಡರು. ೧೯೧೭ರಲ್ಲಿ ಕರ್ನಾಟಕದಲ್ಲೆಲ್ಲ ಕಡೆಗೆ ಏಕೀಕರಣ ಸಭೆಗಳು ಸ್ಥಾಪಿತವಾಗಿ ಈ ಬಗ್ಗೆ ಲೋಕಮತವನ್ನು ಪ್ರಬಲಗೊಳಿಸುವ ಕೆಲಸಕ್ಕೆ ಆರಂಭವಾಯಿತು. ಹಿಂದೂಸ್ಥಾನದ ಸ್ಟೇಟ್ ಸೆಕ್ರೆಟರಿಗಳಾಗಿದ್ದ ಮಾಂಟೆಗೂ ಸಾಹೇಬರು ಈ ದೇಶಕ್ಕೆ ಕೊಡಬೇಕಾಗಿದ್ದ ರಾಜಕೀಯ ಸುಧಾರಣೆಗಳ ವಿಷಯವಾಗಿ ಇಲ್ಲಿಯ ಜನಮತವನ್ನು ತಿಳಿದುಕೊಳ್ಳಲೋಸುಗ ಹಿಂದೂಸ್ಥಾನಕ್ಕೆ ಒಂದಾಗ್ಗೆ ಅವರ ಮುಂದೆ ಕರ್ನಾಟಕದ ಏಕೀಕರಣದ ಬೇಡಿಕೆಯ ಭಿನ್ನವತ್ತಳೆಗಳು ಹೊರೆಹೊರೆಯಾಗಿ ಬೀಳುವಂತೆ ಊರೂರುಗಳಿಂದ ಸಾವಿರಾರು ಜನರ ಅಂಕಿತಗಳೊಡನೆ ಕಳಿಸಬೇಕೆಂಬ ಮಹತ್ಕಾರ್ಯವನ್ನು ಏಕೀಕರಣದ ಪುರಸ್ಕೃತರು ೧೯೧೭ರಲ್ಲಿ ಕೈಕೊಂಡರು. ಧಾರವಾಡ, ಹುಬ್ಬಳ್ಳಿ, ಗದಗ, ಬಾಗಲಕೋಟೆ, ವಿಜಾಪುರ, ಬಳ್ಳಾರಿ ಮೊದಲಾದ ಪಟ್ಟಣಗಳಲ್ಲಿ ಸಭೆಗಳಾಗಿ ಕರ್ನಾಟಕದ ಏಕೀಕರಣಕ್ಕೆ ಬೆಂಬಲದ ಗೊತ್ತುವಳಿಗಳಾದವು. ಬೆಳಗಾವಿಯಲ್ಲಾದ ಸಭೆಯಲ್ಲಿ ಮಾತ್ರ ಶ್ರೀ ಮಾಸೂರ ಗೋವಿಂದರಾಯರು ಏಕೀಕರಣಕ್ಕೆ ವಿರುದ್ಧವಾಗಿ ವಾದಿಸಿದರು. ಶ್ರೀ ದೇಶಪಾಂಡೆ ಗಂಗಾಧರರಾಯರು ಗೋವಿಂದರಾಯರಿಗೆ ಬೆಂಬಲಕೊಟ್ಟು ಏಕೀಕರಣವನ್ನು ವಿರೋಧಿಸಿದರು. ಆದರೂ ಸಭೆಯಲ್ಲಿ ಪ್ರಚಂಡ ಬಹುಮತವು ಏಕೀಕರಣಕ್ಕೆ ಅನುಕೂಲವಿದ್ದದ್ದು ಸ್ಪಷ್ಟವಾಗಿ ಕಂಡುಬರುತ್ತಿತ್ತು. ಬೆಳಗಾವಿಯ ಒಂದೇ ಊರಿನ ಅಭಿಪ್ರಾಯಕ್ಕೆ ಅಷ್ಟೊಂದು ಬೆಲೆಬಾರದು; ಆದುದರಿಂದ ತುಸು ದಿನಗಳಲ್ಲಿಯೇ ಅಥಣಿಯಲ್ಲಿ ಜರುಗಬೇಕಾಗಿದ್ದ ಬೆಳಗಾವಿ ಜಿಲ್ಲಾ ಪರಿಷತ್ತಿನಲ್ಲಿ ಈ ಪ್ರಶ್ನೆಯ ನಿರ್ಣಯ ವಾಗುವುದು ವಿಹಿತವೆಂಬ ಹುಯಲನ್ನೆಬ್ಬಿಸಿ ಅಂದಿಗೆ ಆ ವಿಷಯವನ್ನು ಮೂಲೆಗುಂಪು ಮಾಡಿ ಗೆದ್ದರು. ಅಥಣಿಯ ಕಾನ್‌ಫರೆನ್ಸಿನಲ್ಲಿ ಈ ವಿಷಯವನ್ನು ಮುಂದೆ ಚಾಚುವುದಕ್ಕೆ ಶ್ರೀ ಆಲೂರ ವೆಂಕಟರಾಯರೇ ಮೊದಲಾದವರು ವಿಶ್ವಪ್ರಯತ್ನ ಮಾಡಿದರು. ಮಹಾರಾಷ್ಟ್ರದ ಪ್ರಸಿದ್ಧ ದೇಶಭಕ್ತರಾಗಿದ್ದ ಶ್ರೀ ಕೃಷ್ಣಾಜಿ ಪ್ರಭಾಕರ ಖಾಡಿಲಕರರು ಪರಿಷತ್ತಿಗೆ ಅಧ್ಯಕ್ಷರಾಗಿದ್ದರು. ವಿಷಯನಿಯಾಮಕ ಸಭೆಗೆ ಅಧ್ಯಕ್ಷರು ಬಾರದ ಮೂಲಕ ಶ್ರೀ ದೇಶಪಾಂಡೆ ಗಂಗಾಧರರಾಯರೇ ಅಧ್ಯಕ್ಷರಾಗಿದ್ದರು. ಆ ವಿಷಯನಿಯಾಮಕ ಸಭೆಯಲ್ಲಿ ಯಾವುದೋ ಒಂದು ವಿಧಿಯ ಪ್ರಶ್ನೆಯನ್ನು ಎತ್ತಿ ಶ್ರೀ ಗಂಗಾಧರರಾಯರು ಏಕೀಕರಣದ ಪ್ರಸ್ತಾಪವನ್ನು ತಳ್ಳಿಯೇಬಿಟ್ಟರು. ಪರಿಷತ್ತಿಗೆ ಲೋಕಮಾನ್ಯರು ಬಂದಿದ್ದರಾದರೂ ಅವರ ಮುಂದೆ ಈ ವಿಷಯವನ್ನೊಯ್ದು ನಮ್ಮೊಳಗಿನ ಮತಭೇದವನ್ನು ಅವರ ಮುಂದೆ ತೆರೆದಿಡುವುದು ಅಯುಕ್ತವೆಂದು ತೋರಿ ಆ ಪ್ರಸ್ತಾಪವನ್ನು ವಕೀಲರಾಗಿದ್ದ ಶ್ರೀ ಅಜರೇಕರ ಕೇಶವರಾಯರು ಮಾತ್ರ, (ನೋಡಿದರೆ ಇವರು ಮರಾಠಿ !) ವಿಷಯನಿಯಾಮಕ ಸಭೆಯಲ್ಲಿಯೂ ಏಕೀಕರಣಕ್ಕೆ ಅನುಕೂಲವಾಗಿ ಶ್ರೀ ಗಂಗಾಧರರಾಯರ ಸಂಗಡ ಕಡುತರವಾಗಿ ವಾದಿಸದಿರಲಿಲ್ಲ.

ಹೀಗೆ ಕರ್ನಾಟಕದ ಏಕೀಕರಣದ ಚಳವಳಿಗೆ ಕರ್ನಾಟಕದ ರಾಷ್ಟ್ರೀಯ ವೃತ್ತಿಯವರೇ ವಿರೋಧವನ್ನಾರಂಭಿಸಿದ್ದು ಅತ್ಯಂತ ವಿಷಾದದ ಮಾತಾಗಿ ತೋರಿತು. ಬಂಗಾಲದ ಅನಭಿಷಿಕ್ತ ಅರಸರೆನಿಸಿದ್ದ ಸುರೇಂದ್ರನಾಥರವರಿಗೆ ಬೆಂಬಲವಿತ್ತ ಲೋಕಮಾನ್ಯರ ಅನುಯಾಯಿಗಳೇ ಕರ್ನಾಟಕದ ಏಕೀಕರಣದ ಕಾರ್ಯಕ್ಕೆ "ಅರಾಷ್ಟ್ರೀಯ" "ದೇಶದ ಸ್ವಾತಂತ್ರ್ಯದ ಹೋರಾಟವನ್ನು ಹಿಮ್ಮೆಟ್ಟಿಸುವ ಹದಗೇಡಿತನ" "ದೇಶಾಭಿಮಾನದ ಮುಂದೆ ಪ್ರಾಂತಾಭಿಮಾನವನ್ನು ನೂಕುವ ತಿಳಿಗೇಡಿತನ, ದೇಶದ್ರೋಹ" ಮೊದಲಾದ ಕಳಂಕವನ್ನು ಎದೆಗಾರಿಕೆಯಿಂದ ಹಚ್ಚಲನು ವಾದದ್ದು ಕನ್ನಡಿಗರಲ್ಲಿ ಆಶ್ಚರ್ಯವನ್ನುಂಟುಮಾಡದಿರಲಿಲ್ಲ (ಪು. ೩೧–೩೪).

ಈ ಸುದೀರ್ಘ ವಿವರಣೆಯ ಕಾರಣ, ಬ್ರಾಹ್ಮಣರು ಮೂಲತಃ ಏಕೀಕರಣಕ್ಕೆ ಬದ್ಧವಿರೋಧವಾಗಿದ್ದರು. ಆದರೆ ಉದಾರಿಗಳಾದ ಲಿಂಗಾಯತರು ಏಕೀಕರಣದ ವಿಚಾರವನ್ನು ಮೊದಲಿನಿಂದಲೂ ಪ್ರತಿಪಾದಿಸುತ್ತ ಬಂದವರು. ಆದರೆ ಅವರ ಧ್ವನಿಗೆ ಬೆಂಬಲವನ್ನು ನೀಡುವ ಇತರ ಜಾತಿಯ ವರ್ಗದ ಜನರು ಅಂದು ಬಹುಸಂಖ್ಯಾತರಾಗಿರಲಿಲ್ಲವೆಂಬುದು ವಿಪರ್ಯಾಸದ ಸಂಗತಿ.

ಸ್ವಾತಂತ್ರ್ಯಾನಂತರ ಕರ್ನಾಟಕದಲ್ಲಿ ಲಿಂಗಾಯತರು ಪ್ರಾರಂಭಿಸಿದ ಶಿಕ್ಷಣ ಸಂಸ್ಥೆಗಳೇ ಕರ್ನಾಟಕದ ಶಿಕ್ಷಣ ಪ್ರಪಂಚದ ಜೀವಜೀವಾಳವಾದವು.

ಲಿಂಗಾಯತರಿಂದ ಸಂಸ್ಥಾಪಿತವಾಗಿ ಲಿಂಗಾಯತರ ನೇತೃತ್ವದಲ್ಲಿ ಮುನ್ನಡೆಯುತ್ತಿರುವ ಶಿಕ್ಷಣ ಸಂಸ್ಥೆಗಳೇ ಕರ್ನಾಟಕದ ಧನ, ದೌಲತ್ತು. ಬಹುಮಟ್ಟಿಗೆ ಅವರು ವಾಣಿಜ್ಯದ ಸೂತ್ರಗಳನ್ನೂ ಹಿಡಿದು ನಾಡ ಪ್ರಗತಿಗೆ ಕಾರಣವಾಗಿದ್ದವು. ಜನತೆಯ ಮನಸ್ಸಿನಲ್ಲಿ ಏಕೀಕರಣದ ಕನಸನ್ನು ಅವರೇ ಮೂಡಿಸಿದರು. ಕರ್ನಾಟಕದಲ್ಲಿ ಅವರು ಸೃಜಿಸಿಕೊಂಡಿರುವ ಸ್ಥಾನದ ಪರಿಣಾಮವಾಗಿ ಅವರಲ್ಲಿ ಬರಹಗಾರರು, ಕವಿಗಳು, ಕಲಾವಿದರು, ಸಂಗೀತರತ್ನರು, ಮೇಲ್ಸ್ತರಗತಿಯ ರಾಜಕಾರಣಿಗಳು ಬ್ರಾಹ್ಮಣರಷ್ಟೇ ಪ್ರಬಲ ಸ್ಪರ್ಧಿಗಳಾಗಿ ಆಧುನಿಕ ಕರ್ನಾಟಕದ ನಿರ್ಮಾಣ ಕಾರ್ಯದಲ್ಲಿ ಇವರೆಲ್ಲ ಸಲ್ಲಿಸಿದ ಸೇವೆ ಅಪಾರವಾಗಿದೆ. ಅಂದು ಕರ್ನಾಟಕ ದಲ್ಲಿಯ ಇನ್ನುಳಿದ ಪಂಗಡಗಳಿಗಿಂತ ಬ್ರಾಹ್ಮಣರ ಸಂಖ್ಯೆಯು ಸಣ್ಣದಿದ್ದರೂ ಬಹಳ ವರುಷಗಳಿಂದ ಈ ನಾಡಿನ ರಾಜಕೀಯ ಸೂತ್ರಗಳನ್ನು ಯಾರ ಕೈಗೂ ಕೊಡದಂತೆ ಭದ್ರವಾಗಿಯೇ ಹಿಡಿದುಕೊಂಡು ಬಂದು, ಇಡೀ ನಾಡಿನಲ್ಲಿಯೇ ಅವರು ಮುಂದುವರಿದವ ರಾದರು. ರಾಜಕೀಯ ಪ್ರಪಂಚದಲ್ಲಿ ಲಿಂಗಾಯತರು ಸುಸಜ್ಜಿತರಾಗಿ ಮುಂದೆ ಬಂದೊಡನೆಯೆ ಬ್ರಾಹ್ಮಣರು ಯೋಚನೆಗೀಡಾದರು. ಅಲ್ಲಿ ತಮ್ಮ ಹಿತವನ್ನು ಪ್ರಸ್ತಾಪಿಸುವುದಕ್ಕೋಸುಗ ಬ್ರಾಹ್ಮಣೇತರರ ಮೇಲೂ ಪ್ರಾಬಲ್ಯವನ್ನು ಬೀರುವುದಕ್ಕೆ ಪ್ರಯತ್ನಿಸತೊಡಗಿದರು, ಬ್ರಾಹ್ಮಣೇತರರು ಬಹುಸಂಖ್ಯಾತರಾಗಿದ್ದರೂ ಶೈಕ್ಷಣಿಕ ಹಾಗೂ ರಾಜಕೀಯ ದೃಷ್ಟಿಯಿಂದ ಹಿಂದುಳಿದವ ರಾಗಿದ್ದರು. ಆದರೆ ಏಕೀಕರಣ ಚಳವಳಿಯ ಗಾಳಿ ಪ್ರಬಲವಾಗಿ ಬೀಸತೊಡಗಿದಂದಿನಿಂದ ಇವರೂ ಕೂಡ ಮೂಡಲಿರುವ ಏಕೀಕೃತ ಕರ್ನಾಟಕದಲ್ಲಿ ತಮ್ಮ ಸ್ಥಾನವೇನೆಂಬುದನ್ನು ಊಹಿಸಿಕೊಂಡು ಮೆಲ್ಲಮೆಲ್ಲನೆ ಮುಂದಕ್ಕೆ ಬರತೊಡಗಿದರು. ಜಾತೀಯತೆಯ ಬಲವಾದ ಕಟ್ಟುನಿಟ್ಟುಗಳು ಬ್ರಾಹ್ಮಣೇತರರ ಮನಸ್ಸನ್ನು ಕದಲಿಸಿದವು. ತತ್ಪರಿಣಾಮವಾಗಿ ಬ್ರಾಹ್ಮಣೇತರರು ಬ್ರಾಹ್ಮಣರಿಗಿಂತ ಲಿಂಗಾಯತರ ಮೇಲೆ ಅವರಿಗೆ ವಿಶ್ವಾಸವಿತ್ತು.

**ಮೈಸೂರಿನ ಜನರ ವಿರೋಧ**

ಎಸ್. ನಿಜಲಿಂಗಪ್ಪನವರು ಏಕೀಕರಣ ಚಳುವಳಿ ಯನ್ನು ತೀವ್ರಗೊಳಿಸಿದಾಗ ಮೈಸೂರು ಭಾಗದ ಜನರು ವಿರೋಧಿಸತೊಡಗಿದರು. ನಮಗೆ ಮೈಸೂರು ಮಹಾರಾಜರೇ ಸರ್ಕಾರ, ದೇವರು ಅವರ ಹೊರತಾಗಿ ನಮಗೆ ಬೇರೆ ಏಕೀಕರಣ ಬೇಡ ಎಂಬುದು ಅವರ ಅಂಬೋಣ. ಕಾಂಗ್ರೆಸ್ ಪಕ್ಷ ಒಮ್ಮೆ ಏಕೀಕರಣಕ್ಕೆ ಒಪ್ಪಿಗೆ ಕೊಟ್ಟರೆ ಮೈಸೂರು ಮಹಾರಾಜನ ಅಧಿಕಾರ ತನ್ನಿಂದ ತಾನೆ ಹೊರಟು ಹೋಗುತ್ತದೆ. ಆಗ ಸಹಜವಾಗಿಯೇ ಲಿಂಗಾಯತರ ಕೈಗೆ ಅಧಿಕಾರ ಬರುತ್ತದೆ ಎಂಬ ಭಯ ಅವರನ್ನು ಹಗಲು ರಾತ್ರಿ ಕಾಡಿತು. ಅದೇ ಸಂದರ್ಭದಲ್ಲಿ ರಾಷ್ಟ್ರಕವಿ ಕುವೆಂಪು ಏಕೀಕರಣ ಪರವಾಗಿ ಒಂದು ಸುದೀರ್ಘ ಕವನ ಬರೆದರು. ಆದರೆ ಮೈಸೂರು ಭಾಗದ ಜನರು ಕರ್ನಾಟಕ ಎಂಬ ಪದವನ್ನೂ ವಿರೋಧಿಸಿದರೆಂಬುದು ಇನ್ನೂ ವಿಪರ್ಯಾಸದ ಸಂಗತಿ. ಉತ್ತರ ಕರ್ನಾಟಕದ ಜನತೆ ಕರ್ನಾಟಕ ವಿದ್ಯಾವರ್ಧಕ ಸಂಘ, ಕರ್ನಾಟಕ ಲಿಂಗಾಯತ ಶಿಕ್ಷಣ ಸಂಸ್ಥೆ, ಕರ್ನಾಟಕ ಕಾಲೇಜು, ಕರ್ನಾಟಕ ವಿಶ್ವವಿದ್ಯಾಲಯ ಎಂದು ಎಲ್ಲ ಶೈಕ್ಷಣಿಕ-ಸಾಂಸ್ಕೃತಿಕ ಸಂಸ್ಥೆಗಳಿಗೆ ಕರ್ನಾಟಕದ ಹೆಸರು ಬಳಸಿದರೆ, ಮೈಸೂರು ಭಾಗದ ಜನರು ಕರ್ನಾಟಕ ಎಂಬ ಪದವನ್ನು ತಪ್ಪಿಯೂ ಬಳಸಿಲ್ಲವೆಂಬುದು ಗಮನಾರ್ಹ ಸಂಗತಿ. ಹೀಗಾಗಿ ಪ್ರಾದೇಶಿಕ ಅಸಮತೋಲನ ಎಂಬುದು ಈಗಿನ ಸಂಗತಿಯಲ್ಲ, ಅದು ಅಂದಿನಿಂದಲೂ ಇದೆ.

**ಆಯೋಗಗಳು**

ಕರ್ನಾಟಕ ಏಕೀಕರಣ ದೃಷ್ಟಿಯಿಂದ ಮೂರು ಆಯೋಗಗಳು ಅತ್ಯಂತ ಪ್ರಮುಖ ಪಾತ್ರ ವಹಿಸಿವೆ. ಧರ ಆಯೋಗ, ಫಜಲ ಅಲಿ ಆಯೋಗ ಮತ್ತು ಮಹಾಜನ ಆಯೋಗ. ಈ ಎಲ್ಲ ಆಯೋಗಗಳು ಒಂದು ರೀತಿಯಲ್ಲಿ ಕರ್ನಾಟಕಕ್ಕೆ ಗಂಭೀರವಾದ ಅನ್ಯಾಯವನ್ನೇ ಮಾಡಿದವು. ನಮ್ಮ ಜನರ ಅವಜ್ಞೆಯ ಪರಿಣಾಮವಾಗಿ ಆಯೋಗಗಳ ಮುಖ್ಯಸ್ಥರು ತಪ್ಪು ಅಭಿಪ್ರಾಯಗಳಿಗೆ ಮಾರುಹೋಗಿ, ಕರ್ನಾಟಕದ ಎಷ್ಟೋ ಹಳ್ಳಿ-ಪಟ್ಟಣಗಳನ್ನು ಕರ್ನಾಟಕದಿಂದ ಬೇರ್ಪಡಿಸಿದರು. ಬೆಳಗಾವಿಯ ಸಮಸ್ಯೆ ಇನ್ನೂ ಇರುವುದು ನಮ್ಮ ರಾಜಕೀಯ ಮುಖಂಡರ ತಿಳಿಗೇಡಿತನ ಮತ್ತು ಹೊಣೆಗೇಡಿತನದಿಂದ ಎಂದರೆ ಅತಿಶಯೋಕ್ತಿಯಲ್ಲ.

ಈ ಎಲ್ಲ ಆಯೋಗಗಳು ಕರ್ನಾಟಕಕ್ಕೆ ಬಂದಾಗ ಅವುಗಳ ಮುಂದೆ ಪ್ರಮುಖ ಸಾಕ್ಷಿ ನೀಡಿದವರಲ್ಲಿ ಮರಾಠಿಗರಿಂದ ಕನ್ನಡಿಗರ ಸಂಖ್ಯೆ ಗಣನೀಯ. ಡಾ॥ ಶಿವಬಸವ ಸ್ವಾಮಿಗಳು ಮತ್ತು ಉರವಕೊಂಡದ ಸ್ವಾಮೀಜಿ ಫಜಲ ಅಲಿ ಆಯೋಗದ ಮುಂದೆ ಸಾಕ್ಷಿ ನೀಡಿದರು. ನಿಜಲಿಂಗಪ್ಪ, ಹಳ್ಳಿಕೇರಿ ಗುದ್ಲೆಪ್ಪ, ಕಲ್ಲನಗೌಡ ಪಾಟೀಲ, ಪಾಟೀಲ ಪುಟ್ಟಪ್ಪ, ಕೋ. ಚೆನ್ನಬಸಪ್ಪ ಮುಂತಾದ ಗಣ್ಯಾತಿಗಣ್ಯರೆಲ್ಲ ಏಕೀಕರಣಕ್ಕಾಗಿ ಕಂಕಣಬದ್ಧರಾಗಿ ಹೋರಾಟ ಮುಂದುವರಿಸಿದರು. ಭಾಲ್ಕಿ ಹಿರೇಮಠದ ಚೆನ್ನಬಸವ ಪಟ್ಟದ್ದೇವರು ಮುಸ್ಲಿಂ ರಜಾಕಾರರ ಉಗ್ರಹಾವಳಿ ಯಲ್ಲಿಯೂ ಬೀದರ ಭಾಗದಲ್ಲಿ ಕನ್ನಡದ ಕಂಪು ಉಳಿಯುವಂತೆ ಧೀರೋದಾತ್ತರಾಗಿ ಹೋರಾಡಿದ್ದು ಇಂದು ಇತಿಹಾಸ.

ವಚನ ಪಿತಾಮಹ ಡಾ॥ ಫ. ಗು. ಹಳಕಟ್ಟಿ ಅವರು ಕೇವಲ ವಚನ ಸಾಹಿತ್ಯವನ್ನು ಪ್ರಕಟಿಸಲಿಲ್ಲ. ಕರ್ನಾಟಕ ಏಕೀಕರಣದ ಕನಸನ್ನು ಕಂಡ ಅವರು ನವಕರ್ನಾಟಕ ಎಂಬ ಪತ್ರಿಕೆಯನ್ನು ಪ್ರಕಟಿಸುವ ಮೂಲಕ ಕನ್ನಡಿಗರಲ್ಲಿ ಏಕೀಕರಣದ ಅಭಿಮಾನವನ್ನು ತುಂಬಿದರು. ಪದ್ಮಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು ಏಕೀಕರಣ ಚಳುವಳಿಯಲ್ಲಿ ವಹಿಸಿದ ಪಾತ್ರ ಸ್ಮರಣೀಯ. ಅವರು ಸ್ವತಂತ್ರ ಕರ್ನಾಟಕ ಎಂಬ ಪತ್ರಿಕೆಯ ಮೂಲಕ ಚಳುವಳಿಗೆ ಒಂದು ಹೊಸ ರೂಪ ಕೊಟ್ಟರು. ಧಾರವಾಡದ ಹೊಸ್ನಾಪುರಮಠ ಗದಿಗೆಯ್ಯನವರು ಏಕೀಕರಣ ಚಳುವಳಿಯ ಪಿತಾಮಹರಂತೆ ಕಾರ್ಯ ನಿರ್ವಹಿಸಿದರು. ತಮ್ಮ ಚಂದ್ರೋದಯ ಪತ್ರಿಕೆಯ ಮೂಲಕ ನಾಡಿನೆಲ್ಲೆಡೆ ಏಕೀಕರಣದ ಮೂಲ ಸ್ವರೂಪವನ್ನು ತಿಳಿಸಿ, ಇಡೀ ಸಮುದಾಯ ಸ್ಫೂರ್ತಿಯಿಂದ ಚಳುವಳಿಯಲ್ಲಿ ಭಾಗವಹಿಸುವಂತೆ ಮಾಡಿದ ಶ್ರೇಯಸ್ಸು ಹೊಸ್ನಾಪುರ ಮಠರದು.

**ಏಕೀಕರಣದ ಕನಸು ನನಸಾಯಿತು**

ಪ್ರಧಾನಿ ನೆಹರೂ ಅವರು ಮೊದಮೊದಲು ಪ್ರಾಂತಭಾಷಾ ರಚನೆಗೆ ಅಷ್ಟು ಒತ್ತುಕೊಟ್ಟರಲಿಲ್ಲ. ಇದೇ ಕಾಲಕ್ಕೆ ಆಂಧ್ರಪ್ರದೇಶದಲ್ಲಿ ಪೊಟ್ಟಿ ಶ್ರೀರಾಮಲು ಅವರು ಉಪವಾಸ ಸತ್ಯಾಗ್ರಹ ಆರಂಭಿಸಿದರು. ಉಪವಾಸದ ಕಾರಣವಾಗಿ ಅವರು ತೀರಿಕೊಂಡರು. ಆಂಧ್ರ ಹೊತ್ತಿ ಉರಿಯಿತು. ಆಗ ನೆಹರೂ ಅವರು ಆಂಧ್ರ ರಾಜ್ಯ ರಚನೆಗೆ ಚಾಲನೆ ನೀಡಿದರು. ಇದೇ ಕಾರಣವನ್ನು ಮುಂದಿಟ್ಟುಕೊಂಡು ಕರ್ನಾಟಕದಲ್ಲಿ ಅದರಗುಂಚಿ ಶಂಕರಗೌಡರು ಉಪವಾಸ ಸತ್ಯಾಗ್ರಹ ಆರಂಭಿಸಿದರು. ಸರ್ಕಾರ ಕನ್ನಡಿಗರ ಧ್ವನಿಗೆ ಓಗೊಟ್ಟು ೧೯೫೬ ನವೆಂಬರ್ ೧ರಂದು 'ವಿಶಾಲ ಮೈಸೂರು' ರಾಜ್ಯ ನಿರ್ಮಾಣಕ್ಕೆ ಚಾಲನೆ ನೀಡಿತು. ನಂತರ 'ಮೈಸೂರು ರಾಜ್ಯ' ಎಂಬ ಚಾಲನೆಗೆ ಬಂದಿತು. ೧೯೭೩ರಲ್ಲಿ ದೇವರಾಜ ಅರಸರು ಮುಖ್ಯಮಂತ್ರಿಗಳಾಗಿದ್ದ ಸಂದರ್ಭ ದಲ್ಲಿ 'ಮೈಸೂರು' ಹೆಸರು ಹೋಗಿ 'ಕರ್ನಾಟಕ' ರಾಜ್ಯ ಎಂದು ಪುನರ್ ನಾಮಕರಣವಾಯಿತು.

ಏಕೀಕರಣದ ಸುವರ್ಣ ಮಹೋತ್ಸವ ಕಾಲಕ್ಕೆ ನವಕರ್ನಾಟಕ ಪ್ರಕಾಶನದವರು ಅತ್ಯುತ್ತಮ ಕೃತಿ ಗಳನ್ನು ಪ್ರಕಟಿಸಿ ಮಹದುಪಕಾರ ಮಾಡಿದ್ದರು. ಎಚ್. ಎಸ್. ಗೋಪಾಲರಾವ್ ಅವರಿಂದ 'ಕರ್ನಾಟಕ ಏಕೀಕರಣದ ಇತಿಹಾಸ' ಎಂಬ ಬೃಹತ್ ಗ್ರಂಥವನ್ನು ಬರೆಯಿಸಿ ಪ್ರಕಟಿಸಿದ್ದರು.

ಈ ವರ್ಷ ಏಕೀಕರಣಕ್ಕೆ ೬೦ರ ಸಂಭ್ರಮ! ಆದರೆ ಈ ಸಂಭ್ರಮವನ್ನು ಆಚರಿಸುವ ಯಾವ ಲಕ್ಷಣಗಳು ಕನ್ನಡಿಗರಲ್ಲಿ ಕಾಣುತ್ತಿಲ್ಲವೆಂಬುದು ಅಷ್ಟೇ ವಿಷಾದನೀಯ ಸಂಗತಿಯಾಗಿದೆ.

**ಪ್ರಕಾಶ ಗಿರಿಮಲ್ಲನವರ**
ಎಸ್.ಎಸ್.ಇ.ಟಿ. ಐಟಿಐ ಕಾಲೇಜು, ಶಿವಬಸವನಗರ
ಬೆಳಗಾವಿ - ೫೯೦ ೦೧೦

**ಅಭಿನಂದನೆಗಳು ............**

ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಯಿಂದ ೨೦೧೫ನೇ ಸಾಲಿನ 'ದಾನ ಚಿಂತಾಮಣಿ ಅತ್ತಿಮಬ್ಬೆ' ಪ್ರಶಸ್ತಿಯು ಶ್ರೀಮತಿ ನೇಮಿಚಂದ್ರ ಅವರಿಗೆ ಹಾಗೂ 'ಪಂಪ ಪ್ರಶಸ್ತಿ'ಯು ಡಾ॥ ಬಿ. ಎ. ಸನದಿ ಅವರಿಗೆ ಲಭಿಸಿದೆ.

ಇವರಿಬ್ಬರಿಗೂ 'ನವಕರ್ನಾಟಕ' ಹಾಗೂ 'ಹೊಸತು' ಬಳಗದ ಅಭಿನಂದನೆಗಳು.

ಅಡ್ಯನಡ್ಕ ಕೃಷ್ಣ ಭಟ್

# ನೊಬೆಲ್ ಪ್ರಶಸ್ತಿಯ ವಿಜ್ಞಾನ ತಾಣಗಳು (೨೦೧೬)




ಭೌತ, ರಸಾಯನ, ವೈದ್ಯಕೀಯ–ಶರೀರವಿಜ್ಞಾನ ಕ್ಷೇತ್ರಗಳಲ್ಲಿ ಉನ್ನತ ಸಾಧನೆ ಮಾಡಿದವರನ್ನು ಗುರುತಿಸಿ ಆಲ್ಫ್ರೆಡ್ ನೊಬೆಲ್ (ಸ್ವೀಡನ್, ೧೮೩೩–೧೮೯೬) ಹೆಸರಲ್ಲಿ ಪ್ರಶಸ್ತಿಗಳನ್ನು ನೀಡುವರಷ್ಟೆ. ಕೆಲವೊಮ್ಮೆ ಹೀಗೆ ಗುರುತಿಸುವಾಗ ನಿಶ್ಚಿತ ಕ್ಷೇತ್ರಗಳ ಸೀಮಾರೇಖೆಗಳೇ ಮಸುಕಾಗಿಬಿಡಬಹುದು. ಆದರೆ ಪ್ರಶಸ್ತಿ ಪ್ರದಾನದ ಹಿನ್ನೆಲೆಯಲ್ಲಿ ಮಾನವಕೋಟಿಯ ಹಿತಾಶಯ ಜಿನುಗುತ್ತಲೇ ಇರುತ್ತದೆ. ೨೦೧೬ರಲ್ಲಿ ಘೋಷಿಸಿದ ಪ್ರಶಸ್ತಿಗಳಿಗೆ ಕಾರಣವಾದ ವಿಜ್ಞಾನ ತಾಣಗಳೂ ಇದಕ್ಕೆ ಅಪವಾದವಾಗಿಲ್ಲ. ಈ ತಾಣಗಳ ಸಂಕ್ಷಿಪ್ತ ಪರಿಚಯದಿಂದ ಇದು ಮನವರಿಕೆಯಾಗುತ್ತದೆ.

**ಅಜ್ಞಾತ ಜಗತ್ತಿನ ನಿರುಪಮ ದ್ರವ್ಯಗಳು**

ಟಾಪಾಲಜಿ– ಗಣಿತದ ಒಂದು ವಿಭಾಗ. ಒಂದು ವಸ್ತುವನ್ನು ಹಿಸುಕಿ, ತೀಡಿ, ಎಳೆದು, ವಿರೂಪಗೊಳಿಸಿ. ಇದರಿಂದ ಅದರ ಗಾತ್ರ–ಆಕಾರ ಬದಲಾದೀತು. ಆದರೆ ಬದಲಾಗದ ಅದರ ಜ್ಯಾಮಿತಿಗುಣಗಳು–ಸ್ಥಾನ ವ್ಯೋಮ ಸಂಬಂಧಗಳು – ಇದ್ದರೆ ಅವುಗಳ ಅಧ್ಯಯನವನ್ನು ಟಾಪಾಲಜಿ ಎನ್ನಬಹುದು. ಚೆಂಡು ಮತ್ತು ಬೋಗುಣಿ ಟಾಪಾಲಜಿಯವಾಗಿ ಸಮವಾಗಬಹುದು. ಆದರೆ ಅವುಗಳಲ್ಲಿ ಒಂದಕ್ಕೆ ತೂತು ಬಿದ್ದರೆ ಸಮತೆ ಮಾಯವಾಗುತ್ತದೆ. ಇದುವರೆಗೆ ತಿಳಿಯದ, ವಸ್ತು ಜಗತ್ತಿನ ಬಾಗಿಲನ್ನು ಟಾಪಾಲಜಿಯ ಸಂಕೀರ್ಣ ಲೆಕ್ಕಾಚಾರಗಳಿಂದ ತೆರೆದು ಅಸಾಮಾನ್ಯ ಅಥವಾ ನಿರುಪಮ ಎನಿಸಬಹುದಾದ ಪದಾರ್ಥ ಗುಣಗಳನ್ನು ಡೇವಿಡ್ ತೌಲೆಸ್ (ಅಮೆರಿಕ), ಡಂಕನ್ ಹಾಲ್ಡೇನ್ (ಅಮೆರಿಕ) ಮತ್ತು ಮೈಕೆಲ್ ಕೋಸ್ಟರ್‌ಲಿಟ್ಸ್ (ಅಮೆರಿಕ) ತೋರಿಸಿಕೊಟ್ಟರು. ಈ ಮೂವರೂ ನೊಬೆಲ್ ಭೌತ ಪ್ರಶಸ್ತಿ ಪಡೆದರು.

ವಿದ್ಯುತ್ ರೋಧ ಇರುವುದರಿಂದಲೇ ಇಸ್ತ್ರಿಪೆಟ್ಟಿಗೆಯೊಳಗಿನ ತಂತಿ, ಹೀಟರ್ ಸುರುಳಿ ಬಿಸಿಯಾಗುತ್ತವೆ. ರೋಧವೇ ಇಲ್ಲವಾದರೆ ? ಬಿಸಿಯಾಗಲು ಸಾಧ್ಯವಿಲ್ಲ ತಾನೆ ? ಈ ಸ್ಥಿತಿಯನ್ನು ಅಧಿವಾಹಕತೆ (ಸೂಪರ್ ಕಂಡಕ್ಟಿವಿಟಿ) ಎನ್ನುತ್ತಾರೆ. ದ್ರವ ಹೀಲಿಯಮ್ ತಾನಿರುವ ಧಾರಕದ ಗೋಡೆಯನ್ನೇರಿ ಸಾಗಬಲ್ಲುದು. ಇದು ಅಧಿದ್ರವತೆ (ಅಥವಾ ಅತಿ ತರಲತೆ). ತೆಳುವಾದ ಪೊರೆಯಲ್ಲಿ ಕಾಂತತೆ ಇರುವ ಕಾಂತೀಯ ಪಟಲವೂ ಈಗ ಕೈಗೆಟುಕಿದೆ. ಈ ಎಲ್ಲ ವಿದ್ಯಮಾನಗಳು ಎರಡು ಆಯಾಮಗಳ ಪಟಲ (ಫಿಲ್ಮ್)ಗಳಲ್ಲಿ ಅಸಾಧ್ಯ ಎಂದು ಹಿಂದೆ ಭಾವಿಸಿದ್ದರು. ೧೯೭೦ರ ವರ್ಷಗಳಲ್ಲಿ ಈ ಭಾವನೆ ತಲೆಕೆಳಗಾಯಿತು. ವಸ್ತು ಎರಡು ಆಯಾಮಗಳಲ್ಲಿರುವಾಗ ಅದನ್ನು ವಸ್ತುವಿನ 'ಸಮಸ್ಥಲ' (ಫ್ಲಾಟ್ ಲ್ಯಾಂಡ್) ಎನ್ನಬಹುದು. ಸಮಸ್ಥಲದ ಭೌತವು (ಫ್ಲಾಟ್ ಲ್ಯಾಂಡ್ ಫಿಸಿಕ್ಸ್) ಮೂರು ಆಯಾಮಗಳಲ್ಲಿ ಇರುವುದಕ್ಕಿಂತ ತೀರ ಭಿನ್ನವಾಗಿರುವುದನ್ನು ಪ್ರಶಸ್ತಿ ವಿಜೇತರು ತೋರಿಸಿದರು. ಮೂರು ಆಯಾಮಗಳಲ್ಲಿರುವ ಪದಾರ್ಥಗಳ ಘನ, ದ್ರವ, ಅನಿಲ ಸ್ಥಿತಿಗಳನ್ನು ಅವುಗಳ ಪ್ರಾವಸ್ಥೆಗಳೆನ್ನುತ್ತಾರೆ. ಪರಮಾಣುಗಳು ಚಲಿಸುವ ಮುಕ್ತತೆಯ ಮಟ್ಟ ಇಲ್ಲಿ ಮುಖ್ಯ. ಆದರೆ ಟಾಪಾಲಜಿ ಪ್ರಾವಸ್ಥೆಗಳು ಬೇರೆಯೇ ರೀತಿಯವು. ಪರಮಾಣು ಭ್ರಮಣೆಯಿಂದ ಟಾಪಾಲಜಿ ಪದಾರ್ಥಗಳಲ್ಲಿ ವಿಶಿಷ್ಟ ಸುಳಿಗಳುಂಟಾಗುತ್ತವೆ. ಹೀಗೆ ಉಂಟಾಗುವ ಜೋಡಿ ಸುಳಿಗಳು ಒಮ್ಮೆಲೆ ದೂರ ಸರಿಯುವುದರಿಂದ ಪದಾರ್ಥದ ಪ್ರಾವಸ್ಥೆ ಬದಲಾಗುತ್ತದೆ. ಮೆಟ್ಟಲು ಮೆಟ್ಟಲಾಗಿ ವಾಹಕತೆಯಂಥ ಗುಣಗಳು ಬದಲಾಗುವುದೂ ಟಾಪಾಲಜಿ ಪದಾರ್ಥಗಳಲ್ಲೇ.




ಸೈದ್ಧಾಂತಿಕವಾಗಿ ಕಲ್ಪಿಸಿ ರೂಪಿಸುವ ನಿರುಪಮ ಪದಾರ್ಥಗಳ ಅನ್ವಯಗಳನ್ನು ಪೂರ್ತಿಯಾಗಿ ಪಟ್ಟಿ ಮಾಡಲು ಈಗ ಸಾಧ್ಯವಾಗದಿರಬಹುದು. ಆದರೆ ಕ್ವಾಂಟಂ ಕಂಪ್ಯೂಟರ್‌ಗಳಂಥ ನವೀನ ಕಲ್ಪನೆಗಳನ್ನು ಸಾಕಾರಗೊಳಿಸುವಾಗ ಇಂಥ ಪದಾರ್ಥಗಳ ಪಾತ್ರ ಮಹತ್ವ ಪಡೆದೇ ಪಡೆಯುತ್ತದೆ. ಅಷ್ಟೇ ಅಲ್ಲ, ಕೆಳ ಉಷ್ಣತೆಗಳಲ್ಲಿ ಬೋಸಾನ್ (ಪೂರ್ಣಾಂಕ ಸ್ಪಿನ್ ಅಥವಾ ಭ್ರಮಣವಿರುವ ಕಣಗಳು)ಗಳು ಸಾಂದ್ರವಾಗುತ್ತ ಪ್ರಾವಸ್ಥೆಯ ಸಂಕ್ರಮಣಕ್ಕೊಳಗಾಗುವುದು ಈಗಾಗಲೇ ತಿಳಿದಿದೆ. ಹೀಗೆ ಸಿಗುವ ಸಾಂದ್ರಣಗಳು (ಕಂಡೆನ್ಸೇಟ್‌ಗಳು) ನಿರುಪಮ ಪದಾರ್ಥಗಳಾಗುವುವೇ ಎನ್ನುವುದೂ ಕುತೂಹಲದ ಸಂಗತಿಯಾಗಿದೆ.

**ಅಣುಯಂತ್ರಗಳಿಗೆ ಬುಡದಲ್ಲಿ ಬೇಕಾದಷ್ಟು ಜಾಗ**

ಜಾಗದಿಂದ ಜಾಗಕ್ಕೆ ಶಕ್ತಿಯನ್ನು ರವಾನಿಸುವ ಸಾಧನವನ್ನು ಸಾಮಾನ್ಯವಾಗಿ 'ಯಂತ್ರ' ಎನ್ನುತ್ತಾರೆ. ರಚನೆಯನ್ನು ಅವಲಂಬಿಸಿ ಅವು ಸರಳವಾಗಿರಬಹುದು, ಇಲ್ಲವೆ ಸಂಕೀರ್ಣವಾಗಿರಬಹುದು. ೧೯೫೦ರ ವರ್ಷಗಳಲ್ಲಿ ಭೌತವಿಜ್ಞಾನಿ ರಿಚರ್ಡ್ ಫೇಯ್ನ್‌ಮ್ಯಾನ್ (ಅಮೆರಿಕ, ೧೯೧೮–೧೯೮೮) ನೀಡಿದ ಉಪನ್ಯಾಸಗಳಲ್ಲಿ ಒಂದು ಪ್ರಮೇಯವನ್ನು ಮುಂದಿಟ್ಟ: 'ಫಾಜೆಲ ಬ್ಯಾಕ್ಟೀರಿಯದ ಕಾರ್ಕ್ ಸ್ಕ್ರೂ ಆಕಾರದ ದೊಡ್ಡ ಅಣುಗಳು ಭ್ರಮಿಸುವಾಗ ಬ್ಯಾಕ್ಟೀರಿಯ ಮುಂದಕ್ಕೆ ಚಲಿಸುತ್ತದೆ. ಹಾಗಿದ್ದರೆ ನ್ಯಾನೊಮೀಟರ್ ಗಾತ್ರದ ಅಜೈವಿಕ ಯಂತ್ರ ಸಮುಚ್ಚಯ ಸಾಧ್ಯವಾಗದೆ ?' ೧೯೮೪ರಲ್ಲಿ ನೀಡಿದ ಒಂದು ಉಪನ್ಯಾಸದಲ್ಲಿ 'ಬುಡದಲ್ಲಿ ಬೇಕಾದಷ್ಟು ಜಾಗವಿದೆ' ಎಂದು ನಗೆಯಾಡಿದ ಫೇಯ್ನ್ ಮ್ಯಾನ್, ನಮ್ಮ ಕಣ್ಣಿಗೆ ಬೀಳದ ಸೂಕ್ಷ್ಮ ಜಗತ್ತಿನಲ್ಲಿ ಎಷ್ಟೊಂದು ಅವಕಾಶಗಳಿವೆ ಎಂಬುದನ್ನು ಸೂಚಿಸಿದ್ದ. ಈ ದಿಸೆಯಲ್ಲಿ ಮುಂದುವರಿದ ಜೀನ್ ಪಿಯರೆ ಸಾವೇಜ್ (ಫ್ರಾನ್ಸ್), ಫ್ರೇಸರ್ ಸ್ಟೊಡಾರ್ಟ್ (ಅಮೆರಿಕ) ಮತ್ತು ಬರ್ನಾರ್ಡ್ ಫೆರಿಂಗ್ (ನೆದರ್ಲೆಂಡ್ಸ್) ಅಣುಯಂತ್ರಗಳ ವಿನ್ಯಾಸ ಮತ್ತು ಸಂಶ್ಲೇಷಣೆಗಳನ್ನು ಸಾಧಿಸಿದರು. ಶಕ್ತಿಯನ್ನು ಸರಬರಾಜು ಮಾಡಿದಾಗ ಅಣುಗಳು ನಿಯಂತ್ರಿತ ಚಲನೆಗಳನ್ನು ಪಡೆದು ಕೆಲಸ




ಮಾಡುವಂತೆ ಮಾಡಿದರು. ಈ ಯಶಸ್ಸಿಗಾಗಿ ಅವರು ನೊಬೆಲ್ ರಸಾಯನ ಪ್ರಶಸ್ತಿ ಪಡೆದರು.

ಉಂಗುರ ಆಕಾರದ ಎರಡು ಅಣುಗಳನ್ನು ಮೊದಲಿಗೆ ಜೀನ್ ಪಿಯರೆ ಸಾವೇಜ್ ಆರಿಸಿದರು (೧೯೮೩). ಅಣುಗಳಲ್ಲಿರುವ ಇಲೆಕ್ಟ್ರಾನ್‌ಗಳು ಹಂಚಿಹೋಗುವ ಕಾರಣ ಆಗ ಪರಮಾಣುಗಳು ಸಹಬಂಧದಲ್ಲಿರುತ್ತವೆ. ಅನಂತರ ಅವನ್ನು ತಾಮ್ರದ ಅಯಾನಿನ ಸುತ್ತ ಪರಸ್ಪರ ಜಂಟಿಸಿ ಸಂಕಲೆ (ಸರಪಣಿ)ಯನ್ನು ರೂಪಿಸಿದರು. ಇದರಲ್ಲಿ ಹೆಚ್ಚು ಮುಕ್ತವಾದ ಯಾಂತ್ರಿಕ ಬಂಧ ರೂಪುಗೊಂಡಿತು. ಇದನ್ನು ಕ್ಯಾಟೆನೇನ್ ಎಂದು ಕರೆದರು. ಶಕ್ತಿಯನ್ನು ನೀಡಿದಾಗ ಒಂದು ಉಂಗುರ ಮತ್ತೊಂದು ಉಂಗುರದ ಸುತ್ತ ಭ್ರಮಿಸಿತು (ಸುತ್ತು ಬಂತು). ಅಂದರೆ ಪರಸ್ಪರ ಜಂಟಿಯಾದ ಉಂಗುರಗಳು ಯಂತ್ರ ಭಾಗಗಳಂತೆ ಸಾಪೇಕ್ಷ ಚಲನೆಗೆ ಪಕ್ಕಾದುವು. ಅಣು ಗೊಣಸುಗಳನ್ನು ಕಂಡರಿಸುವಾಗ ಹೊಸ ಆಕಾರ ಮತ್ತು ಜೋಡಣೆಗಳನ್ನು ತರಲು ಸ್ಟೊಡಾರ್ಟ್ ಪ್ರಯತ್ನಿಸಿದರು (೧೯೯೧). ಅಣು ಉಂಗುರವನ್ನು ಅಣುಗಳಿಂದಲೇ ಆದ ಸಪುರವಾದ ಅಚ್ಚಿಗೆ ಅವರು ಸುತ್ತಿದರು. ಅಚ್ಚಿನ ಉದ್ದಕ್ಕೂ ಉಂಗುರ ಚಲಿಸಬಲ್ಲುದಾಗಿತ್ತು. ಈ ವ್ಯವಸ್ಥೆಯನ್ನು ರೊಟೆಕ್ಸೇನ್ ಎಂದು ಕರೆದರು. ಇದನ್ನೇ ಆಧಾರವಾಗಿಟ್ಟುಕೊಂಡು ಅಣು ಲಿಫ್ಟ್, ಅಣು ಸ್ನಾಯು ಹಾಗೂ ೨೦ ಕಿಲೊಬೈಟ್ ಸ್ಮರಣೆಯ ಕಂಪ್ಯೂಟರ್ ಚಿಪ್ ತಯಾರಿಸಿದರು.

೧೯೯೯ರ ವೇಳೆಗೆ ಫೆರಿಂಗ್ ಇನ್ನೊಂದು ಮಜಲಿಗೆ ಹೋದರು. ಅದುವೇ ಮೊತ್ತಮೊದಲ ಅಣು ಮೋಟರ್ (ಅಣುಗಳಿಂದ ರಚಿಸಿದ ತಿರುಗು ಹತಾರ). ಮೋಟರ್ ಚಲನೆಯಲ್ಲಿ ಅದರ ಅಚ್ಚಿಗೆ ಸಾಪೇಕ್ಷವಾಗಿರುವುದು ಎರಡೇ ದಿಕ್ಕುಗಳು– ಪ್ರದಕ್ಷಿಣೆ ಮತ್ತು ಅಪ್ರದಕ್ಷಿಣೆ. ಸೆಕೆಂಡಿಗೆ ೧೨ ಮಿಲಿಯನ್ ದರದಲ್ಲಿ ಅಣು ಮೋಟರ್ ಭ್ರಮಿಸಬಲ್ಲುದು. ನಾಲ್ಕು ಚಕ್ರಗಳ ನ್ಯಾನೊ ಕಾರಿನ ಪರಿಕಲ್ಪನೆಯೂ ಮೂಡಿತು. ಇವೆಲ್ಲ ಕ್ರಾಂತಿಕಾರಿ ಯೋಚನೆಗಳೆಂದರೆ ಅತಿಶಯವಾಗದು.

ವಿದ್ಯುತ್ ಮೋಟರ್ ತತ್ವವನ್ನು ಮೈಕೆಲ್ ಫ್ಯಾರಡೆ ತೋರಿಸಿದ (೧೮೨೧) ಹಲವು ವರ್ಷಗಳ ಅನಂತರ ಫ್ಯಾನ್, ವಾಷಿಂಗ್ ಮೆಷಿನ್, ಗ್ರೈಂಡರ್‌ಗಳಂಥ ನಿತ್ಯೋಪಯೋಗಿ ಸಾಧನಗಳು ಬಂದುವಷ್ಟೆ. ಅಣು ಯಂತ್ರಗಳಲ್ಲಿ ಅಣು ವ್ಯವಸ್ಥೆಗಳನ್ನು ಶಕ್ತಿಪೂರಿತ ಸ್ಥಿತಿಗಳಿಗೆ ತಲುಪಿಸಿ ಚಲನೆಗಳನ್ನು ನಿಯಂತ್ರಿಸಬೇಕು. ಕೂದಲೆಳೆಯ ಸಹಸ್ರಾಂಶ ಗಾತ್ರದಲ್ಲಿ ಸಂವೇದಕ, ಶಕ್ತಿಸಂಗ್ರಹ ವ್ಯವಸ್ಥೆಗಳಂಥ ಘಟಕಗಳನ್ನು ಅಳವಡಿಸಬೇಕು. ಇದಕ್ಕೆ ೧೫–೨೦ ವರ್ಷಗಳಾದರೂ ಬೇಕೆಂಬುದು ಒಂದು ಅಂದಾಜು. ಇದೊಂದು ಕ್ರಾಂತಿಕಾರಿ ನೋಟ.

### ಜೀವಕೋಶಗಳಲ್ಲಿ ಸ್ವಭಕ್ಷಣೆ ಮತ್ತು ಮರುಬಳಕೆಗಳ ಮಹತ್ವ

'ಜೀವಕೋಶ' ಅಥವಾ 'ಕೋಶ' ಅಂದರೆ ಜೀವ ಅಥವಾ ಜೀವಿಯ ಅತ್ಯಂತ ಪುಟ್ಟ ಮಾನ ಅಥವಾ ಘಟಕ. ಕೋಶ ಸೀಮೆಯಲ್ಲಿ ಹಲವು ವಿವಿಕ್ತ ಘಟಕಗಳಿವೆ. ಇವುಗಳಲ್ಲಿ ಕೋಶದ್ರವ್ಯ ಮತ್ತು ನ್ಯೂಕ್ಲಿಯಸ್ ಮಾತ್ರವಲ್ಲದೆ ಗುಳ್ಳೆ (ವೆಸಿಕಲ್), ಲೈಸೊಸೋಮ್ (ಇದೊಂದು ವ್ಯಾಕ್ ಯೋಲ್ ಅಥವಾ ಕುಹರ), ಮೈಟೊಕಾಂಡ್ರಿಯಾನ್, ಎಂಡೊಪ್ಲಾಸ್ಮಿಕ್ ರೆಟಿಕ್ಯುಲಮ್, ಗಾಲ್ಜಿ ಸಂಕೀರ್ಣದಂಥ ಆರ್ಗನೆಲೆ (ಅಂಗಕ)ಗಳೂ ಇವೆ. ಕೋಶಸಾಮಗ್ರಿಯನ್ನು ವಿಘಟಿಸುವ ನಿಲ್ಮನೆ ಅಥವಾ ಠಾಣೆಯಾಗಿ ಲೈಸೊಸೋಮ್ ಕುಹರ ವರ್ತಿಸುತ್ತದೆ. ಅದರಲ್ಲಿ ಅನೇಕ ಜೀರ್ಣಕಾರಿ ಎನ್‌ಜೈಮ್‌ಗಳಿವೆ. ಇವು ತಾವು ಬದಲಾಗದೆ ಇವು ಇತರ ಪದಾರ್ಥಗಳಲ್ಲಿ ರಾಸಾಯನಿಕ ಬದಲಾವಣೆಯನ್ನು ಪ್ರೇರಿಸಬಲ್ಲುವು. ವಿಘಟಿಸಬೇಕಾದ ಸರಕನ್ನು–ಪ್ರೊಟೀನ್, ಕಾರ್ಬೊಹೈಡ್ರೇಟ್, ಲಿಪಿಡ್ ಏನೇ ಇರಲಿ ಲೈಸೊಸೋಮಿಗೆ ಸಾಗಿಸುವ ಕೌಶಲ ಕೋಶಕ್ಕಿದೆ. ಲೈಸೊಸೋಮ್‌ಗಳಲ್ಲಿ ನಡೆಯುವ ಕೋಶ ಸಾಮಗ್ರಿಯ ಭಕ್ಷಣೆ ೧೯೫೦–೬೦ರ ವರ್ಷಗಳಷ್ಟು ಹಿಂದೆಯೇ ತಿಳಿದಿತ್ತು. ಈ ಜೈವಿಕ ಪ್ರಕ್ರಿಯೆಯಲ್ಲಡಗಿರುವ ವಿಜ್ಞಾನವೂ ಅಪರಿಚಿತವಾಗಿರಲಿಲ್ಲ. ಆದರೆ ತನಗೆ ರೂಪುಕೊಟ್ಟ ತನ್ನದೇ ಸಾಮಗ್ರಿಯನ್ನು ಸಾಗಿಸಲು ವಿಶಿಷ್ಟ ವೆಸಿಕಲ್‌ಗಳ – ಇವನ್ನು ಅಟೊಫೇಜಿಯೊಸೋಮ್ ಎಂದು ಕರೆದಿದ್ದಾರೆ – ತಯಾರಿ, ಸ್ವಭಕ್ಷಣೆ ಅಥವಾ ಮರುಬಳಕೆಗಾಗಿ ಲೈಸೊಸೋಮ್ ಕಡೆ ಸರಕು ಸಾಗಣೆ, ಶಕ್ತಿಗಾಗಿ ಇಂಧನ ಪೂರೈಕೆ, ತನ್ನ ಘಟಕಗಳ ನವೀಕರಣಕ್ಕಾಗಿ ರಚನಾಘಟಕಗಳ ಸರಬರಾಜು ಆಗಬೇಕಷ್ಟೆ. ಇದಕ್ಕಾಗಿ ಕೋಶದಲ್ಲಿ ವಿಕಾಸಗೊಂಡ ನಾಜೂಕಾದ ಯಂತ್ರತೆ – ಅಂದರೆ ಕಾರ್ಯವೈಖರಿ – ಹಾಗೂ ಜೀವ ವ್ಯವಸ್ಥೆಯಲ್ಲಿ ಅದರ ಮೂಲಭೂತ ಪಾತ್ರಗಳನ್ನು ಇನ್ನೂ ತಿಳಿಯುವುದಕ್ಕಿತ್ತು.

ಯೊಶಿನೋರಿ ಒಹ್ಸುಮಿ (ಜಪಾನ್) ಈ ದಿಸೆಯಲ್ಲಿ ನಡೆಸಿದ ಸಂಶೋಧನೆ ದೂರಗಾಮಿ ಆವಿಷ್ಕಾರಗಳೊಂದಿಗೆ ಹೊಸ ದಿಗಂತವನ್ನೇ ತೆರೆಯಿತು. ಇದರ ಮಹತ್ವವನ್ನು ಗುರುತಿಸುವಂತೆ ೨೦೧೬ರ ವೈದ್ಯಕೀಯ–ಶರೀರ ವಿಜ್ಞಾನದ ನೊಬೆಲ್ ಪ್ರಶಸ್ತಿಗೆ ಒಹ್ಸುಮಿಯವರನ್ನು ಆಯ್ಕೆಮಾಡಲಾಯಿತು. ಇದಕ್ಕಾಗಿ ಸುಮಾರು ೧೯೮೮ರಿಂದ ಅವರು ಕೈಗೊಂಡ ಪ್ರಯೋಗ ವೈವಿಧ್ಯದಿಂದ ಕೋಶವಿಜ್ಞಾನದಲ್ಲಿ ಸೀಮೋಲ್ಲಂಘನವೇ ಆಗಿಹೋಯಿತು !

ತಮ್ಮ ಪ್ರಯೋಗಕ್ಕೆ ಮೊದಲಿಗೆ ಒಹ್ಸುಮಿಯವರು ಮಾದರಿಯಾಗಿ ಯೀಸ್ಟ್ ಕೋಶಗಳನ್ನು ಬಳಸಿದರು. ಅವುಗಳಲ್ಲಿ ಸ್ವಭಕ್ಷಣೆ ಸಕ್ರಿಯವಾಗಿರುವಾಗಲೇ ವಿಘಟನೆ ಸರಿಯಾಗಿ ನಡೆಯದಂತೆ ಭಂಗಿಸಿದರು. ಪ್ರೊಟೀನ್ ಪೂರೈಕೆಯನ್ನು ತಡೆದು ಕೋಶಗಳನ್ನು ಉಪವಾಸ ಕೂರಿಸಿದರು. ಸ್ವಲ್ಪ ಹೊತ್ತಿನಲ್ಲೇ ಅಟೊಫೇಗೊಸೋಮ್ ಗುಳ್ಳೆಗಳು ಸಂಗ್ರಹವಾದುವು. ಸ್ವಭಕ್ಷಣೆಯ ಪ್ರಕ್ರಿಯೆ ಅವುಗಳಲ್ಲಿರುವುದಕ್ಕೆ ಇದು ಪುರಾವೆಯಾಯಿತು. ಮುಂದೆ, ಜೀನ್ ಬದಲಾವಣೆಯಿಂದ ವಿಕೃತಗೊಂಡ ಕೋಶಗಳನ್ನು ಪರಿಶೀಲಿಸಿ ಸ್ವಭಕ್ಷಣೆಗೆ ಕಾರಣವಾದ ಜೀನ್‌ಗಳನ್ನು ಆವಿಷ್ಕರಿಸಿದರು.

ಭ್ರೂಣ ಬೆಳವಣಿಗೆ, ಕೋಶ ಮಾರ್ಪಾಟು (ಅಥವಾ ವಿಶೇಷೀಕರಣ)ಗಳಿಂದ ಬೇರೆ ಬೇರೆ ಕಾರ್ಯಭಾರಗಳ ನಿರ್ವಹಣೆ, ಮುಪ್ಪಿನ ಕೆಟ್ಟ ಪರಿಣಾಮಗಳು, ಪಾರ್ಕಿನ್ಸನ್ ರೋಗ, ೨ನೇ ನಮೂನೆ ಸಕ್ಕರೆ ರೋಗ – ಇವಕ್ಕೆಲ್ಲ ಕೋಶದ ಸ್ವಭಕ್ಷಣೆ ಪ್ರಕ್ರಿಯೆ ಸಂಬಂಧಗೊಂಡಿರುವುದು ಒಹ್ಸುಮಿ ಸಂಶೋಧನೆಗಳಿಂದ ತಿಳಿದುಬಂದಿದೆ.

ಹೊಸ ಔಷಧಗಳ ತಯಾರಿ ಮುಂದೆ ನಡೆಯಬಹುದಾದ ದೊಡ್ಡ ಬೆಳವಣಿಗೆಗೆ ಸೂಚಕ.

ಈ ವರ್ಷ ಮೆಚ್ಚುಗೆಗೆ ಒಳಗಾದ ವಿಜ್ಞಾನ ಠಾಣಗಳಲ್ಲಿ ಇನ್ನೂ ಅಂತಿಮವಾಗದ ಚಟುವಟಿಕೆಗಳು ಹಲವು.

*(ಚಿತ್ರ ಕೃಪೆ : ಸ್ವೀಡಿಶ್ ಅಕಾಡೆಮಿ ಆಫ್ ಸೈನ್ಸಸ್)*




**ಅಡ್ಡನಡ್ಕ ಕೃಷ್ಣ ಭಟ್**
ನಿಪ್ಪಾಣಿ ಕಣ್ಣಿನ ಆಸ್ಪತ್ರೆ, ಮುಖ್ಯರಸ್ತೆ
ಗೋಕಾಕ – ೫೯೧ ೩೦೭ ಬೆಳಗಾವಿ ಜಿಲ್ಲೆ

# ಕಪ್ಪತ್ತಗುಡ್ಡದ ಒಳಸುಳಿ ಮತ್ತು ಹೊರಸುಳಿ

ಕಪ್ಪತ್ತಗುಡ್ಡದ ಒಡಲೊಳಗೆ ಹಲವಾರು ಕೆರೆಗಳು, ಕೊಳ್ಳಗಳು ಇವೆ. ಇವೆಲ್ಲವುಗಳು ಕಪ್ಪತ್ತಗುಡ್ಡದ ಜೀವನಾಡಿಗಳು. ಇಲ್ಲಿನ ಉಸುಕಿನಕೊಳ್ಳ, ಬೆಣ್ಣಿಕೊಳ್ಳ, ಉಪ್ಪಿನಕೊಳ್ಳ ಇತ್ಯಾದಿ ಕೊಳ್ಳಗಳ ಹೆಸರುಗಳು ರೋಮಾಂಚನಗೊಳಿಸುವಂಥವು. ಇವುಗಳ ಮೇಲೆ ನಿರಂತರ ದಾಳಿ ನಡೆದಿದೆ. ಇನ್ನು ಇಲ್ಲಿನ ಸಸ್ಯ ಸಂಕುಲದ ಮೇಲೆ ನಿತ್ಯವೂ ಅತ್ಯಾಚಾರ ನಡೆಯುತ್ತಿದೆ. ಇದರಿಂದ ಕಪ್ಪತ್ತಗುಡ್ಡ ನಲುಗುತ್ತಿದೆ.

**ಎಂ. ಮಂಜುನಾಥ ಬಮ್ಮನಕಟ್ಟಿ**

ದಕ್ಷಿಣ ಭಾರತದ ಶಿಮ್ಲಾ, ಉತ್ತರ ಕರ್ನಾಟಕದ ಸಹ್ಯಾದ್ರಿ ಎಂದೇ ಗದಗ ಜಿಲ್ಲೆಯ ಕಪ್ಪತ್ತಗುಡ್ಡ ಪ್ರಸಿದ್ಧಿ. ನಮ್ಮ ಜನಪದರ ಗೀತೆಗಳಲ್ಲಿ ಈ ಗುಡ್ಡದ ಬಗ್ಗೆ 'ಎಪ್ಪತ್ತುಗುಡ್ಡ ನೋಡುವುದಕ್ಕಿಂತ ಕಪ್ಪತ್ತಗುಡ್ಡ ನೋಡು', 'ಕಾಡ ಮಳೆಯೇ ಕಪ್ಪತ್ತಮಳೆಯೇ', ಎಂದು ಬಣ್ಣನೆ ಇದೆ. ಅಂತಹ ನೈಸರ್ಗಿಕ ಸಂಪತ್ತುಗಳ ವೈಭವ ಈ ಕಪ್ಪತ್ತಗುಡ್ಡದ್ದು. ಈ ಕಪ್ಪತ್ತಗುಡ್ಡ ಮೇಲಿಂದ ಮೇಲೆ ರಾಜ್ಯದಲ್ಲಿ ಚರ್ಚೆಯಾಗುತ್ತಿದೆ. ಈ ಚರ್ಚೆ ಯಾಕೆ ? ಏನು ? ಎಂಬುದರ ಒಳಸುಳಿ ಮತ್ತು ಹೊರಸುಳಿ ಇಲ್ಲಿದೆ.

ಗದಗ ತಾಲೂಕಿನ ಬಿಂಕದಕಟ್ಟಿಯಿಂದ ಹಿಡಿದು ಶಿರಹಟ್ಟಿ ತಾಲೂಕು ಮತ್ತು ಮುಂಡರಗಿ ತಾಲೂಕಿನ ಶಿಂಗಟಾಲೂರಿನವರೆಗೆ ಹರಡಿಕೊಂಡಿರುವ ಕಪ್ಪತ್ತಗುಡ್ಡದ ವಿಸ್ತೀರ್ಣ ಬರೋಬ್ಬರಿ ೩೩ ಸಾವಿರ ಹೆಕ್ಟರ್. ಇಂತಹ ನೈಸರ್ಗಿಕ ಸಂಪತ್ತಿನ ಗುಡ್ಡ ಇಡೀ ಉತ್ತರ ಕರ್ನಾಟಕದಲ್ಲಿಯೇ ಮತ್ತೊಂದು ಸಿಗದು. ಅಷ್ಟೇ ಅಲ್ಲ ಇದು ಬರಿ ಹಚ್ಚಹಸಿರಿನಿಂದ ತುಂಬಿದ ಗುಡ್ಡ ಮಾತ್ರವಲ್ಲ, ಇದು ಅನೇಕ ರೀತಿಯ ಸಂಪತ್ತು ಒಳಗೊಂಡಿರುವುದು ಇದರ ವೈಶಿಷ್ಟ್ಯಕ್ಕೆ ಮತ್ತೊಂದು ಕಿರೀಟ. ಈ ಕಪ್ಪತ್ತಗುಡ್ಡದಲ್ಲಿ ಸುಗಂಧ ದ್ರವ್ಯಗಳಿಂದ ಹಿಡಿದು ೪೦೦ಕ್ಕೂ ಹೆಚ್ಚು ಔಷಧೀಯ ಸಸ್ಯಗಳು ಇವೆ. ಜೊತೆಗೆ ಲೋಭಾನ, ಅಂಟು, ಊಟದ ಎಲೆ, ಬೀಡಿ ಎಲೆ ಇನ್ನಿತರ ವಸ್ತುಗಳ ತಯಾರಿಕೆಗೆ ಬೇಕಾದ ಕಚ್ಚಾವಸ್ತುಗಳನ್ನು ಕೊಡುವ ಸಸ್ಯ ಸಂಕುಲಗಳು ಇಲ್ಲಿವೆ.

ಇನ್ನು ಈ ಕಪ್ಪತ್ತಗುಡ್ಡದಲ್ಲಿ ಅರಣ್ಯ ಇಲಾಖೆಯ ಗಣತಿ ಪ್ರಕಾರ ಚಿರತೆಗಳು, ಕರಡಿಗಳು, ಜಿಂಕೆಗಳು, ತೋಳಗಳು, ನರಿಗಳು, ಕಾಡುಕೋಳಿ, ಕಾಡುಹಂದಿ, ಮುಳ್ಳುಹಂದಿ, ಕತ್ತೆಕಿರುಬ, ಕಾಡುಬೆಕ್ಕುಗಳು ಸಾಕಷ್ಟು ಸಂಖ್ಯೆಯಲ್ಲಿವೆ. ರಾಷ್ಟ್ರಪಕ್ಷಿ ನವಿಲುಗಳು ಇಲ್ಲಿ ಸಹಸ್ರಾರು ಸಂಖ್ಯೆಯಲ್ಲಿವೆ. ಜೊತೆಗೆ ೨೫೦ಕ್ಕೂ ಹೆಚ್ಚು ಬಗೆಯ ಪಕ್ಷಿಗಳ ಸಮೂಹ ಈ ಗುಡ್ಡದೊಳಗೆ ಮನೆಮಾಡಿಕೊಂಡಿವೆ. ಅರಣ್ಯ ಇಲಾಖೆಯ ಗಣತಿಯಂತೆ ಅನೇಕ ಪ್ರಾಣಿಗಳು ಸುತ್ತಲಿನ ಜನರ ಕಣ್ಣಿಗೆ ಕಾಣಿಸಿವೆ, ಕಾಣಿಸುತ್ತಿವೆ. ಜೊತೆಗೆ ಬೆರಳೆಣಿಕೆಯ ಚಿರತೆ, ಕರಡಿ ದಾಳಿಗಳು ಆಗಿವೆ. ಇನ್ನು ತೋಳಗಳ ದಾಳಿ ಸರ್ವೇಸಾಮಾನ್ಯ ಅನ್ನುವಂತಿದೆ. ಇನ್ನು ಈ ವ್ಯಾಪ್ತಿಯಲ್ಲಿ ಬೆಳಗು ಮತ್ತು ಸೂರ್ಯಾಸ್ತದ ವೇಳೆ ಒಂದು ಸುತ್ತು ಹಾಕಿದರೆ ಮಯೂರ ನರ್ತನ ನೋಡುಗರ ನಯನಗಳನ್ನು ತಣಿಸುತ್ತವೆ. ಇಷ್ಟೆಲ್ಲ ವೈಭವ ಈ ಕಪ್ಪತ್ತಗುಡ್ಡದಲ್ಲಿದೆ.

ಇದಕ್ಕೂ ಮಿಗಿಲಾಗಿ ಈ ಗುಡ್ಡ ಅನೇಕ ಖನಿಜ ಸಂಪತ್ತನ್ನೊಳಗೊಂಡಿದೆ. ಈಗಾಗಲೇ ಈ ಗುಡ್ಡದೊಳಗೆ ಚಿನ್ನ ಮತ್ತು ಕಬ್ಬಿಣ ಇರುವುದು ಸ್ಪಷ್ಟವಾಗಿದ್ದಲ್ಲದೆ ಉತ್ಖನನ ಕೂಡ ನಡೆದಿದೆ. ಇನ್ನು ಮುಂದೆ ನಡೆಯುವ ಸಾಧ್ಯತೆಗಳನ್ನು ಅಲ್ಲಗಳೆಯುವಂತಿಲ್ಲ. ಇನ್ನು

ಏಷ್ಯಾಖಂಡದಲ್ಲಿ ಅತ್ಯಂತ ವೇಗವಾದ ಗಾಳಿ ಬೀಸುವ ದೈತ್ಯಶಕ್ತಿಯನ್ನು ಈ ಕಪ್ಪತ್ತಗುಡ್ಡ ಹೊಂದಿದೆ. ಇನ್ನು ಇದರ ಮಹತ್ವದ ಶಕ್ತಿ ಎಂದರೆ ಈ ಕಪ್ಪತ್ತಗುಡ್ಡದ ಒಡಲೊಳಗೆ ಹಲವಾರು ಕೆರೆಗಳಿದ್ದು ಮಳೆಯಾದಾಗ ಈ ಕೆರೆಗಳು, ಕೊಳ್ಳಗಳು ಮೈದುಂಬಿ ಇಡೀ ಕಪ್ಪತ್ತಗುಡ್ಡದ ಒಡಲು ಇಂಗಿಸಿ, ಇಡೀ ಪ್ರದೇಶವನ್ನು ತಂಪಾಗಿಸುವುದಲ್ಲದೆ ಸುತ್ತಮುತ್ತಲಿನ ಅಂತರ್‌ಜಲವನ್ನು ಹೆಚ್ಚಿಸುವ ತಾಕತ್ತು ಕೂಡ ಇದಕ್ಕಿದೆ.

**ಇಲ್ಲಿ ಗಾಳಿಯಂತ್ರಗಳದ್ದೇ ದರ್ಬಾರು !**

ಕಪ್ಪತ್ತಗುಡ್ಡದಲ್ಲಿ ಅತ್ಯಂತ ವೇಗವಾದ ಗಾಳಿ ಬೀಸುವುದರಿಂದ ಈ ಗಾಳಿ ಬಳಸಿಕೊಳ್ಳುವ ಚಿಂತನೆಯನ್ನು ಸರ್ಕಾರ ಎರಡು ದಶಕಗಳ ಹಿಂದೆ ಮಾಡಿದೆ. ನಂತರ ಇದರ ಲಾಭವನ್ನು ಖಾಸಗಿ ಕಂಪನಿಗಳ ಪಾಲಾಗುವಂತೆ ಅನುಕೂಲ ಮಾಡಿಕೊಡಲಾಗಿದೆ. ಇದರಿಂದ ಈ ಕಪ್ಪತ್ತಗುಡ್ಡದಲ್ಲಿ ಗಾಳಿ ಮೂಲಕ ವಿದ್ಯುತ್ ಸಂಗ್ರಹಿಸುವ 'ವಿಂಡಮಿಲ್' ಫ್ಯಾನುಗಳ ಹಾವಳಿ ಎದ್ದು ಕಾಣಿಸುತ್ತದೆ. ೧೯೯೬ರಲ್ಲಿ ಮುಖ್ಯಮಂತ್ರಿ ಜೆ. ಹೆಚ್. ಪಟೇಲರ ಆಡಳಿತದಲ್ಲಿ ಕರ್ನಾಟಕ ಪವರ್ ಕಾರ್ಪೊರೇಶನ್ ಮೂಲಕ ೨೦ ಗಾಳಿಫ್ಯಾನುಗಳನ್ನು ಸರ್ಕಾರ ಆರಂಭಿಸಿದೆ. ತದನಂತರ ಖಾಸಗಿ ಕಂಪನಿಗಳಾದ ಸುಜಲಾನ್, ಎನಾರ್ಕಾನ್, ಎಸ್‌ಪಿಎಂಎಲ್ ಕಂಪನಿಗಳಿಗೆ ೨೦೦೬ರವರೆಗೆ ಅನುಮತಿ ನೀಡಿದ್ದರಿಂದ ೨೨೦ ಫ್ಯಾನುಗಳು ತಲೆ ಎತ್ತಿವೆ. ಈ ಖಾಸಗಿ ಕಂಪನಿಗಳಿಗೆ ಕಪ್ಪತ್ತಗುಡ್ಡದ ಅಂತರಂಗದೊಳಗೆ ೩೨೪ ಹೆಕ್ಟರ್‌ನಷ್ಟು ಭೂಮಿಯನ್ನು ಕಾಗದ ಪತ್ರಗಳ ಪ್ರಕಾರ ನೀಡಲಾಗಿದೆ. ಆದರೆ, ವಾಸ್ತವವಾಗಿ ಬಳಕೆ ಮಾಡಿಕೊಂಡಿರುವ ವಿಸ್ತೀರ್ಣ ಬಹಳಷ್ಟಿದೆ. ಪ್ರಸ್ತುತ ಕಪ್ಪತ್ತಗುಡ್ಡದ ಸೆರಗಿನಲ್ಲಿ ತಲೆ ಎತ್ತಿರುವ ಗಾಳಿ ವಿದ್ಯುತ್ ಸಂಗ್ರಹದ ಫ್ಯಾನುಗಳ ಸಂಖ್ಯೆ ಸಾವಿರದ ಗಡಿ ದಾಟುತ್ತದೆ. ವಿಂಡಮಿಲ್‌ಗಳನ್ನು ಹಾಕಲು ಖಾಸಗಿ ಕಂಪನಿಗಳಿಗೆ ನೀಡಿರುವ ಕಪ್ಪತ್ತಗುಡ್ಡದ ಭವ್ಯ ಸಂಪತ್ತಿನ ಭೂಬಾಡಿಗೆ ತೀರಾ ಕಡಿಮೆ. ಒಂದು ಹೆಕ್ಟರ್ ಭೂಮಿಗೆ ಸರ್ಕಾರ ನಿಗದಿಪಡಿಸಿದ ಬಾಡಿಗೆ ೩೦ ವರ್ಷಗಳಿಗೆ ಕೇವಲ ೧,೦೭,೫೦೦ ರೂಪಾಯಿಗಳು. ಇನ್ನು ಈ ಭೂಮಿ ನೀಡಿದ್ದಕ್ಕಾಗಿ ಪರ್ಯಾಯ ಅರಣ್ಯ ಬೆಳೆಸಲು ಈ ಕಂಪನಿಗಳಿಂದ ಲಕ್ಷಾಂತರ ಹಣವನ್ನು ಸರ್ಕಾರ ಪಡೆಯುತ್ತದೆ. ಆದರೆ, ಈ ಪರ್ಯಾಯ ಅರಣ್ಯವನ್ನು ಬೇರೆ ಜಿಲ್ಲೆಗಳಲ್ಲಿ ಬೆಳೆಸಲಾಗುತ್ತಿದೆ. ಅಂದರೆ ಜಿಲ್ಲೆಯ ಸಂಪನ್ಮೂಲವನ್ನು ಪರಜಿಲ್ಲೆಗಳಿಗೆ ಹಂಚುವ ಸಂಸ್ಕೃತಿಯನ್ನು ಸರ್ಕಾರವೇ ಹೇಳಿಕೊಡುತ್ತಿದೆ.

ಇದರೊಂದಿಗೆ ಗಾಳಿ ವಿದ್ಯುತ್ ಫ್ಯಾನುಗಳು ಉತ್ಪಾದಿಸುವ ವಿದ್ಯುತ್‌ನ ಕಥೆ ಇನ್ನು ವಿಭಿನ್ನ. ಇಲ್ಲಿಯೇ ಉತ್ಪಾದನೆಯಾಗುವ ವಿದ್ಯುತ್ ಕಡಿಮೆ ದರದಲ್ಲಿ ಸಿಗುವುದು ದೂರದ ಮಾತು. ತವರು ಜಿಲ್ಲೆಗೆ ಸಿಗುವುದೂ ಸಾಧ್ಯವೇ ಇಲ್ಲ. ೨೦೦೬ರಿಂದ ಕಪ್ಪತ್ತಗುಡ್ಡದಲ್ಲಿ ಫ್ಯಾನುಗಳಿಗೆ ನೀಡುತ್ತಿದ್ದ ಪರವಾನಿಗೆಯನ್ನು ನಿಲ್ಲಿಸಲಾಗಿದೆ ಅನ್ನೋದು ಮಾತ್ರ ಸಮಾಧಾನದ ಸಂಗತಿ. ಇನ್ನು ದುರಂತದ ಸಂಗತಿ ಎಂದರೆ ಸರ್ಕಾರದ ಗಾಳಿಯಂತ್ರಗಳು ಕೋಟ್ಯಂತರ ರೂಪಾಯಿಗಳನ್ನು ಖರ್ಚುಮಾಡಿಸಿಕೊಂಡು ವಿದ್ಯುತ್ ಉತ್ಪಾದನೆ ಮಾಡದೆ ಕೆಟ್ಟು ನಿಂತಿವೆ. ಆದರೆ, ಅಕ್ಕ-ಪಕ್ಕದಲ್ಲಿರುವ ಖಾಸಗಿ ವಿದ್ಯುತ್ ಫ್ಯಾನುಗಳು ಕೋಟ್ಯಂತರ ರೂಪಾಯಿಗಳ ವಿದ್ಯುತ್ ಉತ್ಪಾದನೆ ಮಾಡುವ ಮೂಲಕ ಸರ್ಕಾರದ ನಿರ್ಲಕ್ಷ್ಯಕ್ಕೆ ಕನ್ನಡಿ ಹಿಡಿದಿವೆ.



**ಸಂಪತ್ತು ಕೊಳ್ಳೆಹೊಡೆಯಲು ತುದಿಗಾಲಲ್ಲಿ !**

ಕಪ್ಪತ್ತಗುಡ್ಡದ ಒಡಲೊಳಗಿರುವ ಅನೇಕ ರೀತಿಯ ಖನಿಜ ಸಂಪತ್ತುಗಳನ್ನು ಕೊಳ್ಳೆ ಹೊಡೆಯಲು ಅನೇಕ ಕಂಪನಿಗಳು ಸದಾ ಯತ್ನಿಸುತ್ತಿವೆ. ಜೊತೆಗೆ ಅವಕಾಶಕ್ಕಾಗಿ ಏನೆಲ್ಲ ಮಾಡಬಹುದು ಎಂಬ ಲೆಕ್ಕಾಚಾರವನ್ನು ನಿರಂತರ ನಡೆಸಿವೆ. ಈ ಹಿಂದೆ ಇಲ್ಲಿ ಸರ್ಕಾರದಿಂದಲೇ (ಬ್ರಿಟಿಷ್ ಆಡಳಿತದಲ್ಲಿ) ಬಂಗಾರದ ನಿಕ್ಷೇಪವನ್ನು ಗುರುತಿಸಿ ಶೋಧಿಸಿದ್ದು ಇದೆ. ಇದರ ಜೊತೆಗೆ ರಾಜ್ಯ ಸರ್ಕಾರವು ಕಬ್ಬಿಣದ ಅದಿರು ತೆಗೆಯಲು ಒಂದು ಕಂಪನಿಗೆ ಅವಕಾಶ ನೀಡಿ ಮತ್ತೆ ನಿಲ್ಲಿಸಲಾಗಿದೆ. ಸುತ್ತಲಿನ ಪರಿಸರ ಪ್ರೇಮಿಗಳು ಮತ್ತು ಡಾ॥ ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳು ಈ ಕಪ್ಪತ್ತಗುಡ್ಡದ ಬಗ್ಗೆ ಸದಾ ಎಚ್ಚರಿಕೆ ನೀಡುತ್ತಿರುವುದರಿಂದ ಸರ್ಕಾರ ಕೂಡ ಎಚ್ಚರಿಕೆಯಿಂದ ಕೆಲಸ ಮಾಡುತ್ತಿರುವಂತೆ ನಟಿಸುತ್ತಿದೆ. ನೇರವಾಗಿ ಈ ಕಪ್ಪತ್ತಗುಡ್ಡಕ್ಕೆ ಕೈಹಾಕಲು ಸಾಧ್ಯವಾಗದಿದ್ದರೂ ಈ ಕಪ್ಪತ್ತಗುಡ್ಡದ ಸೆರಗಿಗೆ ಮಾತ್ರ ಸರ್ಕಾರ ಅವಕಾಶ ಕೊಟ್ಟಿದೆ. ಇದರಿಂದ ಬಲ್ಡೋಟ ಕಂಪನಿಗೆ ಬಂಗಾರದ ಗಣಿಗಾರಿಕೆಗೆ ಅವಕಾಶ ನೀಡಿದೆ. ಆದರೆ ರೈತರ ವಿರೋಧದಿಂದ ಆರಂಭವಾದ ಕೆಲಸ ನಿಂತಿದ್ದು, ಇದು ತಾತ್ಕಾಲಿಕ ತಡೆ ಮಾತ್ರವಾಗಿದೆ.

ಈ ಗುಡ್ಡದಲ್ಲಿ ಏನಾದರೂ ಮಾಡಿ ಗಣಿಗಾರಿಕೆ ಆರಂಭಿಸಬೇಕು ಎನ್ನುವ ಸಾಹಸ ಮಾತ್ರ ಮುಂದುವರಿದಿದೆ. ಈ ಕಪ್ಪತ್ತಗುಡ್ಡದಲ್ಲಿ ಎಷ್ಟು ಮಹತ್ವದ ಖನಿಜಾಂಶಗಳಿವೆ ಅನ್ನೋದಕ್ಕೆ ಗುಡ್ಡದ ಸೆರಗಿನಲ್ಲಿರುವ ಕೃಷಿ ಜಮೀನುಗಳಲ್ಲಿ ಸಿಗುವ ಕಲ್ಲುಗಳನ್ನು ಸಂಗ್ರಹಿಸಿ ಮಾರಾಟ ಮಾಡಿ ಲಕ್ಷಾಂತರ ರೂಪಾಯಿ ಗಳಿಸಿರುವ ಸಂಗತಿಗಳು ಇನ್ನೂ ಹಚ್ಚಹಸಿರಾಗಿವೆ. ಜೋರಾಗಿ ಮಳೆಯಾದ ಮಾರನೇ ದಿನ ಬಂಗಾರವನ್ನು ಅರಸಿ ಹೋಗುವ ರೂಢಿ ಈಗಲೂ ಸುತ್ತಲಿನ ಹಳ್ಳಿಗರಲ್ಲಿದೆ.

**ಕಪ್ಪತ್ತಮಲ್ಲಯ್ಯ ಮತ್ತು ಮೂಢನಂಬಿಕೆಗಳು !**

ಕಪ್ಪತ್ತಗುಡ್ಡದ ಒಡೆಯ ಕಪ್ಪತ್ತಮಲ್ಲಯ್ಯ. ಈ ಕಪ್ಪತ್ತಮಲ್ಲಯ್ಯನ ದೇವಸ್ಥಾನದೊಂದಿಗೆ ಈ ಕಪ್ಪತ್ತಗುಡ್ಡದ ಒಡಲೊಳಗೆ ಹಲವಾರು ದೇವರುಗಳು ಹುದುಗಿವೆ. ಇವುಗಳಲ್ಲಿ ಕಪ್ಪತ್ತಮಲ್ಲಯ್ಯನೊಂದಿಗೆ ಹೆಚ್ಚು ಪ್ರಚಾರಕ್ಕೆ ಬಂದಿರುವ ದೇವರು ಗಾಳಿಗುಂಡಿ ಬಸವಣ್ಣ. ಏಷ್ಯಾಖಂಡದಲ್ಲಿಯೇ ವೇಗವಾಗಿ ಗಾಳಿ ಬೀಸುವುದು ಈ ಗಾಳಿಗುಂಡಿ ಬಸವಣ್ಣನ ಪ್ರದೇಶದಲ್ಲಿ. ಪ್ರತಿವರ್ಷ ಶ್ರಾವಣ ಮಾಸದಲ್ಲಿ ಕಪ್ಪತ್ತಮಲ್ಲಯ್ಯನ ಜಾತ್ರೆಯಾಗುತ್ತದೆ. ಈ ಸಂದರ್ಭದಲ್ಲಿ ಇಡೀ ಕಪ್ಪತ್ತಗುಡ್ಡದ ತುಂಬ ಜನರ ದಂಡು ಕಾಣಿಸುತ್ತದೆ. ಗುಡ್ಡದ ಒಂದು ಕೆಳಭಾಗದಲ್ಲಿ ಕಪ್ಪತ್ತಮಲ್ಲಯ್ಯ ನೆಲೆಯಾಗಿದ್ದರೆ ಒಂದು ಗುಡ್ಡದ ತುತ್ತತುದಿಯಲ್ಲಿ ಗಾಳಿಗುಂಡಿ ಬಸವಣ್ಣ ನೆಲೆಸಿದ್ದಾನೆ. ಈ ಗಾಳಿಗುಂಡಿ ಬಸವಣ್ಣನ ಸ್ಥಳದಲ್ಲಿ ಕಲ್ಲಿನ ಬಸವಣ್ಣನ ವಿಗ್ರಹವಿದ್ದು ಪೇರಲ ಹಣ್ಣುಗಳನ್ನು ಈ ವಿಗ್ರಹಕ್ಕೆ ತಿಕ್ಕುವುದರಿಂದ ಇಷ್ಟಾರ್ಥಗಳು ಈಡೇರುತ್ತವೆ ಎಂಬ ಮೂಢನಂಬಿಕೆ ಇತ್ತೀಚಿನ ವರ್ಷಗಳಲ್ಲಿ ಹೆಚ್ಚಾಗಿದೆ. ಹೀಗಾಗಿ ಜಾತ್ರೆಯಲ್ಲಿ ಈ ಬಸವಣ್ಣನ ಬಳಿ ದೊಡ್ಡಸಂಖ್ಯೆಯಲ್ಲಿ ಜನರು ಸೇರುತ್ತಾರೆ. ಈ ಜನರ ಮೂಢನಂಬಿಕೆಯಿಂದ ಪೇರಲ ಹಣ್ಣುಗಳ ಮಾರಾಟಗಾರರಿಗೆ ಕಪ್ಪತ್ತಮಲ್ಲಯ್ಯನ ಜಾತ್ರೆ ಹೆಚ್ಚು ಲಾಭದಾಯಕವಾಗಿದೆ.

ಕಪ್ಪತ್ತಮಲ್ಲಯ್ಯ, ಗಾಳಿಗುಂಡಿ ಬಸವಣ್ಣ ಸೇರಿದಂತೆ ವಿವಿಧ ದೇವರುಗಳಿಗೆ ಅಲೆಯುವ ಭಕ್ತಸಮೂಹ ಗುಡ್ಡದಲ್ಲಿ ಸಿಗುವ ಎಲ್ಲ ತಪ್ಪಲು, ಗಿಡಗಂಟಿಗಳನ್ನು ಹರಿದುಕೊಂಡು ಚೀಲಗಳಿಗೆ ತುಂಬಿಕೊಳ್ಳುತ್ತಲೆ, ಒಂದೊಂದು ಮರದ ಕೊಂಬಿನ ಕೋಲುಗಳನ್ನು ಕೈಯಲ್ಲಿ ಹಿಡಿದುಕೊಂಡು ಹೋಗುತ್ತದೆ. ಹೀಗೆ ಹರಿದುಕೊಂಡು ಹೋದ ಸೊಪ್ಪುಗಳನ್ನು ಬೆಂಕಿಯಲ್ಲಿ ಹಾಕಿ ಧೂಪ ಹಾಕುವುದರಿಂದ ಜನ-ಜಾನುವಾರುಗಳಿಗೆ ಒಳ್ಳೆಯದಾಗುತ್ತದೆ ಎಂಬ ನಂಬಿಕೆ ಹಲವು ತಲೆಮಾರುಗಳಿಂದ ಮುಂದುವರಿದಿದೆ. ಇದರಿಂದ ಜಾನುವಾರುಗಳ ಕೊಟ್ಟಿಗೆ ಸೇರಿದಂತೆ ಮನೆಯಲ್ಲಿ ವಿಷಜಂತು ಹುಳುಗಳು ಮತ್ತು ಕೀಟಗಳು ದೂರವಾಗುತ್ತವೆ ಎಂಬ ನಂಬಿಕೆ ದಟ್ಟವಾಗಿದೆ. ಹೀಗಾಗಿ ಜಾತ್ರೆಗೆ ಬರುವ ಪ್ರತಿಯೊಬ್ಬರು ಕಪ್ಪತ್ತಮಲ್ಲಯ್ಯನ ಗುಡ್ಡದಲ್ಲಿ ಬೆಳೆದ ಗಿಡಗಳ ಮೇಲೆ ಕೈಯಾಡಿಸಿ ಅವುಗಳನ್ನು ಬತ್ತಲೆಗೊಳಿಸುವ ಪರಂಪರೆ ಇಂದಿಗೂ ಮುಂದುವರಿದಿದೆ.

ಇದೆಲ್ಲಕ್ಕಿಂತ ಆಘಾತಕಾರಿಯಾದ ಮೂಢನಂಬಿಕೆಯೊಂದು ಈ ಭಾಗದ ಜನರಲ್ಲಿ ಅತ್ಯಂತ ಆಳವಾಗಿ ಉಳಿದಿದೆ. ಅದೇನೆಂದರೆ ಕಪ್ಪತ್ತಗುಡ್ಡಕ್ಕೆ ಬೆಂಕಿ ಹಾಕುವ ನಂಬಿಕೆ. ಗುಡ್ಡ ಒಣಗಿದ ಸಂದರ್ಭದಲ್ಲಿ ಬೆಂಕಿ ಹಚ್ಚಿದರೆ ಉರಿದು ಅತ್ಯಂತ ಫಲವತ್ತಾಗಿ, ಹುಲುಸಾಗಿ ಬೆಳೆಯುತ್ತದೆ ಎಂಬ ಮೂಢನಂಬಿಕೆ ಜನರಲ್ಲಿ ಇರುವುದರಿಂದ

ಈ ಗುಡ್ಡಕ್ಕೆ ಬೇಸಿಗೆ ಕಾಲದಲ್ಲಿ ಬೆಂಕಿ ಬೀಳುವುದು ಸಾಮಾನ್ಯ ಎನ್ನುವಂತಾಗಿದೆ. ಈ ರೀತಿ ಬೆಂಕಿ ಬೀಳುವುದರಿಂದ ಇದರೊಳಗೆ ಅವಿತುಕೊಂಡಿರುವ ನೂರಾರು ಪ್ರಾಣಿ, ಪಕ್ಷಿ ಸಂಕುಲಗಳು ಅನುಭವಿಸುವ ಯಾತನೆ ಮಾತ್ರ ಈ ಜನರಿಗೆ ಇಂದಿಗೂ ಅರ್ಥವಾಗುತ್ತಿಲ್ಲ. ಈ ಬೆಂಕಿಯನ್ನು ಸಂಪೂರ್ಣ ನಿಲ್ಲಿಸುವ ಸಾಮರ್ಥ್ಯ ಕೂಡ ಸಂಬಂಧಿಸಿದ ಅರಣ್ಯ ಇಲಾಖೆಗೆ ಇಲ್ಲ.

**ಸರ್ಕಾರದ ಜಾಣ ಕುರುಡು**

೩೩ ಸಾವಿರ ಹೆಕ್ಟರ್ ಪ್ರದೇಶದಲ್ಲಿರುವ ಈ ಕಪ್ಪತ್ತಗುಡ್ಡಕ್ಕೆ ಅರಣ್ಯ ಇಲಾಖೆಯ ಗದಗ, ಮುಂಡರಗಿ ಹಾಗೂ ಶಿರಹಟ್ಟಿ ಮೂರು ತಾಲೂಕುಗಳ ಅರಣ್ಯವಲಯ ಕಛೇರಿಗಳಿವೆ. ಈ ಮೂರು ಅರಣ್ಯ ವಲಯಗಳು ಸೇರಿ ಈ ಬೃಹತ್ ಕಪ್ಪತ್ತಗುಡ್ಡದ ರಕ್ಷಣೆಗಾಗಿ ಇರುವ ಸಿಬ್ಬಂದಿ ಹತ್ತರ ಸಂಖ್ಯೆ ದಾಟಿ ಶತಸಂಖ್ಯೆ ಮುಟ್ಟುವುದಂತೂ ಸಾಧ್ಯವೇ ಇಲ್ಲ. ಹೀಗಿರುವಾಗ ಈ ಬೃಹತ್ ಕಪ್ಪತ್ತಗುಡ್ಡದ ರಕ್ಷಣೆ ಯಾವ ಅಳತೆಗೋಲಿನಿಂದಲೂ ಸಾಧ್ಯವಿಲ್ಲ. ಕಪ್ಪತ್ತಗುಡ್ಡದ ಕೆಲವು ಕಡೆ ಮನುಷ್ಯಜಾತಿ ಸುಳಿಯಲು ಸಾಧ್ಯವೆ ಇಲ್ಲದಂತೆ ಪರಿಸರದ ಸೃಷ್ಟಿಯಿದೆ. ಇಂತಹ ಕಪ್ಪತ್ತಗುಡ್ಡದ ಬೆಳವಣಿಗೆಗಾಗಿ ಈ ಹಿಂದೆ ಸಾಗರೋತ್ತರ ಸಂಸ್ಥೆಗಳಿಂದ ಬಂದ ನೂರಾರು ಕೋಟಿ ರೂಪಾಯಿಗಳ ಅನುದಾನವನ್ನು ಅರಣ್ಯ ಇಲಾಖೆ ಖರ್ಚು ಮಾಡಿರುವ ದಾಖಲೆಗಳಿವೆ. ಈಗಲೂ ಸರ್ಕಾರ ಇದಕ್ಕಾಗಿ ಪ್ರತಿವರ್ಷ ಕೋಟ್ಯಂತರ ರೂಪಾಯಿ ಖರ್ಚು ಮಾಡುತ್ತಿದೆ. ಆದರೆ, ಕೆಲವು ಹಿರಿಯರು ಹೇಳುವ ಪ್ರಕಾರ ಕಪ್ಪತ್ತಗುಡ್ಡ ತನ್ನಿಂದ ತಾನೆ ಬೆಳೆಯುತ್ತದೆ ಹೊರತು ಇಲ್ಲಿ ಮನುಷ್ಯನಿಂದ ಯಾವ ಬೆಳವಣಿಗೆ ಸಾಧ್ಯವಿಲ್ಲ ಅನ್ನೋ ಮಾತು ಕೂಡ ಇದೆ. ಇದು ಒಂದು ನೋಟದಲ್ಲಿ ಸತ್ಯವೂ ಕೂಡ ಆಗಿರಬಹುದಾಗಿದೆ. ಏಕೆಂದರೆ, ನೈಸರ್ಗಿಕವಾಗಿಯೇ ಇಷ್ಟು ಬೃಹತ್ ಆಗಿರುವ ಇಲ್ಲಿ ಅರಣ್ಯ ಇಲಾಖೆ ಪ್ರತಿವರ್ಷ ಪಟ್ಟಿರುವ ಶ್ರಮದಿಂದ ಈ ಕಪ್ಪತ್ತಗುಡ್ಡ ಇನ್ನು ಹೇಗೆಲ್ಲ ಇರಬಹುದಿತ್ತು ಅನ್ನೊ ಪ್ರಶ್ನೆ ಎದುರಾಗಿ ಅನುಮಾನ ಮುಂದುವರಿಯುತ್ತದೆ. ಈ ಬಗ್ಗೆ ಕೂಡ ವೈಜ್ಞಾನಿಕವಾದ ಸಂಶೋಧನೆಗಳು ನಡೆಯಬೇಕಿದೆ.

ಈ ಗುಡ್ಡದಲ್ಲಿ ಸಾಕಷ್ಟು ಔಷಧೀಯ ಸಸ್ಯಗಳು ಇವೆ. ಬೆಂಗಳೂರಿನ ರಾಷ್ಟ್ರೀಯ ಆಯುರ್ವೇದ ಸಂಶೋಧನಾ ಸಂಸ್ಥೆ ೨೦೧೩-೧೪ರಲ್ಲಿ ಸಮೀಕ್ಷೆ ನಡೆಸಿ ಕಪ್ಪತ್ತಗುಡ್ಡದಲ್ಲಿ ೪೨೩ ಔಷಧ ಸಸ್ಯಗಳನ್ನು ಗುರುತಿಸಿದೆ. ಇದಲ್ಲದೆ ಅರಣ್ಯ ಇಲಾಖೆಯ ಶಿರಹಟ್ಟಿ ವಲಯದಿಂದ ಕೂಡ ಔಷಧೀಯ ವನವನ್ನು ನಿರ್ಮಾಣ ಮಾಡಿದ್ದು, ಇದು ಕೂಡ ನಿರ್ವಹಣೆ ಇಲ್ಲದೆ ಸೊರಗಿದೆ.

**ನರಳುತ್ತಿರುವ ಕಪ್ಪತ್ತಗುಡ್ಡ !**

ಕಪ್ಪತ್ತಗುಡ್ಡದ ಒಡಲೊಳಗೆ ಹಲವಾರು ಕೆರೆಗಳು, ಕೊಳ್ಳಗಳು ಇವೆ. ಇವೆಲ್ಲವುಗಳು ಕಪ್ಪತ್ತಗುಡ್ಡದ ಜೀವನಾಡಿಗಳು. ಇಲ್ಲಿನ ಉಸುಕಿನಕೊಳ್ಳ, ಬೆಣ್ಣೆಕೊಳ್ಳ, ಉಪ್ಪಿನಕೊಳ್ಳ ಇತ್ಯಾದಿ ಕೊಳ್ಳಗಳ ಹೆಸರುಗಳು ರೋಮಾಂಚನಗೊಳಿಸುವಂಥವು. ಇವುಗಳ ಮೇಲೆ ನಿರಂತರ ದಾಳಿ ನಡೆದಿದೆ. ಇನ್ನು ಇಲ್ಲಿನ ಸಸ್ಯ ಸಂಕುಲದ ಮೇಲೆ ನಿತ್ಯವೂ ಅತ್ಯಾಚಾರ ನಡೆಯುತ್ತಿದೆ. ಇದರಿಂದ ಕಪ್ಪತ್ತಗುಡ್ಡ ನಲುಗುತ್ತಿದೆ.

**ವನ್ಯಧಾಮವು ಇಲ್ಲ, ಸಂರಕ್ಷಿತವೂ ಇಲ್ಲ !**

ಈ ಕಪ್ಪತ್ತಗುಡ್ಡದ ವಿಷಯದಲ್ಲಿ ಸರ್ಕಾರ ಸೂಕ್ತ ನಿರ್ಧಾರ ತೆಗೆದುಕೊಳ್ಳುತ್ತಿಲ್ಲ ಅನ್ನೋದು ಈಗಾಗಲೇ ಸ್ಪಷ್ಟವಾಗಿದೆ. ಜೊತೆಗೆ ಈ ಗುಡ್ಡದ ವ್ಯಾಪ್ತಿಯಲ್ಲಿ ಶಿರಹಟ್ಟಿ, ಮುಂಡರಗಿ ಮತ್ತು ಗದಗ ತಾಲೂಕಿನ ೩೩ ಗ್ರಾಮಗಳಿದ್ದು, ಈ ಗ್ರಾಮೀಣ ಜನರಲ್ಲಿ ಕೂಡ ಒಡೆದು ಆಳುವ ನೀತಿಯನ್ನು ಅನೇಕರು ಮಾಡುತ್ತಿದ್ದಾರೆ. ಈ ಗುಡ್ಡದ ಸಂಪತ್ತಿನ ಮೇಲೆ ಕಣ್ಣು ನೆಟ್ಟಿರುವ ಅನೇಕರು ಸರ್ಕಾರದ ಕಣ್ಣಿಗೆ ಮಣ್ಣೆರಚುವ ಕೆಲಸ ಮುಂದುವರಿಸಿದ್ದಾರೆ. ಹೀಗಾಗಿ ಸರ್ಕಾರ ತಾನು ಕೈಗೊಂಡ ತೀರ್ಮಾನಗಳನ್ನೆ ಹಿಂದಕ್ಕೆ ಪಡೆಯುತ್ತಿದೆ.

ಕಪ್ಪತ್ತಗುಡ್ಡದಲ್ಲಿ ಅರಣ್ಯ ಇಲಾಖೆ ನಡೆಸಿದ ಪ್ರಾಣಿ, ಪಕ್ಷಿಗಳ ಗಣತಿ ಪ್ರಕಾರ ಇದನ್ನು ವನ್ಯಧಾಮವನ್ನಾಗಿಸುವ ನಿಟ್ಟಿನಲ್ಲಿ ರಾಷ್ಟ್ರೀಯ ವನ್ಯಜೀವಿ ಮಂಡಳಿಯ ಉಪಾಧ್ಯಕ್ಷ ಖ್ಯಾತ ಕ್ರಿಕೇಟಿಗ ಅನಿಲ ಕುಂಬ್ಳೆ ವಿಶೇಷ ಸಭೆ ನಡೆಸಿ ಮಾಹಿತಿ ಸಂಗ್ರಹಿಸಿದ್ದರು. ಈ ಸಭೆಯಲ್ಲಿ ಗೊಂದಲ ಮೂಡಿದ್ದರಿಂದ ಮತ್ತು ಸರ್ಕಾರದ ಇಬ್ಬಗೆಯ ನೀತಿಯಿಂದ ಈ ವನ್ಯಧಾಮ ಪ್ರಸ್ತಾಪ ಕೂಡ ಕೈಬಿಡಲಾಯಿತು.

ಇನ್ನು ಕಳೆದ ಡಿಸೆಂಬರ್‌ನಲ್ಲಿ ರಾಜ್ಯ ಸರ್ಕಾರವು ಮುಂಡರಗಿ, ಶಿರಹಟ್ಟಿ ಮತ್ತು ಗದಗ ತಾಲೂಕಿನಲ್ಲಿರುವ ೧೭೮೭೨.೨೪ ಹೆಕ್ಟರ್ ಪ್ರದೇಶದ ಕಪ್ಪತ್ತಗುಡ್ಡವನ್ನು 'ಸಂರಕ್ಷಿತ ಪ್ರದೇಶ'ವನ್ನಾಗಿ ಸರ್ಕಾರ ಆದೇಶ ಹೊರಡಿಸಿತ್ತು. ಈ ಆದೇಶದಿಂದ ಈ ಭಾಗದ ಪರಿಸರ ಪ್ರಿಯರು ಸಾಕಷ್ಟು ಖುಷಿ ಅನುಭವಿಸಿದ್ದರು. ಆದರೆ, ಸರ್ಕಾರ ತನ್ನ ನಿರ್ಧಾರವನ್ನು ಹಿಂದಕ್ಕೆ ಪಡೆದಿದೆ. ಇದಕ್ಕೆ ನೀಡಿರುವ ಕಾರಣ, "ಸಂರಕ್ಷಿತ ಪ್ರದೇಶ ಎಂದು ಘೋಷಣೆ ಮಾಡುವುದಕ್ಕಿಂತ ಪೂರ್ವದಲ್ಲಿ ಸ್ಥಳೀಯರ ಅಹವಾಲು ಕೇಳಿಲ್ಲ ಮತ್ತು ರಾಷ್ಟ್ರೀಯ ಉದ್ಯಾನ ಇದರ ಪಕ್ಕದಲ್ಲಿ ಇಲ್ಲ." ಈ ಕಾರಣ ಸರ್ಕಾರದ ನಿರ್ಲಕ್ಷ್ಯದ ಒಳಸುಳಿಯನ್ನು ಎತ್ತಿ ತೋರುತ್ತದೆ. ಸಂರಕ್ಷಿತ ಸ್ಥಾನಮಾನವನ್ನು ಹಿಂದಕ್ಕೆ ಪಡೆಯದಂತೆ ಈಚೆಗೆ ಜಿಲ್ಲೆಗೆ ಆಗಮಿಸಿದ ಮುಖ್ಯಮಂತ್ರಿ ಸಿದ್ದರಾಮಯ್ಯನವರಿಗೆ ಡಾ॥ ತೋಂಟದ ಸಿದ್ಧಲಿಂಗ ಸ್ವಾಮೀಜಿಗಳು ಮನವರಿಕೆ ಮಾಡಿಕೊಟ್ಟಿದ್ದಾರೆ. ಜೊತೆಗೆ ಜಿಲ್ಲೆಯ ಅನೇಕರು ಈ ಕುರಿತು ಸರ್ಕಾರಕ್ಕೆ ಮನವಿ ಮಾಡಿದ್ದಾರೆ. ಈ ಬಗ್ಗೆ ಸರ್ಕಾರ ಏನು ಕ್ರಮ ಕೈಗೊಳ್ಳಲಿದೆ ಕಾದು ನೋಡಬೇಕಿದೆ.

ವನ್ಯಜೀವಿಧಾಮ, ಸಂರಕ್ಷಿತ ಪ್ರದೇಶ ಎರಡು ಸಿಗದೇ ಇರುವುದರ ಪಾಲಿಗೆ ಈಗ ಮೂರನೇ ಮಹತ್ವದ ಅಂಶವೊಂದು ಸೇರ್ಪಡೆಯಾಗುವ ಸಾಧ್ಯತೆ ಇದೆ. ಅದೇನೆಂದರೆ ಔಷಧ ಸಸ್ಯ ಸಂರಕ್ಷಣಾ ಘಟಕ. ರಾಜ್ಯ ಅರಣ್ಯ ಕೈಗಾರಿಕೆ ನಿಗಮದ ಅಧ್ಯಕ್ಷರಾಗಿದ್ದ ಟಿ. ಈಶ್ವರ ಅವರ ವಿಶೇಷ ಕಾಳಜಿಯಿಂದ ಕಪ್ಪತ್ತಗುಡ್ಡದಲ್ಲಿನ ಔಷಧಿ ಸಸ್ಯಗಳ ಬಗ್ಗೆ ಸಮೀಕ್ಷೆ ನಡೆಸಿತ್ತು. ನಂತರ ಇಲ್ಲಿ ಔಷಧಿ ಸಸ್ಯ ಸಂರಕ್ಷಣೆ ಘಟಕ ಸ್ಥಾಪನೆಯಿಂದ ಸೃಷ್ಟಿಯಾಗುವ ಉದ್ಯೋಗಾವಕಾಶ ಮತ್ತು ಆಯುರ್ವೇದ ಔಷಧ ಉತ್ಪನ್ನಗಳ ರಫ್ತು ಆದ್ಯತೆಗಳ ಕುರಿತು ಸರ್ಕಾರಕ್ಕೆ ವರದಿ ಸಲ್ಲಿಸಿತ್ತು. ಆದರೆ, ಸರ್ಕಾರ ಸಂರಕ್ಷಿತ ಪ್ರದೇಶದ ಆದೇಶವನ್ನು ಹಿಂದಕ್ಕೆ ಪಡೆದಿರುವುದರಿಂದ ಈ ಘಟಕ ಕೂಡ ಸ್ಥಾಪನೆಯಾಗುವುದು ಅನುಮಾನ ಮೂಡಿಸಿದೆ.

ಸರ್ಕಾರದ ಎಲ್ಲ ನಿಲುವುಗಳಲ್ಲಿ ಗೊಂದಲಗಳಿವೆ. ಈಗಾಗಲೇ ೨೨೦ ಫ್ಯಾನುಗಳಿಗೆ ಅಲ್ಲಿ ಅವಕಾಶ ನೀಡಿದ್ದು, ಅವುಗಳು ಅಲ್ಲಿ ಕಾರ್ಯನಿರ್ವಹಿಸುತ್ತಿರುವ ಸಂದರ್ಭದಲ್ಲಿ ಸಂರಕ್ಷಿತ ಅರಣ್ಯ ಪ್ರದೇಶ ಎಂದು ಘೋಷಣೆ ಹೇಗೆ ಸಾಧ್ಯ ? ಇವುಗಳ ಬಾಡಿಗೆ ಅವಧಿ ೨೦೩೬ಕ್ಕೆ ಕೊನೆಯಾಗಲಿದೆ. ಇನ್ನು ಸುತ್ತಮುತ್ತಲಿನ ಜನರಲ್ಲಿ ಕೆಲವರಿಗೆ ಇದು ಕಾಮಧೇನು, ಇನ್ನು ಕೆಲವರಿಗೆ ಅವಿನಾಭಾವ ಸಂಬಂಧದ ತಾಣ. ಇದರಿಂದ ವನ್ಯಜೀವಿಧಾಮದ ಸಾಧ್ಯತೆ ಹೇಗೆ ಸಾಧ್ಯ ? ಆದರೆ, ಸರ್ಕಾರ ಕಠಿಣವಾದ ನಿರ್ಣಯ ಕೈಗೊಂಡರೆ ಎಲ್ಲವೂ ಸಾಧ್ಯ. ಇಂತಹ ದಿಟ್ಟ ನಿರ್ಧಾರ ಕೈಗೊಳ್ಳುವ ಪರಿಸರ ಪ್ರೀತಿ ಈ ಸರ್ಕಾರಗಳಿಗೆ ಬಂದಾಗ ಮಾತ್ರ ಈ ಕಪ್ಪತ್ತಗುಡ್ಡ ಉಳಿಯಲು ಸಾಧ್ಯ. ಪರಿಸರ ನೀಡಿದ ವರವಾಗಿರುವ ಈ ಕಪ್ಪತ್ತಗುಡ್ಡ ನಮ್ಮ ಮುಂದಿನ ಪೀಳಿಗೆಗೆ ನೋಡಲು ಸಿಗಲಿ ಹೊರತು, ಅದರ ಫೋಟೋಗಳನ್ನು ತೋರಿಸಿ ಇದು ನಮ್ಮ ಕಪ್ಪತ್ತಗುಡ್ಡ ಅನ್ನುವಂತೆ ಆಗದಿರಲಿ ಎಂಬುದು ನೆಲದ ಕಳಕಳಿ ಇದ್ದವರ ಅಳಲು. ಈ ಕಳಕಳಿ ಸರ್ಕಾರಕ್ಕೆ ಬರುವಂತಾಗಲಿ.



**ಎಂ. ಮಂಜುನಾಥ ಬಮ್ಮನಕಟ್ಟಿ**
ಪತ್ರಕರ್ತ, ಕಿತ್ತೂರು ಚನ್ನಮ್ಮ ರಸ್ತೆ
ಗದಗ – ೫೮೨ ೧೦೧

**ಅಭಿನಂದನೆಗಳು ............**

ಜನಪರ ಚಿಂತಕರೂ ಕವಿಗಳೂ 'ಹೊಸತು' ಲೇಖಕ ಬಳಗದವರಾದ ಶ್ರೀ ಎಸ್. ಜಿ. ಸಿದ್ಧರಾಮಯ್ಯನವರು ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರಾಗಿ ನೇಮಕಗೊಂಡಿದ್ದಾರೆ. ಅವರಿಗೆ 'ನವಕರ್ನಾಟಕ' ಹಾಗೂ 'ಹೊಸತು' ಬಳಗದ ಅಭಿನಂದನೆಗಳು.

# ಕ್ಷ–ಕಿರಣ

– ಸಾನ್ವಿ ಪಿ.


ಅವರನ್ನು ರಕ್ಷಣೆ ಮಾಡಿ ನಮ್ಮನ್ನು ಮಾತ್ರ ಓಡಿಸುತ್ತಿದ್ದೀರಿ
₹1000
₹500


ಭಕ್ತರು ನಮ್ಮ ಹುಂಡಿಗಳಲ್ಲಿ ಕಪ್ಪು ಹಣ ಹಾಕಿ ನಮ್ಮ ಮುಖಕ್ಕೆ ಮಸಿ ಬಳಿದಿದ್ದಾರೆ.


ಛೆ.. ಇದು ಮೊದಲೇ ಗೊತ್ತಾಗಲಿಲ್ಲ ಭವಿಷ್ಯ ಹೇಳಿ ಕೂಡಿಟ್ಟ ಕಪ್ಪು ಹಣವನ್ನು ಏನ್ಮಾಡ್ಲಿ

# ನೋಟು ರದ್ದತಿ : ನಿರ್ದಿಷ್ಟ ದಾಳಿಯೋ ಅಥವಾ ಗುಂಡುಪಿನ್ ಚುಚ್ಚುವಿಕೆಯೋ ?

ಇತ್ತೀಚಿನ ದಿನಗಳಲ್ಲಿ "ಸರ್ಜಿಕಲ್ ಸ್ಟ್ರೈಕ್" ಅಥವಾ "ನಿರ್ದಿಷ್ಟ ದಾಳಿ" ಎಂಬ ಪದಪುಂಜ ಹೆಚ್ಚಾಗಿ ಬಳಸಲ್ಪಡುತ್ತಿದೆ. ಮಿಲಿಟರಿ ಕ್ಷೇತ್ರಕ್ಕೆ ಸೀಮಿತವಾಗಿದ್ದ ಈ ಪದಪುಂಜ ಈಗ ಆರ್ಥಿಕ ಕ್ಷೇತ್ರಕ್ಕೂ ಪಾದಾರ್ಪಣೆ ಮಾಡಿದೆ. ನವೆಂಬರ್ ೮ರ ಮಧ್ಯರಾತ್ರಿಯಿಂದ ಕೇಂದ್ರ ಸರ್ಕಾರ ರೂ. ೧,೦೦೦/– ಮತ್ತು ರೂ. ೫೦೦/–ರ ನೋಟುಗಳನ್ನು ಅಮಾನ್ಯಗೊಳಿಸಿತು. ಇದರಿಂದ ಸುಮಾರು ೨೩ ಬಿಲಿಯ ನೋಟುಗಳು ರದ್ದಾದವು. ಇದು ಚಾಲ್ತಿಯಲ್ಲಿದ್ದ ನೋಟುಗಳ ಒಟ್ಟು ಮೌಲ್ಯದ ಶೇ. ೮೬ರಷ್ಟಿತ್ತು. ಕಾಳಧನದ ಮೇಲಿನ ಪ್ರಹಾರವಿದೆಂದು ಕೇಂದ್ರ ಸರ್ಕಾರ ಘೋಷಿಸಿದೆ. ಈ ಕ್ರಮದಿಂದ ಹೆಚ್ಚಿನ ತೆರಿಗೆ ಸಂಗ್ರಹ, ಹೆಚ್ಚಿನ ತೆರಿಗೆ ಅನುಸರಣೆ ಮತ್ತು ವಿಧ್ಯುಕ್ತ ಆರ್ಥಿಕತೆಗೆ ಹೆಚ್ಚಿನ ಪಾಲು, ಇವು ಈ ಯೋಜನೆಯ ದೂರಗಾಮಿ ಪರಿಣಾಮಗಳು ಎಂದೆಲ್ಲಾ ಅದು ಸಾರಿದೆ. ಈ ಗುರಿಗಳ ಗಣನೀಯ ಮಟ್ಟದ ಸಾಧನೆ, ಹೆಚ್ಚಿನ ಉತ್ಪಾದನೆ ಮತ್ತು ಕಡಿಮೆ ನಗದು ವಹಿವಾಟುಗಳಿಗೆ ಇಂಬು ನೀಡುತ್ತದೆ; ಅಲ್ಲದೆ, ಕಪ್ಪು ಹಣ ಹೊಂದಿರುವ ಭ್ರಷ್ಟ ರಾಜಕಾರಣಿಗಳು ಹಾಗೂ ಅವರ ಪಕ್ಷಗಳು, ದೊಡ್ಡ ಅಧಿಕಾರಿಗಳು, ತೆರಿಗೆ ನೀಡದೆ ವಂಚಿಸುವ ವ್ಯಾಪಾರಸ್ಥರು, ಕಳ್ಳಸಾಗಣೆಗಾರರು, ಮಾದಕ ವಸ್ತುಗಳ ವಿತರಕರ ಮೇಲೆ ನೇರ ಪ್ರಹಾರವಾಗುತ್ತದೆ; ನೆರೆ ದೇಶ ಪಾಕಿಸ್ತಾನದಿಂದ ಹೆಚ್ಚಿನ ಮಟ್ಟದ ಖೋಟಾನೋಟುಗಳು ತಯಾರಾಗಿ, ಅವು ನಮ್ಮ ದೇಶಕ್ಕೆ ನುಸುಳಿ, ಭಯೋತ್ಪಾದನಾ ಚಟುವಟಿಕೆಗಳಿಗೆ ಬಳಸಲಾಗುತ್ತಿವೆ; ಈ ಕಾಳ ಕಾರ್ಯಾಚರಣೆಗಳನ್ನು ಪ್ರಸ್ತುತ ಜಾರಿ ಮಾಡಿರುವ ಕಠಿಣ ಕ್ರಮದಿಂದ ನಿಯಂತ್ರಿಸಬಹುದು ಎಂಬುದು ಸರ್ಕಾರದ ಲೆಕ್ಕಾಚಾರ.

ಒಬ್ಬ ಅರ್ಥಶಾಸ್ತ್ರಜ್ಞ ಆರ್ಥಿಕತೆಯನ್ನು "ಜ಼ೀಬ್ರ ಆರ್ಥಿಕತೆ" ಎಂದು ವರ್ಣಿಸಿದ್ದಾನೆ. ಇದರರ್ಥ : ಕಪ್ಪು ಮತ್ತು ಬಿಳಿ ಹಣ ಸಮಾಂತರವಾಗಿ ಹರಿಯುತ್ತಿರುತ್ತದೆ. ನಮ್ಮಲ್ಲಿ ಎಷ್ಟು ಮೊತ್ತದ ಕಪ್ಪು ಹಣ ಉತ್ಪತ್ತಿಯಾಗುತ್ತಿದೆ ಎಂಬುದರ ಬಗೆಗೆ ವಿವಿಧ ಅಂದಾಜುಗಳಿವೆ. ಸರ್ಕಾರದಿಂದ ನಿಯೋಜಿಸಲ್ಪಟ್ಟ ನ್ಯಾಷನಲ್ ಇನ್ಸ್‌ಟಿಟ್ಯೂಟ್ ಫಾರ್ ಪಬ್ಲಿಕ್ ಫೈನಾನ್ಸ್ ಅಂಡ್ ಪಾಲಿಸಿ ನಡೆಸಿದ ಅಧ್ಯಯನದ ಅನ್ವಯ ೨೦೧೩ರಲ್ಲಿ ಕಪ್ಪು ಆರ್ಥಿಕತೆ ಜಿಡಿಪಿಯ ಶೇ. ೭೫ರಷ್ಟಿತ್ತು. ಇದೇ ರೀತಿಯ ಪ್ರಕ್ರಿಯೆಯನ್ನು ಈ ಸಂಸ್ಥೆ ೧೯೮೩ರಲ್ಲಿ ಜರುಗಿಸಿತ್ತು. ಆಗ ಕಪ್ಪು ಆರ್ಥಿಕತೆಯ ಪ್ರಮಾಣ ಜಿಡಿಪಿಯ ಶೇ. ೨೧ರಷ್ಟಿತ್ತು. ಈ ಏರಿಕೆಯಲ್ಲಿ ನವ ಉದಾರ ನೀತಿಗಳ ಪಾತ್ರವೆಷ್ಟಿತ್ತು ಎಂಬುದು ಸುಲಭವಾಗಿ ತಳ್ಳಿಹಾಕುವ ಪ್ರಶ್ನೆಯಲ್ಲ !

ಇತಿಹಾಸದ ಪುಟಗಳನ್ನು ತಿರುಗಿಸಿದರೆ, ನಮ್ಮ ದೇಶದಲ್ಲಿ ಈ ತೆರನಾದ ನೋಟುಗಳ ರದ್ದತಿ ಎರಡು ಬಾರಿ ಆಗಿರುವುದು ಕಂಡುಬರುತ್ತದೆ. ಜನವರಿ ೧೯೪೬ರಲ್ಲಿ ಅಂದಿನ ಬ್ರಿಟಿಷ್ ಸರ್ಕಾರ ರೂ. ೧,೦೦೦/–, ರೂ. ೫,೦೦೦/– ಮತ್ತು ರೂ. ೧೦,೦೦೦/– ನೋಟುಗಳ ಚಲಾವಣೆಯನ್ನು ನಿರ್ಬಂಧಿಸಿತು (ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾ ಮೊದಲ ಬಾರಿಗೆ ೧೯೩೮ರಲ್ಲಿ ರೂ. ೧೦,೦೦೦/– ನೋಟುಗಳನ್ನು ಮುದ್ರಿಸಿತು). ೧೯೫೪ರಲ್ಲಿ ಪುನಃ ಈ ನೋಟುಗಳನ್ನು ಚಲಾವಣೆಗೆ ತರಲಾಯಿತು. ೧೯೭೦ರ ಮೊದಲ ವರ್ಷಗಳಲ್ಲಿ ಅಂದಿನ ಕಾಂಗ್ರೆಸ್ ಸರ್ಕಾರ ನೇರ ತೆರಿಗೆ ವಿಚಾರಣೆಗೆ ಸಂಬಂಧಿಸಿದಂತೆ ವಾಂಚೂ ಸಮಿತಿಯನ್ನು ರಚಿಸಿತು. ಅದು ಕಪ್ಪು ಹಣವನ್ನು ಹೊರತೆಗೆಯಲು ಹಾಗೂ ಅದು ವಿಸ್ತರಿಸದಂತೆ ತಡೆ ಹಾಕಲು ನೋಟುಗಳನ್ನು ರದ್ದುಗೊಳಿಸಬೇಕೆಂದು ಸಲಹೆ ನೀಡಿತು. ಆದರೆ ಈ ಶಿಫಾರಸು ಸಾರ್ವಜನಿಕ ವಲಯದಲ್ಲಿದ್ದುದರಿಂದ, ಕಪ್ಪುಹಣ ಹೊಂದಿದ್ದ ಖದೀಮರು ಎಚ್ಚೆತ್ತುಕೊಂಡು, ಸರ್ಕಾರ ಸೂಕ್ತ ಕ್ರಮವನ್ನು ತೆಗೆದುಕೊಳ್ಳುವ ಮೊದಲೇ ದೊಡ್ಡ ಮೊತ್ತದ ನೋಟುಗಳನ್ನು ಹೊರಹಾಕಿ ನಿರುಮ್ಮಳರಾದರು. ಹೀಗೆ ತಮಗೆ ಲುಕ್ಸಾನು ಆಗದಂತೆ ನೋಡಿಕೊಂಡರು.

ತುರ್ತುಪರಿಸ್ಥಿತಿ ಹಿಂತೆಗೆದುಕೊಂಡ ತರುವಾಯ ೧೯೭೭ರಲ್ಲಿ ಜರುಗಿದ ಸಾರ್ವತ್ರಿಕ ಚುನಾವಣೆಯಲ್ಲಿ ಜನತಾ ಪಕ್ಷ ಅಧಿಕಾರದ ಚುಕ್ಕಾಣಿ ಹಿಡಿಯಿತು. ಆ ಪಕ್ಷದ ನಾಯಕ ಮತ್ತು ಪ್ರಧಾನಮಂತ್ರಿಯಾಗಿದ್ದ ಮೊರಾರ್ಜಿ ದೇಸಾಯಿಯವರಿಗೆ ಕಪ್ಪುಹಣ ಮತ್ತು ಖೋಟಾನೋಟುಗಳ ವಿರುದ್ಧ ಕ್ರಮವನ್ನು ತೆಗೆದುಕೊಳ್ಳಬೇಕೆಂಬ ತುಡಿತವಿತ್ತು. ಅದರಂತೆ ಆಗಿದ್ದ ಕೇಂದ್ರ ಸರ್ಕಾರ ಜನವರಿ ೧೬, ೧೯೭೮ರಂದು 'ದಿ ಹೈ ಡಿನಾಮಿನೇಷನ್ ಬ್ಯಾಂಕ್ ನೋಟ್ಸ್' (ಡಿಮಾನಿಟೈಸೇಷನ್) ಆ್ಯಕ್ಟನ್ನು ಜಾರಿಗೊಳಿಸಿತು. ಆಗ ಎರಡನೇ ಬಾರಿ ರೂ ೧,೦೦೦/–, ರೂ. ೫,೦೦೦/– ಮತ್ತು ರೂ. ೧೦,೦೦೦/– ನೋಟುಗಳು ರದ್ದಾದವು. ಆದರೆ ಸರ್ಕಾರದ ಈ ನಡೆ ಕುರಿತಂತೆ ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾದ ಅಂದಿನ ಗೌವರ್ನರಾಗಿದ್ದ ಐ. ಜಿ. ಪಟೇಲ್ ಸಹಮತ ಹೊಂದಿರಲಿಲ್ಲ. ಏಕೆಂದರೆ ಜನತಾ ಸಮ್ಮಿಶ್ರ ಸರ್ಕಾರದ ಕೆಲವರಿಗೆ ಹಿಂದಿನ ಭ್ರಷ್ಟ ಸರ್ಕಾರ ಹಾಗೂ ಅದರ ನಾಯಕರ

**ಮ. ಶ್ರೀ. ಮುರಳಿ ಕೃಷ್ಣ**

ವಿರುದ್ಧ ನೋಟು ರದ್ದತಿ ಕ್ರಮವನ್ನು ಬಳಸುವ ಹಪಾಹಪಿಯಿತ್ತು. 'ಗ್ಲಿಂಪ್‌ಸಸ್ ಆಫ್ ಇಂಡಿಯನ್ ಇಕಾನಾಮಿಕ್ ಪಾಲಸಿ : ಆ್ಯನ್ ಇನ್ಸೈಡರ್ಸ್ ವ್ಯೂ' ಎಂಬ ತಮ್ಮ ಪುಸ್ತಕದಲ್ಲಿ ಅಂದಿನ ವಿತ್ತ ಮಂತ್ರಿ ಹೆಚ್. ಎಮ್. ಪಟೇಲ್ ಹೆಚ್ಚಿನ ಮೌಲ್ಯದ ನೋಟುಗಳನ್ನು ರದ್ದುಪಡಿಸುವ ಸರ್ಕಾರದ ನಿರ್ಣಯವನ್ನು ತಿಳಿಸಿದಾಗ, ಇಂತಹ ಕ್ರಮಗಳಿಂದ ಅಂತಹ ಗಮನಾರ್ಹ ಪರಿಣಾಮಗಳು ಉಂಟಾಗುವುದಿಲ್ಲ. ಏಕೆಂದರೆ ಅನೈತಿಕವಾಗಿ ಹಣವನ್ನು ಸಂಪಾದಿಸುವವರು ಅಥವಾ ಕಪ್ಪುಹಣವುಳ್ಳವರು ಹೆಚ್ಚು ಸಮಯ ಇಂತಹ ಹಣವನ್ನು ತಮ್ಮ ಬಳಿ ಇರಿಸಿಕೊಳ್ಳುವುದಿಲ್ಲ. ಅಲ್ಲದೆ ಕಪ್ಪುಹಣವನ್ನು ಸೂಟ್‌ಕೇಸುಗಳಲ್ಲಿ, ದಿಂಬುಗಳಲ್ಲಿ ಅಥವಾ ಇತರೆಡೆಗಳಲ್ಲಿ ಅಡಗಿಸಿಡಲಾಗುತ್ತದೆ ಎಂಬುದು ಭೋಳೆತನದ ಕಲ್ಪನೆ. ವಾಮಮಾರ್ಗಗಳಿಂದ ಹಣವನ್ನು ಸಂಪಾದಿಸಿರುವವರು ರದ್ದುಗೊಂಡ ಹೆಚ್ಚು ಮೊತ್ತದ ನೋಟುಗಳನ್ನು ಸಣ್ಣ ಮೊತ್ತದ ನೋಟುಗಳನ್ನಾಗಿ ಬದಲಾಯಿಸಲು (ಸರ್ಕಾರದ ವಿನಿಮಯ ವ್ಯವಸ್ಥೆಯ ಮೂಲಕ) ಏಜೆಂಟರ ಸಹಾಯವನ್ನು ಪಡೆಯುತ್ತಾರೆ. ಇದಕ್ಕೆ ವಿವರಣೆಯನ್ನು ಕೇಳುವುದರಿಂದ ಅಂತಹ ಸಕಾರಾತ್ಮಕ ಫಲಶ್ರುತಿ ಸಿಗುವುದಿಲ್ಲ ಎಂಬ ಸಂಗತಿಗಳನ್ನು ತಾವು ತಿಳಿಸಿದರೆಂದು ದಾಖಲಿಸಿದ್ದಾರೆ. ಆಗ (೧೯೭೮) ಎಂಟು ದಿನಗಳ ಒಳಗೆ ಹೆಚ್ಚು ಮೊತ್ತದ ನೋಟುಗಳನ್ನು ವಿನಿಮಯ ಮಾಡಿಕೊಳ್ಳಲು ಸಮಯಾವಕಾಶ ನೀಡಲಾಗಿತ್ತು. ಆದರೆ ಈಗಿನಂತೆ ಆಗ ಹೆಚ್ಚು ಮೊತ್ತದ ನೋಟುಗಳು ದೊಡ್ಡ ಸಂಖ್ಯೆಯಲ್ಲಿ ಚಲಾವಣೆಯಲ್ಲಿರಲಿಲ್ಲ. ಹಾಗೆಯೇ ಆಗಿನ್ನೂ ಡಿಜಿಟಲ್ ಯುಗ ಪ್ರಾರಂಭವಾಗಿರಲಿಲ್ಲ.

ಈ ಹಿಂದೆ ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾದ ಗೌವರ್ನರ್ ಆಗಿದ್ದ ರಘುರಾಮ್ ರಾಜನ್ ನೋಟುಗಳ ರದ್ದತಿ ಸಂಬಂಧಿಸಿದಂತೆ ಹೀಗೆ ಹೇಳಿದ್ದಾರೆ : "ನನಗೆ ಅನಿಸುವಂತೆ ನಮ್ಮ ದೇಶದ ತೆರಿಗೆಗಳು ಹೆಚ್ಚು ಕಡಿಮೆ ಯುಕ್ತಾಯುಕ್ತವಾಗಿವೆ. ದೊಡ್ಡ ಮಟ್ಟದ ವರಮಾನಗಳಿಗೆ ನಮ್ಮಲ್ಲಿ ಗರಿಷ್ಠ ಮಟ್ಟದ ತೆರಿಗೆ ಪ್ರಮಾಣ ಶೇ. ೩೩ರಷ್ಟಿದೆ. ಅಮೇರಿಕಾದಲ್ಲಿ ಇದು ಶೇ. ೩೯ರಷ್ಟಿದ್ದು, ಇದಕ್ಕೆ ರಾಜ್ಯ ತೆರಿಗೆಗಳನ್ನು ಸೇರಿಸಿದರೆ, ಶೇ. ೫೦ರಷ್ಟಾಗುತ್ತದೆ. ಅನೇಕ ಕೈಗಾರಿಕಾ ದೇಶಗಳಿಗೆ ಹೋಲಿಸಿದಾಗ, ನಮ್ಮಲಿರುವ ತೆರಿಗೆಯ ಪ್ರಮಾಣ ಕಡಿಮೆ ಇದೆ. ಹೀಗಿರುವಾಗ, ತೆರಿಗೆಗಳನ್ನು ಕಟ್ಟಬೇಕಾದವರು ಕಟ್ಟುತ್ತಿಲ್ಲ ಎಂದರೆ ಅದಕ್ಕೆ ಸಕಾರಣಗಳಿಲ್ಲ. ಇದಕ್ಕೆ ಸಂಬಂಧಿಸಿದಂತೆ, ನಾನು ಸೂಕ್ತ ದತ್ತಾಂಶಗಳನ್ನು ಬೆನ್ನು ಹತ್ತುವುದರತ್ತ, ಹಾಲಿ ಇರುವ ತೆರಿಗೆ ಆಡಳಿತವನ್ನು ಉತ್ತಮಗೊಳಿಸುವುದರತ್ತ ಮತ್ತು ಎಲ್ಲಿ ಹಣದ ಘೋಷಣೆ ಯಾಗುತ್ತಿಲ್ಲ ಎಂಬ ವಿಷಯಗಳ ಬಗೆಗೆ ಹೆಚ್ಚಿನ ಗಮನವನ್ನು ಹರಿಸುತ್ತೇನೆ. ಈ ಆಧುನಿಕ ಆರ್ಥಿಕತೆಯಲ್ಲಿ ಹಣವನ್ನು ಸುಲಭವಾಗಿ ಅಡಗಿಸಲು ಸಾಧ್ಯವಾಗುವುದಿಲ್ಲ."

ಮೇಲೆ ಪ್ರಸ್ತಾಪಿಸಿರುವ ಐ. ಜಿ. ಪಟೇಲ್ ಮತ್ತು ರಾಜನ್‌ರವರ ಮಾತುಗಳಿಂದ ಅವರು ನೋಟುಗಳ ರದ್ದತಿಯ ಕ್ರಮದ ಪರಿಣಾಮಗಳ ಕುರಿತಂತೆ ಹೆಚ್ಚಿನ ನಿರೀಕ್ಷೆಗಳನ್ನು ಇರಿಸಿಕೊಂಡಿರಲಿಲ್ಲ / ಕೊಂಡಿಲ್ಲ ಎಂಬುದು ವೇದ್ಯವಾಗುತ್ತದೆ.

ಆರ್ಥಿಕ ವಿಚಾರಗಳ ಬಗೆಗೆ ಸ್ವಲ್ಪ ಜ್ಞಾನವುಳ್ಳವರಿಗೆ ನಗದನ್ನು ಶೇಖರಿಸಿದರೆ, ಅದು ಭಾರೀ ಪ್ರಮಾಣದಲ್ಲಿ, ಅದರ ಮೌಲ್ಯ ಕುಸಿಯುತ್ತ ಹೋಗುತ್ತದೆ ಎಂಬ ವಿಷಯ ತಿಳಿದಿರುತ್ತದೆ. ಈ ಸಂದರ್ಭದಲ್ಲಿ ಕಾರ್ಲ್ ಮಾರ್ಕ್ಸ್ ಹೇಳಿದ ಮಾತುಗಳನ್ನು ನೆನೆಯ ಬಹುದು : "ಹಣದ ರಾಶಿ ಒಟ್ಟಿಕೊಳ್ಳುವುದರಿಂದ ಲಾಭ ಉಂಟಾಗುವುದಿಲ್ಲ, ಹಣವನ್ನು ಪ್ರಸರಣದಲ್ಲಿ ತೊಡಗಿಸುವುದರಿಂದ ಲಾಭವಿದೆ. ಜಿಪುಣರು ಮೊದಲನೆಯದನ್ನು ಮಾಡುತ್ತಾರೆ, ಬಂಡವಾಳಗಾರರು ಎರಡನೆಯದನ್ನು ಆಯ್ದುಕೊಳ್ಳುತ್ತಾರೆ. ಬಂಡವಾಳ ಗಾರರು ಕಾಳದಂಧೆಯಲ್ಲಿ ತೊಡಗುತ್ತಾರೆಯೇ ವಿನಾ ಜಿಪುಣರಲ್ಲ. ಆದುದರಿಂದ ಕಪ್ಪುಹಣವೂ ದಾಸ್ತಾನು ರೂಪದಲ್ಲಿ ಇರುವುದಿಲ್ಲ."



ಅಗಾಧ ಮೊತ್ತದ ಕಾಳಧನವನ್ನು ಹೊಂದಿರುವವರು ಅದನ್ನು ಸ್ಥಿರಾಸ್ತಿ, ಚಿನ್ನ ಮತ್ತಿತರ ಬೆಲೆಬಾಳುವ ಲೋಹಗಳು, ಆಭರಣಗಳು ಮುಂತಾದುವುಗಳಲ್ಲಿ ತಮ್ಮ ಹಣವನ್ನು ಹೂಡುತ್ತಾರೆ. ಹವಾಲ ಪ್ರಕ್ರಿಯೆಗಳ ಮೂಲಕ ದೇಶದಿಂದ ಬೃಹತ್ ಮೊತ್ತದ ಹಣ ಹೊರಗೆ ಹೋಗುತ್ತದೆ. ವಿದೇಶಿ ಬ್ಯಾಂಕುಗಳಲ್ಲಿ, ಅದರಲ್ಲೂ ಮುಖ್ಯವಾಗಿ ಸ್ವಿಸ್ ಬ್ಯಾಂಕುಗಳಲ್ಲಿ ದೊಡ್ಡ ಕುಳಗಳು ಕೋಟಿ ಕೋಟಿ ಹಣವನ್ನು ಹೊಂದಿರುವುದನ್ನು ವಿಕಿಲೀಕ್ಸ್ ಬಹಿರಂಗಗೊಳಿಸಿದ್ದನ್ನು ಸ್ಮರಿಸಬಹುದು. ಪನಾಮ ಪೇಪರ್ಸ್ ಹಗರಣ ಕಾರ್ಪೆಟ್‌ನಡಿ ಸೇರಿ ತುಂಡುತುಂಡಾಗಿದೆ. ಇರಲಿ, ವರಮಾನ ತೆರಿಗೆ ದಾಳಿಗಳು ಮತ್ತು ಇತರ ದತ್ತಾಂಶಗಳ ಅನ್ವಯ ಒಟ್ಟು ಕಪ್ಪುಹಣದ ಶೇ. ೬ರಷ್ಟು ಮಾತ್ರ ಸರಕಿನ ರೂಪದಲ್ಲಿದೆ. ಮಿಕ್ಕವು ಹೂಡಿಕೆಗಳಾಗಿವೆ.

ಈಗ ನಮ್ಮ ದೇಶದ ತೆರಿಗೆ ವ್ಯವಸ್ಥೆಯ ಕೆಲವು ವಿವರಗಳತ್ತ ಗಮನವನ್ನು ಹರಿಸೋಣ. ಒಂದು ಅಂದಾಜಿನ ಪ್ರಕಾರ ನಮ್ಮ ಜಿಡಿಪಿ ಸುಮಾರು ೨.೦೪೭ ಟ್ರಿಲಿಯನ್ ಡಾಲರ್‌ಗಳಿಗಿಂತಲೂ ಹೆಚ್ಚಿದೆ (೧ ಡಾಲರ್ = ರೂ. ೬೦/–). ೨೦೧೪ರಲ್ಲಿ ನಮ್ಮ ಕೇಂದ್ರ ಸರ್ಕಾರ ರೂ. ೧೩.೬೪ ಲಕ್ಷ ಕೋಟಿ ತೆರಿಗೆ ಮತ್ತು ಸುಂಕಗಳನ್ನು ಸಂಗ್ರಹಿಸುವ ನಿರೀಕ್ಷೆಯಲ್ಲಿತ್ತು. ಹಿಂದೆ ತಿಳಿಸಿದಂತೆ ನಮ್ಮಲ್ಲಿನ ಕಪ್ಪು ಆರ್ಥಿಕತೆ ೨೦೧೩ರಲ್ಲಿ ಜಿಡಿಪಿಯ ಶೇ. ೭೫ರಷ್ಟಿತ್ತು. ಅಂದರೆ ಕೇಂದ್ರ ಸರ್ಕಾರ ಸುಮಾರು ೧೦.೪ ಲಕ್ಷ ಕೋಟಿ ಹಣವನ್ನು ಹೆಚ್ಚುವರಿ ತೆರಿಗೆಗಳು ಮತ್ತು ಸುಂಕಗಳ ರೂಪದಲ್ಲಿ ಸಂಗ್ರಹಿಸಲು ಸಾಧ್ಯವಾಗದ ಸ್ಥಿತಿಯಲ್ಲಿತ್ತು. ಇದು ಭಾರಿ ಮೊತ್ತವೇ ಸರಿ. ಭಾರತದಲ್ಲಿ ಕೇವಲ ೩೫ ಮಿಲಿಯ ತೆರಿಗೆದಾರರಿದ್ದಾರೆ. ಅವರಲ್ಲಿ ಶೇ. ೮೯ರಷ್ಟು ರೂ. ೦–೫ ಲಕ್ಷದ ಸ್ಲ್ಯಾಬಿನಡಿ ತಮ್ಮ ವರಮಾನವನ್ನು ಘೋಷಿಸುತ್ತಿದ್ದಾರೆ. ಅಂದರೆ ಕೇವಲ ಶೇ. ೧೧ರಷ್ಟು ತೆರಿಗೆದಾರರು ಮಾತ್ರ ವರ್ಷಕ್ಕೆ ರೂ. ೫ ಲಕ್ಷಕ್ಕೂ ಹೆಚ್ಚಿನ ವರಮಾನವನ್ನು ಗಳಿಸುತ್ತಿದ್ದಾರೆಯೇ ? ಈ ಅಂಕಿಸಂಖ್ಯೆಗಳು ಅಸಂಬದ್ಧ ಎನಿಸುವುದಿಲ್ಲವೇ ? ಏಕೆಂದರೆ ಕಳೆದ ವರ್ಷ ಭಾರತೀಯರು ೨.೨ ಮಿಲಿಯ ನೂತನ ಕಾರುಗಳು ಹಾಗೂ ಐಷಾರಾಮಿ ವಾಹನಗಳನ್ನು ಖರೀದಿಸಿದರು. ಕಳೆದ ವರ್ಷ, ಬೆಳವಣಿಗೆಯ ದೃಷ್ಟಿಯಿಂದ ಅಷ್ಟೊಂದು ಆಶಾದಾಯಕವಾಗಿರಲಿಲ್ಲ. ಆದರೂ ಇಷ್ಟು ಕಾರುಗಳ ಖರೀದಿ ಏನನ್ನು ಸೂಚಿಸುತ್ತದೆ ? ಸರಿಯಾದ ತೆರಿಗೆಯನ್ನು ಪಾವತಿಸಬೇಕಾದ ಮಂದಿ ಹಾಗೆ ಮಾಡುತ್ತಿಲ್ಲ, ಅಲ್ಲವೇ ? ಈ ನಿಟ್ಟಿನಲ್ಲಿ ಬಿಗಿ ಕ್ರಮಗಳನ್ನು ಜಾರಿ ಮಾಡುವುದು ಅವಶ್ಯಕವಲ್ಲವೇ ? ಸೂಕ್ತ ಸುಧಾರಣೆಗಳನ್ನು ಅನುಷ್ಠಾನಕ್ಕೆ ತಂದು ತೆರಿಗೆ ವ್ಯವಸ್ಥೆಯನ್ನು ಬಂದೋಬಸ್ತು ಮಾಡುವುದು ಜರೂರಿಯಾಗಿ ಆಗಬೇಕು. ಪ್ರತಿ ವರ್ಷ ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆಗೆ ಹಣವನ್ನು ನೀಡುವಾಗ ಉಳ್ಳವರ ಲಾಬಿಗಳು ಲಬೋ ಲಬೋ ಎಂದು ಬಾಯಿ ಬಡೆದುಕೊಳ್ಳುತ್ತವೆ. ರಾಜ್ಯ ಸರ್ಕಾರಗಳು ಬಡವರಿಗಾಗಿ ಕೆಲವು ಕಲ್ಯಾಣ ಯೋಜನೆಗಳನ್ನು ಜಾರಿ ಮಾಡಿದರೆ, ಪೊಗರಿನ ಶ್ರೀಮಂತರು ಬಿಡಿ, ಮೇಲ್‌ಮಧ್ಯಮ ವರ್ಗದ ಅನೇಕ ಮಂದಿ ಇಂತಹ ಯೋಜನೆಗಳು ಜನರನ್ನು ಸೋಮಾರಿಗಳನ್ನಾಗಿಸುತ್ತವೆ ಎಂದು ಬೊಬ್ಬೆ ಹೊಡೆಯುತ್ತಾರೆ ! ಅಂತಹವರಿಗೆ ಅಪಾರ ಮೊತ್ತದ ತೆರಿಗೆ ವಂಚನೆ ಕಾಣುವುದಿಲ್ಲ !

ಬ್ಯಾಂಕ್ ಉದ್ಯಮ ಯಾವುದೇ ದೇಶದ ಆರ್ಥಿಕ ವ್ಯವಸ್ಥೆಯ ಬೆನ್ನೆಲುಬು. ಸರ್ಕಾರದ ಮತ್ತು ಕೇಂದ್ರ ಬ್ಯಾಂಕಿನ ಆರ್ಥಿಕ ನೀತಿಗಳನ್ನು ಅನುಷ್ಠಾನ ಗೊಳಿಸುವುದರಲ್ಲಿ ಬ್ಯಾಂಕ್ ಕ್ಷೇತ್ರದ ಪಾತ್ರ ಮಹತ್ವದ್ದಾಗಿರುತ್ತದೆ. ನಮ್ಮ ದೇಶದಲ್ಲಿ, ನಿಜವಾದ ಅರ್ಥದಲ್ಲಿ, ರಾಷ್ಟ್ರೀಕರಣಕ್ಕೆ ಒಳಗಾದ ತರುವಾಯವೇ ಬ್ಯಾಂಕ್ ಕ್ಷೇತ್ರ ವಿಸ್ತರಿಸಿತು. 'ಕ್ಲಾಸ್ ಬ್ಯಾಂಕಿಂಗ್'ನಿಂದ 'ಮಾಸ್ ಬ್ಯಾಂಕಿಂಗ್' ಆಗಿ ಪರಿವರ್ತನೆಯಾಗಿದ್ದರ ಹಿಂದೆ ರಾಷ್ಟ್ರೀಕೃತ ಬ್ಯಾಂಕುಗಳ ಪಾಲು ಉಲ್ಲೇಖನೀಯ. ಆದರೆ ಬ್ಯಾಂಕ್ ಸೌಲಭ್ಯಗಳು ಇನ್ನೂ ಅಪಾರ ಮಂದಿಯನ್ನು ತಲುಪಿಲ್ಲ ಎಂಬುದು ವಾಸ್ತವ ಸಂಗತಿ. ಜನ–ಧನ್ ಖಾತೆಗಳು ತೆರೆಯುವ ಮುಂಚೆಯೇ ೨೦೦೫ರಲ್ಲಿ ವಿತ್ತೀಯ ಸೇರ್ಪಡೆಯ ಭಾಗವಾಗಿ (ಕನಿಷ್ಠ ಸಿಲ್ಕಿನ ಅಥವಾ ಸಿಲ್ಕು ಇರದ ಉಳಿತಾಯ ಖಾತೆಗಳು) ತೆರೆಯಲ್ಪಟ್ಟವು. ಆದರೂ ಒಂದು ಮೂಲದ ಅನ್ವಯ ಶೇ. ೨೮–೩೨ರಷ್ಟು ಮಂದಿಗೆ ಮಾತ್ರ ಬ್ಯಾಂಕ್ ಮತ್ತು ಅಂಚೆ ಕಛೇರಿಯ ಸೌಲಭ್ಯಗಳು ತಲುಪುತ್ತಿವೆ. ಪ್ರತಿ ೯೫೦೦ ಮಂದಿಗೆ ಒಂದು ಶಾಖೆಯಿದೆ. ೩೮ ಜಿಲ್ಲೆಗಳಲ್ಲಿ (ಹೆಚ್ಚಾಗಿ ಈಶಾನ್ಯ ಭಾರತದಲ್ಲಿ) ೧೦ಕ್ಕಿಂತಲೂ ಕಡಿಮೆ ಬ್ಯಾಂಕುಗಳು ಕಾರ್ಯ ನಿರ್ವಹಿಸುತ್ತಿವೆ. ಸುಮಾರು ಶೇ. ೬೦ರಷ್ಟು ಮಂದಿ ಬಡತನದಲ್ಲಿದ್ದಾರೆ. ಕಾರ್ಮಿಕ ವರ್ಗದಲ್ಲಿ ಶೇ. ೯೩ರಷ್ಟು ಮಂದಿ ಅಸಂಘಟಿತ ಕ್ಷೇತ್ರಗಳಲ್ಲಿ ದುಡಿಯುತ್ತಿದ್ದಾರೆ. ಅವರಲ್ಲಿ ಸಾಕಷ್ಟು ಮಂದಿ ಗುಳೆ ಹೋಗುವ ಕಾರ್ಮಿಕರಿದ್ದಾರೆ. ಕೃಷಿ, ಕಟ್ಟಡ ಉದ್ಯಮದಲ್ಲಿ ಅಪಾರ ಸಂಖ್ಯೆಯ ದಿನಗೂಲಿ ಕಾರ್ಮಿಕರಿದ್ದಾರೆ.

## ಅಭಿನಂದನೆ

೨೦೧೪ರ ಸಾಲಿನ ಭಟ್ಕಳದ ಡಾ॥ ಸೈಯದ್ ಜಮೀರಲ್ಲಾ ಷರೀಫ್ ಸಾಹಿತ್ಯ ಪ್ರತಿಷ್ಠಾನ ಪುಸ್ತಕ ಪ್ರಶಸ್ತಿ ಡಾ॥ ರಂಗಾರೆಡ್ಡಿ ಕೋಡಿರಾಂಪುರ ಅವರ "ನೆಲದೊಡಲ ಪ್ರೀತಿ" ಎಂಬ ಪುಸ್ತಕಕ್ಕೆ ಹಾಗೂ ೨೦೧೫ನೇ ಸಾಲಿನ ಸರ್. ಎಂ. ವಿಶ್ವೇಶ್ವರಯ್ಯ ಇಂಜಿನಿಯರಿಂಗ್ ಪ್ರತಿಷ್ಠಾನದ ರಾಷ್ಟ್ರೀಯ ಪುಸ್ತಕ ಪ್ರಶಸ್ತಿ "ಅಲ್ಲಮಪ್ರಭು" ಪುಸ್ತಕಕ್ಕೆ ಲಭ್ಯವಾಗಿವೆ. ಹಾಗೆಯೇ ನವಕರ್ನಾಟಕ ಪ್ರಕಟಿಸಿರುವ ಡಾ॥ ಕೆ. ಎಸ್. ಪವಿತ್ರ ಅವರ "ನಿಮ್ಮ ಪಯಣ ಸುಗಮವಾಗಲಿ!" ಕೃತಿಗೂ ೨೦೧೫ನೇ ಸಾಲಿನ ವಿಶ್ವೇಶ್ವರಯ್ಯ ರಾಷ್ಟ್ರೀಯ ಸಾಹಿತ್ಯ ಪ್ರಶಸ್ತಿ ದೊರಕಿದೆ. ಈ ಇಬ್ಬರು ಲೇಖಕರಿಗೂ 'ನವಕರ್ನಾಟಕ' ಹಾಗೂ 'ಹೊಸತು' ಬಳಗದ ಅಭಿನಂದನೆಗಳು.

ವಸ್ತುಸ್ಥಿತಿಯ ಕಟು ವಾಸ್ತವ ಹೀಗಿರಬೇಕಾದರೆ, ನಗದುರಹಿತ ಆರ್ಥಿಕತೆಯತ್ತ ಇಡೀ ದೇಶ ಜಿಗಿಯಬೇಕೆಂಬುದು ಇಂದಿನ ಸರ್ಕಾರದ ಹಾಗೂ ಅದರ ನೇತೃತ್ವ ವಹಿಸಿರುವ ಪ್ರಧಾನಿ ಮೋದಿಯವರ ಹುರುಳಿಲ್ಲದ ಹೆಬ್ಬಯಕೆ ಮತ್ತು ಕನಸು. ಈ ತರಹದ ಆರ್ಥಿಕತೆಯಿಂದ ಕಪ್ಪುಹಣವನ್ನು ನಿರ್ಬಂಧಿಸಬಹುದು ಎಂಬುದು ಆಡಳಿತ ವರ್ಗದ ಅಂಬೋಣ. ಆದರೆ ಪ್ರಪಂಚದ ಯಾವ ದೇಶದಲ್ಲಿ ನಗದುರಹಿತ ಆರ್ಥಿಕತೆ ಇದೆ ? ಒಂದು ಮೂಲದ ಅನ್ವಯ ವಿಶ್ವದಲ್ಲೇ ಅತ್ಯಂತ ಕಡಿಮೆ ನಗದು ಬಳಸುವ ದೇಶಗಳೆಂದರೆ – ಸ್ವೀಡನ್ (ರಾಷ್ಟ್ರೀಯ ಆರ್ಥಿಕತೆಯ ಶೇ. ೩ರಷ್ಟು ನಗದಿದೆ), ಸೊಮಾಲಿಲ್ಯಾಂಡ್, ಕೀನ್ಯಾ, ಕೆನಡಾ ಮತ್ತು ದಕ್ಷಿಣ ಕೊರಿಯಾ. ಇಡೀ ಯೂರೋ ವಲಯದಲ್ಲಿ ನಗದಿನ ಬಳಕೆ ಶೇ. ೭ರಷ್ಟಿದೆ. ಅಮೇರಿಕಾದಲ್ಲಿ ಇದರ ಪ್ರಮಾಣ ಶೇ. ೭ರಷ್ಟಿದೆ. ಭಾರತದಲ್ಲಿ ಅತ್ಯಧಿಕ ಸಂಖ್ಯೆಯ ಜನರ ಜೀವನ ಹಸನಾದರೆ, ವಿಪರೀತ ಇರುವ ಅಸಮಾನತೆ ಗರಿಷ್ಠ ಮಟ್ಟದಲ್ಲಿ ಕಡಿಮೆಯಾದರೆ, ಅತ್ಯಂತ ಕಡಿಮೆ ನಗದು ಬಳಸುವ ಸಂದರ್ಭ ಉಂಟಾಗಬಹುದು.

ಪ್ರಧಾನಿ ಮೋದಿ ನವೆಂಬರ್ ೮ರ ರಾತ್ರಿ ಏಕಾಏಕಿ ರೂ. ೧,೦೦೦/– ಮತ್ತು ರೂ. ೫೦೦/– ನೋಟುಗಳ ರದ್ದತಿಯನ್ನು ಘೋಷಿಸಿದರು. ಆದರೆ ಸೂಕ್ತ ವಿನಿಮಯ ವ್ಯವಸ್ಥೆಯ ಜಾರಿಯಲ್ಲಿ ಸರ್ಕಾರ ಸೋತಿದೆ ಎಂದರೆ ತಪ್ಪಾಗುವುದಿಲ್ಲ. ನೋಟುಗಳ ಸರಬರಾಜಿನಲ್ಲಿ ವ್ಯತ್ಯಯ ಉಂಟಾಗಿಲ್ಲ ಎಂದು ಅದು ಸಾರುತ್ತಿದ್ದರೂ, ಬ್ಯಾಂಕ್ ಶಾಖೆಗಳು ಮತ್ತು ಎಟಿಎಂಗಳ ಮುಂದಿನ ಜನಸಂದಣಿ ಕಡಿಮೆಯಾಗುತ್ತಿಲ್ಲ. ಸಾಮಾನ್ಯ ಜನರು ಅದರಲ್ಲೂ ಮುಖ್ಯವಾಗಿ ರೈತರು, ಕಾರ್ಮಿಕರು, ದಿನಗೂಲಿ ನೌಕರರು, ಸಣ್ಣ ವ್ಯಾಪಾರಿಗಳು, ಸಣ್ಣ ಘಟಕಗಳಲ್ಲಿ ಕೆಲಸ ಮಾಡುತ್ತಿರುವ ನೌಕರರು, ಕೆಳ ಮತ್ತು ಮಧ್ಯಮವರ್ಗದವರು ಇತ್ಯಾದಿ ಮಂದಿ ಗಂಟೆಗಟ್ಟಲೆ ಕ್ಯೂ ನಿಂತಿರುವುದು ಕಳೆದ ಹತ್ತು ದಿನಗಳಿಂದ ಪುನರಾವರ್ತನೆಗೊಳ್ಳುತ್ತಿರುವ ದೃಶ್ಯಗಳು (ಈ ಲೇಖನ ಬರೆಯುವ ಸಮಯದಲ್ಲಿ). ನೋಟುಗಳ ರದ್ದತಿ ಜಾರಿಯಾಗುವ ಸಮಯದಲ್ಲಿ ಸರ್ಕಾರ, ರೈಲ್ವೆ, ವಿಮಾನ, ಸರ್ಕಾರಿ ಬಸ್ ಟಿಕೆಟ್ ಬುಕಿಂಗ್‌ಗೆ, ಆಸ್ಪತ್ರೆಗಳಲ್ಲಿ, ಪೆಟ್ರೋಲ್ ಬಂಕ್‌ಗಳಲ್ಲಿ ರದ್ದಾದ ರೂ. ೫೦೦/–, ರೂ. ೧,೦೦೦/– ಮುಖಬೆಲೆಯ ನೋಟುಗಳನ್ನು ನಿರ್ದಿಷ್ಟ ದಿನಗಳವರೆಗೆ ಬಳಸಬಹುದೆಂದು ಘೋಷಿಸಿತ್ತು. ಆದರೆ ಎಲ್ಲೂ ಈ ಕಾರ್ಯ ಸುಸೂತ್ರವಾಗಿ ಜರುಗುತ್ತಿಲ್ಲ. ಹೆಚ್ಚಾಗಿ ಕಂಡುಬರುತ್ತಿರುವುದು ನಿರಾಕರಣೆ ಅಷ್ಟೆ. ಮದುವೆ ಮುಂತಾದ ಸಮಾರಂಭಗಳನ್ನು ಹಮ್ಮಿಕೊಂಡಿರುವ ಸಾಮಾನ್ಯ ಜನರ ಪಡಿಪಾಟಲುಗಳು ಒಂದೇ ಎರಡೇ... ಕೆಲವು ದಿನಗಳ ಹಿಂದೆ ಪ್ರಧಾನಿ ಮೋದಿ ತಮ್ಮ ಎಂದಿನ ಭಾವನಾತ್ಮಕ ಭಾಷಣ ಶೈಲಿಯಲ್ಲಿ ರಂಗುರಂಗಾಗಿ ಮಾತನಾಡುತ್ತ "೨ಜಿ, ೩ಜಿ ಹಗರಣಗಳಲ್ಲಿ ಹಣವನ್ನು ಗುಳುಂ ಮಾಡಿದವರು, ಕಾಳಧನವನ್ನು ಹೊಂದಿರುವ ದೊಡ್ಡ ದೊಡ್ಡ ಖದೀಮರು ಬ್ಯಾಂಕುಗಳ ಮುಂದೆ ಕ್ಯೂಗಳಲ್ಲಿ ನಿಂತುಕೊಳ್ಳುವಂತೆ ಮಾಡಿದ್ದೇನಿ..." ಎಂದು ಭಾವೋದ್ವೇಗದ ನುಡಿಗಳನ್ನು ಹರಿಬಿಟ್ಟರು. ಆದರೆ ಬ್ಯಾಂಕು ಶಾಖೆಗಳ ಮುಂದೆ ಯಾವ ಮಂದಿ ನಿಂತಿರುವರೆಂಬ ವಿಚಾರ ಸೂರ್ಯನ ಕಿರಣಗಳಷ್ಟೇ ಸ್ಪಷ್ಟ. ನಮ್ಮ ದೇಶದ ಪ್ರಧಾನಿ ಈ ಪರಿ ಸಾಮಾನ್ಯ ಜನರನ್ನು ಒಂದರ್ಥದಲ್ಲಿ ಅವಮಾನ ಮಾಡುವುದು ಸರಿಯೇ ?

ಈ ನಿಟ್ಟಿನಲ್ಲಿ ಬ್ಯಾಂಕುಗಳ ಮುಂದೆ ಗಂಟೆಗಟ್ಟಲೆ ಸರತಿಯ ಸಾಲುಗಳಲ್ಲಿ ನಿಲ್ಲುತ್ತಿರುವ ಮಂದಿಯ ಸೈರಣೆ ಮೆಚ್ಚಬೇಕಾದ ವಿಷಯವೇ. ಆದರೆ ಸಾಮಾನ್ಯ ದಿನಗಳಲ್ಲಿ ಬ್ಯಾಂಕ್ ಶಾಖೆಗಳಲ್ಲಿ ತಮ್ಮ ವ್ಯವಹಾರಗಳು ಮುಗಿಯಲು ಸ್ವಲ್ಪ ತಡವಾದರೆ, ಸಿಬ್ಬಂದಿಯನ್ನು ತರಾಟೆಗೆ ತೆಗೆದುಕೊಳ್ಳುವ ಗ್ರಾಹಕರು ಈಗಿನ ಪರಿಸ್ಥಿತಿಯ ಬಗೆಗೆ ಏನು ಹೇಳುತ್ತಾರೆ ? ೨೦೧೪ರ ಸಾರ್ವತ್ರಿಕ ಚುನಾವಣೆಗೆ ಸಂಬಂಧಿಸಿದಂತೆ ಬಿಜೆಪಿಯ ಪ್ರಣಾಳಿಕೆಯನ್ನು ಬಿಡುಗಡೆಗೊಳಿಸುವ ಸಂದರ್ಭದಲ್ಲಿ ಮೋದಿ ೧೦೦ ದಿನಗಳಲ್ಲಿ ಸ್ವಿಸ್ ಬ್ಯಾಂಕುಗಳಲ್ಲಿರುವ ಭಾರತೀಯರ ಬೃಹತ್ ಮೊತ್ತದ ಕಪ್ಪುಹಣವನ್ನು ಹೊರಗೆಳೆದು ಪ್ರತಿ ಭಾರತೀಯನ ಖಾತೆಯಲ್ಲಿ ರೂ. ೧೫ ಲಕ್ಷ ಜಮಾ ಮಾಡಲಾಗುವುದು ಎಂದು ಗುಡುಗಿದ್ದರು. ಆಗ ನಮ್ಮ ಜನರು ಭವ್ಯ ಕನಸುಗಳನ್ನು ಕಂಡಿದ್ದರು. ಆದರೆ ಅವು ಸಾಕಾರಗೊಂಡಿಲ್ಲ. ಕಾಳಧನವನ್ನು ಮಟ್ಟಹಾಕುವ ವಿಷಯದಲ್ಲಿ ಅವರ ಕನಸುಗಳು ನನಸಾಗುವುದೇ ?

ನಮ್ಮ ದೇಶದಲ್ಲಿ ಕಪ್ಪು ಆರ್ಥಿಕತೆ ಬೆಳೆಯುತ್ತಿರುವುದರ ಹಿಂದೆ ರಾಜಕೀಯ ವ್ಯವಸ್ಥೆ ಮತ್ತು ಕಾರ್ಪೊರೇಟ್ ಶಕ್ತಿಗಳ ನಡುವೆ ಇರುವ ಕರಾಳ ಮೈತ್ರಿ ಸಹ ಪ್ರಮುಖ ಕಾರಣಗಳಲ್ಲಿ ಒಂದು. ೨೦೧೪ರ ಸಾರ್ವತ್ರಿಕ ಚುನಾವಣೆಯ ಸಮಯದಲ್ಲಿ ಮೋದಿ ದೇಶಾದ್ಯಂತ ಸಂಚರಿಸಲು ಕಾರ್ಪೊರೇಟ್ ಕುಳ ಅದಾನಿಯ ಖಾಸಗಿ ವಿಮಾನವನ್ನು ಬಳಸಿದರು (ಹೀಗೆ ಪಯಣಿಸಿರುವ ಅನೇಕ ರಾಜಕಾರಣಿಗಳಿದ್ದಾರೆ). ಈ ಭೂಪನ ಒಡೆತನದಲ್ಲಿರುವ ಕಂಪನಿಗಳಿಗೆ ಸಾರ್ವಜನಿಕ ಕ್ಷೇತ್ರದ ವಿತ್ತೀಯ ಸಂಸ್ಥೆಗಳು ಸುಮಾರು ರೂ. ೯೬,೦೦೦ ಕೋಟಿ ಸಾಲಗಳನ್ನು ನೀಡಲಾಗಿದೆ. ಪ್ರಸ್ತುತ ಬ್ಯಾಂಕ್ ಕ್ಷೇತ್ರದಲ್ಲಿರುವ ರೂ. ೬,೦೦,೦೦೦ ಕೋಟಿ ಮರುಪಾವತಿಯಾಗದ ಸಾಲಗಳ ಪೈಕಿ ತಿಮಿಂಗಿಲಗಳ ಪಾಲೇ ಹೆಚ್ಚು. ಚುನಾವಣೆಗಳ ಸಮಯದಲ್ಲಿ ಕಾರ್ಪೊರೇಟ್ ಕಪ್ತಾನರ ಮತ್ತು ರಾಜಕಾರಣಿಗಳ ನಡುವಿನ ಹಸ್ತಲಾಘವದಿಂದ ಅಪಾರ ಮೊತ್ತದ ಕಪ್ಪುಹಣ ಹರಿದಾಡುತ್ತದೆ. ಇದನ್ನು ತಡೆಯಲು ಚುನಾವಣಾ ಕ್ಷೇತ್ರದಲ್ಲಿ ಸೂಕ್ತ ಸುಧಾರಣೆಗಳು ಜಾರಿಯಾಗಬೇಕು. ಆದರೆ ಬಿಜೆಪಿ, ಕಾಂಗ್ರೆಸ್ ಮತ್ತು ಇತರ ಪ್ರಮುಖ ರಾಜಕೀಯ ಪಕ್ಷಗಳು ಆಸ್ಥೆ ವಹಿಸುತ್ತಿಲ್ಲ. ಇದರ ಹಿಂದಿರುವ ಕಾರಣಗಳನ್ನು ಪ್ರತ್ಯೇಕವಾಗಿ ಉಲ್ಲೇಖಿಸಬೇಕಿಲ್ಲ ಅಲ್ಲವೇ ?

ಸುಮಾರು ೧೨ ವರ್ಷಗಳ ಅವಧಿಯಲ್ಲಿ, ವಾರ್ಷಿಕ ಬಜೆಟ್ಟುಗಳಲ್ಲಿ, (ಆದಾಯ ವರ್ಜನೆ) ಮೂಲಕ ಆಯ್ದ ತೆರಿಗೆದಾರರಿಗೆ ಮನ್ನಾ ಮಾಡಿರುವ ಒಟ್ಟು ಮೊತ್ತ ಸುಮಾರು ೪೦ ಲಕ್ಷ ಕೋಟಿಗಿಂತಲೂ ಮಿಗಿಲು (ರಿಯಾಯಿತಿ, ಇತ್ಯಾದಿಗಳ ಮೂಲಕ). ಅಂದರೆ, ಇಷ್ಟು ಹಣ ಸರ್ಕಾರಕ್ಕೆ ಲುಕ್ಸಾನು ಆಗಿದೆ ಎಂದರ್ಥ. ಯಾರು ಈ ಮಹಾನುಭಾವರು ? ಅಂತಹವರಲ್ಲಿ ಕಾರ್ಪೊರೇಟ್ ಲೋಕದ ಧ್ರುವತಾರೆಗಳೂ ಸೇರಿದ್ದಾರೆ ಎಂದು ಪ್ರತ್ಯೇಕವಾಗಿ ಪ್ರಸ್ತಾಪಿಸಬೇಕಿಲ್ಲ, ಈ ವಿಷಯಕ್ಕೆ ಸಂಬಂಧಿಸಿದಂತೆ ಖ್ಯಾತ ಜನಪರ ಪತ್ರಕರ್ತ ಪಿ. ಸಾಯಿನಾಥ್ ಅನೇಕ ವರ್ಷಗಳಿಂದ ಲೇಖನಗಳನ್ನು ಬರೆಯುತ್ತಲೇ ಬಂದಿದ್ದಾರೆ. ಕಳೆದ ವರ್ಷ ಮೋದಿ ಸರ್ಕಾರ ಈ ವಿಚಾರದಲ್ಲಿ ಮನ್ನಾ ಮಾಡಿರುವುದು ರೂ. ೬. ೧೧ ಲಕ್ಷ ಕೋಟಿ. ಇಷ್ಟು ಅಥವಾ ಇದಕ್ಕಿಂತಲೂ ಹೆಚ್ಚು ಹಣ ಪೋಲಾಗುತ್ತಿದೆಯಲ್ಲ, ಇದರ ಬಗೆಗೆ ಯಾವ ವಿಶೇಷಜ್ಞನೂ ಟಿವಿ ಚರ್ಚೆಗಳಲ್ಲಿ, ಇತರೆಡೆ ಪ್ರಸ್ತಾಪ ಮಾಡುವುದಿಲ್ಲ. ಇಂತಹ ಕ್ರಮದಿಂದ ನಮ್ಮ ಆರ್ಥಿಕತೆಗೆ ಅಪಾರ ನಷ್ಟವಾಗುವುದಿಲ್ಲವೇ ? ಇದಕ್ಕೆ ಸಂಬಂಧಿಸಿದ ಎಲ್ಲ ಪ್ರಕ್ರಿಯೆಗಳು ಪಾರದರ್ಶಕವಾಗಿರುತ್ತವೆಯೇ ? ಅರ್ಹರಿಗೆ ಈ ಸೌಲಭ್ಯ ದೊರಕುತ್ತಿದೆಯೇ ? – ಎಂಬಿತ್ಯಾದಿ ಪ್ರಶ್ನೆಗಳು ಕಪ್ಪುಹಣದ ಪೂರ್ವಾಪರಗಳ ಬಗೆಗೆ ಚರ್ಚಿಸುತ್ತಿರುವಾಗ ಪ್ರಸ್ತುತವಾಗುತ್ತವೆ.

ಒಟ್ಟಿನಲ್ಲಿ ಕೇಂದ್ರ ಸರ್ಕಾರದ ನೋಟುಗಳ ರದ್ದತಿಯ ಈ ಕ್ರಮ "ಸರ್ಜಿಕಲ್ ಸ್ಟ್ರೈಕ್" ಆಗುತ್ತದೋ, ಇಲ್ಲವೋ ? ಕೊನೆಪಕ್ಷ ಗುಂಡುಪಿನ್ನಿನ ಚುಚ್ಚುವಿಕೆ ಯಾದರೂ ಆಗಲಿ ಎಂದು ಆಶಿಸೋಣ.

**ಮ. ಶ್ರೀ. ಮುರಳಿ ಕೃಷ್ಣ**
ನಂ. ೩೮, ೩ನೇ ಅಡ್ಡರಸ್ತೆ, ರಾಜಾ ಗಾರ್ಡನಿಯಾ ಬಡಾವಣೆ
ತುರಹಳ್ಳಿ, ಸುಬ್ರಹ್ಮಣ್ಯಪುರ ಅಂಚೆ
ಬೆಂಗಳೂರು – ೫೬೦ ೦೬೧




## ಭಾರತದ ಧೀಮಂತ ವಿಜ್ಞಾನಿ ಪ್ರೊ॥ ಸತ್ಯೇಂದ್ರನಾಥ್ ಬೋಸ್

**(ಬದುಕು ಮತ್ತು ಸಾಧನೆ)**

*ಸಂಪಾದಕರು : ಸಿ. ಕೆ. ಮಜುಮ್ದಾರ್ ಇತರರು; ಕನ್ನಡಕ್ಕೆ : ಡಾ॥ ಎಂ. ಎಸ್. ಎಸ್. ಮೂರ್ತಿ*

**ಪುಟ : ೧೬೦** **ಬೆಲೆ : ರೂ. ೧೨೦**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

*ಒಬ್ಬ ಧೀಮಂತ ವ್ಯಕ್ತಿ ತನ್ನ ಅಲ್ಪಕಾಲದ ಬದುಕಿನಲ್ಲಿ ಏನೆಲ್ಲ ಸಾಧಿಸಬಹುದು ಎನ್ನುವುದಕ್ಕೆ ಹಲವು ವ್ಯಕ್ತಿಗಳು ಉದಾಹರಣೆಯಾಗಿ ನಮ್ಮ ಮುಂದೆಯೇ ಇದ್ದಾರೆ. ಅಂತಹ ಮಹಾನ್ ವ್ಯಕ್ತಿಗಳಲ್ಲಿ ಪ್ರೊ॥ ಸತ್ಯೇಂದ್ರನಾಥ್ ಬೋಸ್ ಕೂಡ ಒಬ್ಬರು. ಮಧ್ಯಮ ವರ್ಗದ ಬೆಂಗಾಲಿ ಕುಟುಂಬದಲ್ಲಿ ಜನಿಸಿದ ಬೋಸ್ ಅವರು ಭೌತವಿಜ್ಞಾನಕ್ಕೆ ನೀಡಿದ ಕೊಡುಗೆ ಅಪಾರ ಮತ್ತು ಮರೆಯಲಾಗದ್ದು. ಅವರು ಪಡೆದುಕೊಂಡಿದ್ದ ಜ್ಞಾನ ಎಷ್ಟೆಂದರೆ ಅವರು ಅನೇಕ ಉಚ್ಚ ಶ್ರೇಣಿಯ ಭೌತವಿಜ್ಞಾನ ಪ್ರಬಂಧಗಳನ್ನು ಇಂಗ್ಲಿಷ್, ಫ್ರೆಂಚ್, ಜರ್ಮನ್ ಮತ್ತು ಬೆಂಗಾಲಿ ಭಾಷೆಗಳಲ್ಲಿ ಪ್ರಕಟಿಸಿದ್ದರು. ಜೊತೆಗೆ ಐನ್‌ಸ್ಟೈನ್‌ರ ಸಾಪೇಕ್ಷತಾ ಸಿದ್ಧಾಂತದ ಪ್ರಬಂಧಗಳನ್ನು ಜರ್ಮನ್ ಭಾಷೆಯಿಂದ ಇಂಗ್ಲಿಷ್ ಭಾಷೆಗೆ ಅನುವಾದಿಸಿ ಪ್ರಕಟಿಸಿದರು. ಯುರೋಪ್‌ನಿಂದ ಹಿಂದಿರುಗಿದ ಅವರು ಢಾಕಾ ವಿಶ್ವವಿದ್ಯಾಲಯದಲ್ಲಿ ನಡೆಸಿದ ಭೌತವಿಜ್ಞಾನದ ಸಿದ್ಧಾಂತಗಳು ವಿಶ್ವವಿಖ್ಯಾತ ಭೌತವಿಜ್ಞಾನಿಗಳ ಜೊತೆಗೆ ಸರಿಸಮನಾಗಿ ನಿಂತಿವೆ. ಖ್ಯಾತ ವಿಜ್ಞಾನ ಇತಿಹಾಸಕಾರ ಅಲೆಕ್ಸಾಂಡರ್ ಪೈ, 'ಬೋಸ್ ಅವರ ಪ್ರಬಂಧ ಕ್ವಾಂಟಮ್ ಸಿದ್ಧಾಂತದ ನಾಲ್ಕು ಕ್ರಾಂತಿಕಾರಿ ಪ್ರಬಂಧಗಳಲ್ಲಿ ಕೊನೆಯದು' ಎಂದು ಹೇಳಿದ್ದಾರೆ. ಈ ಕ್ಷೇತ್ರದಲ್ಲಿ ಇಂದು ಬೋಸ್‌ರ ಕೊಡುಗೆಯನ್ನು ಬೋಸಾನ್ಸ್, ಬೋಸ್ ಸಂಖ್ಯಾಕಲನ ಮತ್ತು ಬೋಸ್–ಐನ್‌ಸ್ಟೈನ್ ಸಾಂದ್ರೀಕರಣ ಇತ್ಯಾದಿಯಾಗಿ ಗುರುತಿಸಲಾಗಿದೆ. ಇವರ ಆಸಕ್ತಿಗಳು ಭೌತವಿಜ್ಞಾನದ ಜೊತೆಗೆ ರಸಾಯನ, ಜೀವ ವಿಜ್ಞಾನ, ಸಾಹಿತ್ಯ, ಚಿತ್ರಕಲೆಗಳ ಜೊತೆಗೂ ಆವರಿಸಿಕೊಂಡಿತ್ತು. ಅಂತಹ ಮಹಾನ್ ವ್ಯಕ್ತಿಯ ಬದುಕು ಮತ್ತು ಸಾಧನೆಯನ್ನು ಈ ಕೃತಿಯಲ್ಲಿ ಚಿತ್ರಿಸಲಾಗಿದೆ.*




## ಬದುಕು ಮಾಯೆಯ ಆಟ (ಸಣ್ಣ ಕಥೆಗಳು)

*ಗಿರೀಶ ಜಕಾಪುರೆ*

**ಪುಟ : ೧೩೨**

**ಬೆಲೆ : ರೂ. ೮೫**

**ಶ್ರೀ ಸಿದ್ಧಲಿಂಗೇಶ್ವರ ಬುಕ್ ಡಿಪೊ ಮತ್ತು ಪ್ರಕಾಶನ,** ಕಲಬುರಗಿ

*ಕಥೆಗಾರರು ಲೋಕಾನುಭವಗಳನ್ನು ವಾಸ್ತವದ ಪ್ರತಿಕೃತಿಯಾಗಿ ತರುವುದಿಲ್ಲ. ಆ ಲೋಕಾನುಭವಗಳು ಕಥೆಗಾರರ ತಾತ್ವಿಕತೆಗೆ ತಕ್ಕಂತೆ ಮರುಸೃಷ್ಟಿಯಾಗಿಯೇ ಕಥೆಯೊಳಗೆ ಅಭಿವ್ಯಕ್ತಿಯಾಗುತ್ತವೆ. ಅದಕ್ಕೇ ಕಥೆಗಾರರಿಗೆ ಸಂಯಮ ಮತ್ತು ತನ್ಮಯತೆ ಇರಬೇಕಾಗಿರುವುದು ಅನಿವಾರ್ಯ. ಈ ಮಾತಿಗೆ ಪೂರಕವಾಗಿರುವಂತೆಯೇ ಕಥೆಗಾರ ಗಿರೀಶ ಜಕಾಪುರೆಯವರು, 'ಬದುಕು ಮಾಯೆಯ ಆಟ' ಸಂಕಲನದಲ್ಲಿರುವ ಕಥೆಗಳನ್ನು ರಚಿಸಿದ್ದಾರೆ. ತಾವಿರುವ ಪರಿಸರದಲ್ಲಿ ಆ ಸಂದರ್ಭದ ಸುತ್ತಲಿನ ವ್ಯವಸ್ಥೆಯಲ್ಲಿ ಅನುಭವಕ್ಕೆ ಬಂದ ಮನುಷ್ಯನ ವರ್ತನೆ, ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ ವಿದ್ಯಮಾನಗಳನ್ನೆಲ್ಲ ತಮ್ಮದೇ ಇನ್ನೊಂದು ಗ್ರಹಿಕೆಯ ನೆಲೆಯಲ್ಲಿ ಗ್ರಹಿಸಿ ಕಥೆಯಾಗಿಸಿದ್ದಾರೆ. ಮತ್ತು ಅದನ್ನೊಂದು ತಾತ್ವಿಕತೆಯ ನೆಲೆಗೆ ತರುವ ನಿಟ್ಟಿನಲ್ಲಿ ತಮ್ಮ ಅನುಭವಗಳಿಗೆ ಹೊಸ ರೂಪು ಕೊಟ್ಟಿದ್ದಾರೆ. ಈ ಸಂಕಲನದಲ್ಲಿರುವ ಬಹಳಷ್ಟು ಕಥೆಗಳಲ್ಲಿ ಜಾಗತೀಕರಣ, ನಗರೀಕರಣ ಮತ್ತು ಕೈಗಾರಿಕೀಕರಣ ಪ್ರಕ್ರಿಯೆಗಳೂ ಮನುಷ್ಯ ಬದುಕಿನಲ್ಲಿ ಕ್ಷಿಪ್ರಗತಿಯಲ್ಲಿ ಎಲ್ಲ ಮೂಲಗಳಿಂದಲೂ ತಂದೊಡ್ಡುತ್ತಿರುವ ಅಪಾಯವನ್ನು ಹಾಗೂ ಆಧುನಿಕ ಭೋಗ ಜಗತ್ತಿನಲ್ಲಿ ಮನುಷ್ಯ–ಮನುಷ್ಯ ಕಾರಣವಾಗಿ ಹುಟ್ಟಿಕೊಳ್ಳಬಹುದಾದ ಸಹಜ ಸಂಬಂಧಗಳು ಸರಳೀಕೃತಗೊಳ್ಳುವ ನೆಪದಲ್ಲಿ ಶಿಥಿಲಗೊಳ್ಳುವ ಮತ್ತು ಆ ಮೂಲಕವೇ ನಾಗರಿಕ ಸಮಾಜದಲ್ಲಿ ಮೌಲ್ಯಗಳು ಅಧಃಪತನವಾಗುತ್ತಿರುವ ಪರಿಯನ್ನು ಅನಾವರಣಮಾಡುತ್ತದೆ. ಈ ಕಾರಣವಾಗಿಯೇ ಇಲ್ಲಿನ ಕಥೆಗಳು ಓದುಗನನ್ನು ಸಹಜವಾಗಿ ಕಾಡುತ್ತವೆ ಹಾಗೂ ವಸ್ತು, ತಂತ್ರ, ಭಾಷೆ, ನಿರೂಪಣೆಯ ವಿಚಾರದಲ್ಲಿ ಮಹತ್ವದೆನಿಸುತ್ತವೆ.*




## ಸಮಕ್ಷಮ (ವಿಮರ್ಶಾ ಲೇಖನಗಳು)

*ಪಾರ್ವತಿ ಜಿ. ಐತಾಳ್*

**ಪುಟ : ೩೨೬** **ಬೆಲೆ : ರೂ. ೨೨೫**

**ಅನ್ನಪೂರ್ಣ ಪಬ್ಲಿಷಿಂಗ್ ಹೌಸ್,** ಬೆಂಗಳೂರು

*ಪಾರ್ವತಿ ಜಿ. ಐತಾಳ್ ಅವರು ಕಳೆದ ೧೫ ವರ್ಷಗಳಲ್ಲಿ ಕನ್ನಡದ ಹಲವು ನಿಯತಕಾಲಿಕೆಗಳಲ್ಲಿ ಪ್ರಕಟಿಸಿದ ವಿವಿಧ ಪ್ರಕಾರಗಳ ಲೇಖನಗಳನ್ನು ಇಲ್ಲಿ ಒಟ್ಟುಗೂಡಿಸಿ ಪ್ರಕಟಿಸಿದ್ದಾರೆ. ೩೨೬ ಪುಟಗಳ ಈ ಕೃತಿಯಲ್ಲಿ ಹಲವು ಭಾಗಗಳಿದ್ದು ಅವುಗಳನ್ನು ಚಿಂತನೆ, ಲಘುಬರಹ, ವ್ಯಕ್ತಿಚಿತ್ರಣ ಮತ್ತು ಸಂದರ್ಶನ, ಪುಸ್ತಕ ವಿಮರ್ಶೆ ಮತ್ತು ರಂಗಭೂಮಿ ಎಂದು ವಿಭಾಗಿಸಲಾಗಿದೆ. ಚಿಂತನೆಯ ಕೆಳಗೆ ಶಿಕ್ಷಣ, ಸಾಹಿತ್ಯ ಮತ್ತು ಸಾಂಸ್ಕೃತಿಕ ವಿಷಯಗಳಿಗೆ ಸಂಬಂಧಪಟ್ಟ ೧೮ ಲೇಖನಗಳಿದ್ದರೆ ಲಘುಬರಹದ ಕೆಳಗೆ ಕೇವಲ ೩ ಲೇಖನಗಳಿವೆ. ಪುಸ್ತಕ ವಿಮರ್ಶೆ ಕೆಳಗೆ ೪೯ ಪುಸ್ತಕಗಳ ವಿಮರ್ಶೆ ಇದ್ದು, ರಂಗಭೂಮಿ ಕೆಳಗೆ ೧೭ ನಾಟಕಗಳ ಬಗ್ಗೆ ಲೇಖನಗಳಿವೆ. ವ್ಯಕ್ತಿಚಿತ್ರಣ ಮತ್ತು ಸಂದರ್ಶನದ ಕೆಳಗೆ ೫ ವ್ಯಕ್ತಿಗಳ ಚಿತ್ರಣವಿದೆ. 'ಶಿಕ್ಷಣ–ಉದ್ಯೋಗಗಳ ಅವಕಾಶ ಮಹಿಳೆಗೆ ಸಿಕ್ಕಿದೆಯಾದರೂ ಸಂಪ್ರದಾಯವು ಅವಳ ಸುತ್ತ ರಚಿಸಿದ ಗೋಡೆಗಳೊಳಗಿನ ಉಸಿರುಗಟ್ಟಿಸುವ ವಾತಾವರಣದಿಂದ ಹೊರಬಂದು ನಿರಾಳವಾಗಲು ಪುರುಷ ಪ್ರಧಾನ ಸಮಾಜದ ಪೂರ್ವಗ್ರಹಗಳು ಅವಳನ್ನು ಬಿಟ್ಟಿಲ್ಲ. ಗೃಹಕೃತ್ಯ–ಉದ್ಯೋಗಗಳೆರಡನ್ನು ಒಟ್ಟೊಟ್ಟಿಗೆ ನಿಭಾಯಿಸಬೇಕಾದ ಅಸಹಾಯಕ ಸ್ಥಿತಿಯಲ್ಲಿ ಬರೆಯುವ ಪ್ರತಿಭೆ, ಉತ್ಸಾಹಗಳಿದ್ದರೂ ಸಮಯದ ಅಭಾವವು ಅವಳನ್ನು ನಲುಗಿಸುತ್ತಿದೆ' ಎನ್ನುವ ಪಾರ್ವತಿ ಅವರು ಸಾಕಷ್ಟು ಓದಿಕೊಂಡಿದ್ದು ಹಲವು ಪ್ರಕಾರಗಳಲ್ಲಿ ಜ್ಞಾನ ಪಡೆದುಕೊಂಡು ಬರೆದಿರುವುದನ್ನು ಇಲ್ಲಿ ನೋಡಬಹುದಾಗಿದೆ.*

*– **ಡಾ॥ ಎಂ. ವೆಂಕಟಸ್ವಾಮಿ,** ಬನ್ನೇರುಘಟ್ಟ ರಸ್ತೆ, ಬೆಂಗಳೂರು – ೬೮*




## ಸುಡುಗಾಡ ಕಾಯ (ಕಥಾ ಸಂಕಲನ)

*ಅನುಬೆಳ್ಳೆ*

**ಪುಟ : ೧೬೮** **ಬೆಲೆ : ರೂ. ೧೦೦**

**ದೇಸಿ ಪುಸ್ತಕ,** ಬೆಂಗಳೂರು

*'ಸುಡುಗಾಡ ಕಾಯ'– ಅನುಬೆಳ್ಳೆಯವರ ಇತ್ತೀಚಿನ ಕಥಾ ಸಂಕಲನ. ಅನುಬೆಳ್ಳೆಯವರು ಪ್ರಸ್ತುತ ಸಂದರ್ಭದ ತಮ್ಮ ಸುತ್ತಲಿನ ಲೋಕದಲ್ಲಿನ ಕಣ್ಣಮುಂದಿನ ವಾಸ್ತವವನ್ನು ಓದುಗನನ್ನು ಆರ್ದ್ರವಾಗಿ ತಟ್ಟುವಂತೆ ಕಥೆಯಾಗಿಸುವ ಕಲೆಯನ್ನು ರೂಢಿಸಿಕೊಂಡವರು. ಪ್ರಸ್ತುತ ಈ ಸಂಕಲನದಲ್ಲಿನ ಕಥೆಗಳು ಮನುಷ್ಯನ ದುರಾಶೆಯ ದೆಸೆಯಿಂದಾಗಿಯೇ ಮಾನವೀಯ ಸಂಬಂಧಗಳು ಶಿಥಿಲಗೊಳ್ಳುತ್ತಿರುವ ಪರಿಯನ್ನು, ಕಾಲಾಂತರದಲ್ಲಿ ಮನುಷ್ಯನ ಮನೋಸ್ಥಿತಿಯಲ್ಲಿ ಉಂಟಾಗುವ ಬದಲಾವಣೆಯ ಹಿಂದಿನ ಕಾರಣಗಳನ್ನು, ಜಾಗತೀಕರಣ ಪ್ರಕ್ರಿಯೆಯಿಂದಾಗಿ ಪರಂಪರಾಗತವಾಗಿ ಬಂದ ನಮ್ಮ ಸಂಸ್ಕೃತಿ, ಸಂಪ್ರದಾಯ, ಜೀವನ ಶೈಲಿಯಲ್ಲಿ ಉಂಟಾಗಿರಬಹುದಾದ ಬದಲಾವಣೆಗಳನ್ನು ಶೋಧಿಸುತ್ತವೆ. ಜೊತೆಗೆ, ಆಧುನಿಕ ಜಗತ್ತು ಮನುಷ್ಯನಿಗಾಗಿ ಸೃಷ್ಟಿಸಿರುವ ಅನೇಕ ಅವಕಾಶಗಳನ್ನು ಮತ್ತು ಸವಲತ್ತುಗಳನ್ನು ಮೀರಿ ತಂದೊಡ್ಡಿರುವ ಅಪಾಯಗಳೇ ಹೆಚ್ಚು ಎಂಬರ್ಥವನ್ನು ಸಹ ಇಲ್ಲಿನ ಕಥೆಗಳು ಧ್ವನಿಸುತ್ತವೆ. ತಾನು ಕಂಡುಂಡ ಲೋಕಾನುಭವಗಳನ್ನು ಕಥೆಗಳಲ್ಲಿ ಮರುಸೃಷ್ಟಿಸುವ ಬಗೆಯನ್ನು ಅನುಬೆಳ್ಳೆಯವರು ಅರಿತಿರುವುದರಿಂದಲೇ ಈ ಸಂಕಲನದಲ್ಲಿನ ಕಥೆಗಳು ಓದುಗನಿಗೆ ಹೆಚ್ಚೆಚ್ಚು ಆಪ್ತವಾಗುತ್ತವೆ.*

*– **ಕಲ್ಲೇಶ್ ಕುಂಬಾರ್,** ಹಾರೂಗೇರಿ, ಬೆಳಗಾವಿ*

# ಪ್ರಾರ್ಥನೆಯ ನಾಯಕ ಯಾರು?

ಎನ್. ಬೋರಲಿಂಗಯ್ಯ

ನೀರಿನ ಆವಿಯಿಂದ ತುಂಬಿಕೊಂಡಿರುವ ಗಾಳಿಯ ಬೆಟ್ಟ ಘನಿಸಿ ಮೋಡವಾಗುವುದು ಯಾರಿಗೆ ತಾನೆ ತಿಳಿದಿಲ್ಲ? ಆ ಮೋಡವೇ ಇಲ್ಲಿ ಧಾತುವಾಗಿ ದುಡುಕಿ ಬಗೆವುದು ನೆಲದ ತೊಡೆಯ. ಇಲ್ಲಿ ಕವಿ ಭೂಮಿಯನ್ನು ಹಸಿರಾಗಿಸುತ್ತಿರುವ ಅಥವಾ ಮುಳ್ಳು ಹುಲ್ಲುಗಳನ್ನು ವಿವಶಗೊಳಿಸುತ್ತಿರುವ ಮೋಡದ ರೇತೋ ಬಿಂದುರೂಪಿ ಮಳೆಯ ಪರಿಣಾಮವನ್ನು ಪರಿಣಾಮಕಾರಿಯಾಗಿಯೇ ಪ್ರತಿಮೀಕರಿಸುತ್ತಿದ್ದಾರೆ. ಇಲ್ಲಿ ಗಮನಿಸಬೇಕಾದ ಒಂದು ವರ್ತುಲವೆಂದರೆ ಆವಿಯಿಂದ ತುಂಬಿದ ಗಾಳಿಯ ಬೆಟ್ಟ ಘನಿಸಿ ಆದ ಮೋಡ ಸುರಿಸಿದ ದ್ರಾವಣ ಭೂಮಿಯ ಸಕಲ ಸೃಷ್ಟಿಗೂ ಇದು ಮೂಲ. ಈ ಮೂಲಕ್ಕೆ ಸ್ಪಷ್ಟ ಕಾರಣ – ಮುಲಾಜೇ ಇಲ್ಲ – ಸೂರ್ಯ. ಇದು ನೆಲ ಮತ್ತು ನೇಸರಿನ ಸಂಬಂಧವನ್ನು ಸ್ಪಷ್ಟವಾಗಿಯೇ ಹೇಳುತ್ತಿದೆಯಲ್ಲವೆ?

ಸಾಮಾನ್ಯವಾಗಿ ಎಂ. ಗೋಪಾಲಕೃಷ್ಣ ಅಡಿಗರ ಕಾವ್ಯ ಕುರಿತ ಗಂಭೀರ ವಿಮರ್ಶಕರಲ್ಲಿ ಯಾರೊಬ್ಬರೂ 'ಭೂಮಿಗೀತ' ಕವನ ಸಂಕಲನದಲ್ಲಿರುವ 'ಪ್ರಾರ್ಥನೆ' ಎಂಬ ಕವನವನ್ನು ಕುರಿತು ಏನಾದರೊಂದನ್ನು ಹೇಳದೆ ಬಿಟ್ಟಂತಿಲ್ಲ. ಅದನ್ನು ಅಡಿಗರ ಕಾವ್ಯಜೀವನದ 'ಪ್ರಣಾಳಿಕೆ' ಎಂಬಂತೆ ಕೂಡ ಗ್ರಹಿಸಿದವರಿದ್ದಾರೆ. ಈ ಕವನದಲ್ಲಿ ಕವಿ ಮನುಷ್ಯ (ಪ್ರಾಣಿ) ಜೀವನದ ಮೂರು ಮುಖ್ಯ ಅನಿವಾರ್ಯ ಸಂಗತಿಗಳ ಮೇಲೆ ದೃಷ್ಟಿ ಹಾಯಿಸಿದ್ದಾರೆ. ಭಯ–ಆಹಾರ–ರತಿ ಈ ಮೂರರ ಜತೆಗೆ ನಿದ್ರೆಯೂ ಕೂಡಿಕೊಂಡಿದ್ದಿದ್ದರೆ ಪ್ರಾಣಿ ಪ್ರವೃತ್ತಿಗಳನ್ನು ಸಮೀಕರಿಸಿದ್ದ ಸಂಸ್ಕೃತ ಸೂತ್ರ ಎದುರಿಗೆ ನಿಲ್ಲುತ್ತಿತ್ತು.

ಇರಲಿ, ಈ ಮೂರೂ ವಿಚಾರಗಳು ಕವನದಲ್ಲಿ ಕ್ರಮವಾಗಿ ಅಭಿವ್ಯಕ್ತಿಗೊಂಡಿರುವುದು ಮಾತ್ರವಲ್ಲ, ಗಂಭೀರವಾಗಿಯೂ ಚರ್ಚಿತವಾಗಿವೆ. ಈ ವಿವರಗಳನ್ನು ಕುರಿತು ಅನೇಕರು ಅನೇಕ ಬಗೆಯ ವ್ಯಾಖ್ಯಾನ ಮತ್ತು ವಿಮರ್ಶೆಗಳನ್ನು ಓದುಗರ ಮುಂದಿಟ್ಟಿದ್ದಾರೆ. ಅವುಗಳನ್ನು ಕುರಿತು ನಾನೀಗ ಏನನ್ನೂ ಹೇಳಲು ಹೋಗುವುದಿಲ್ಲ. ಆದರೆ ಅವರಲ್ಲಿ ಯಾರೊಬ್ಬರೂ ಗಂಭೀರವಾಗಿ ಗಮನಿಸದಿರುವ ಒಂದೆರಡು ವಿಚಾರಗಳ ಕಡೆಗೆ ನಿಮ್ಮ ಗಮನ ಸೆಳೆಯಲು ಪ್ರಯತ್ನಿಸುತ್ತೇನೆ.

ಕವನ ಆರಂಭವಾಗುವುದೇ 'ಪ್ರಭೂ' ಎಂಬ ಸಂಬೋಧನೆಯೊಡನೆ. ಕವಿಯೂ ಅಲ್ಲದ, ಸಹೃದಯನೂ ಅಲ್ಲದ ಈ ಪ್ರಭೂ ಯಾರು? ತಮ್ಮ ಕಾವ್ಯ ವಿಸ್ತಾರದಲ್ಲಿ ಧೀರತನವನ್ನೂ, ದಿಟ್ಟತನವನ್ನೂ ಎಲ್ಲಿಯೂ ಬಿಟ್ಟುಕೊಡದ ಅಡಿಗರು 'ಪ್ರಭೂ' ಎಂದು ಕರೆದಿರುವುದರ ಔಚಿತ್ಯ ಏನು? ಈ ಪ್ರಶ್ನೆಗೆ ಸರಿಯಾದ ಉತ್ತರ ದೊರಕಿಸಿಕೊಂಡರೆ ಕವನವನ್ನು ಇನ್ನೂ ಹೆಚ್ಚು ನೇರನೇರ ಎದುರಾಗುವುದರ ಮೂಲಕ ಮತ್ತಷ್ಟು ತಾತ್ವಿಕ ಚರ್ಚೆಗೆ ಇಂಬು ದೊರೆಯುತ್ತದೇನೋ ಎಂಬುದು ನನ್ನ ಗ್ರಹಿಕೆ.

ಪ್ರಭೂ,
*ಪರಾಕು ಪಂಪನ್ನೊತ್ತಿಯೊತ್ತಿ ನಡ ಬಗ್ಗಿರುವ*
*ಬೊಗಳು ಸನ್ನಿಯ ಹೊಗಳುಭಟ್ಟ ಖಂಡಿತ ಅಲ್ಲ.*

– ಇದೇ ರೀತಿಯ ಮೂರು 'ಅಲ್ಲ'ಗಳು ಮುಂದಿನ ಸಾಲುಗಳ ಪ್ರಾರ್ಥನೆಯಲ್ಲಿ ಕಾಣಿಸಿಕೊಂಡರೂ ಈ 'ಪ್ರಭೂ' ಯಾರೆಂಬುದಕ್ಕೆ ಯಾವ ಸೂಚನೆಗಳೂ ಅಲ್ಲಿ ಸಿಗುವುದಿಲ್ಲ. ಈ 'ಅಲ್ಲ'ಗಳು ಕವಿಯ ನಿರ್ಭೀತಿಯ ಸಕಾರಾತ್ಮಕ ಅರ್ಥವನ್ನು ವಾಚ್ಯವಾಗಿ ಹೇಳುತ್ತಿರುವ ಸಂದರ್ಭದಲ್ಲಿಯೇ ಸಮಾಜದ 'ಬೊಗಳುಸನ್ನಿಯ ಹೊಗಳುಭಟ್ಟರ ಕಡೆಗೂ ಸೂಚ್ಯವಾಗಿ ಬೆಳಕು ಹಾಯಿಸುತ್ತದೆ.'

ಇಲ್ಲಿ ಬರುವ 'ಪ್ರಭೂ' ಕೇವಲ ಕವಿಯ ಆತ್ಮನಿವೇದನೆಯನ್ನು ಕೇಳಿಸಿಕೊಂಡು ಸುಮ್ಮನಿರುವಂತಿಲ್ಲ. ಕವಿಯೇ ಹೇಳುವ ಕೆಲವು ಕೆಲಸಗಳನ್ನು ಕೈಗೂಡಿಸಿಕೊಡುವ ಕಿಂಕರನು ಆಗಬೇಕಾಗಿದೆ. ಆ ಕೈಂಕರ್ಯಗಳೇನು?

೧. *ವಾಸಿ ಮಾಡಯ್ಯ ಈ ಜಲೋದರದ ಜಡ್ಡ*
೨. *ಕಮರು ತೇಗಿನ ಕಪಿಲೆ ಹೊಡೆದು ಹಗಲೂ ಇರುಳು*
*ತೇಗಿಗೊಂದು ಅಮೋಘ ಸ್ಫೂರ್ತಿಗೀತವ ಕರೆವ*
*ರೋಗದ ಫಸಲನಾದಷ್ಟು ಸವರೋ ತಂದೆ!*
೩. *ತಿಂದದ್ದು ಸರಿಯಾಗಿ ರಕ್ತವಾಗುವ ಹಾಗೆ*
*ಅನುಗ್ರಹಿಸು; ಅರಗದಂಥ ಕಚ್ಚಾ ಗಾಳಿಗೀಳುಗಳ*
*ಕಾಗದದ ಮೇಲೆಲ್ಲ ಕಾರಿಕೊಳ್ಳದ ಹಾಗೆ*
*ಏರ್ಪಡಿಸು ಸಹಜ ಹೊರ ದಾರಿಗಳು:*

ಆಹಾರಕ್ಕೆ ಸಂಬಂಧಿಸಿದಂತೆ ಹೀಗೆಯೇ ಇನ್ನು ಕೆಲವು ಮಾತುಗಳು ಮುಂದುವರಿಯುತ್ತವೆ. ರತಿಸುಖಕ್ಕೆ ಸಂಬಂಧಿಸಿದಂತೆ ಸ್ವಪ್ನಸ್ಖಲನ, ಮುಷ್ಟಿಮೈಥುನ ಖಂಡಿತ ಬೇಡ – ಅದಕ್ಕೆ ಬದಲು,

೪. *ಕಳುಹಿಸಯ್ಯ ಬಳಿಗೆ ಕೃಪೆ ತಳೆದು ಆಗಾಗ್ಗೆ*
*ವಾಸ್ತವದ ಹೆಣ್ಣುಗಳ, ಸಹಜ ತೊಡೆಗಳ, ಆತ್ಮ*
*ಹೊಕ್ಕು ತಿಕ್ಕಲು ತಕ್ಕ ಸುಕ್ಕಿರದ ಹೊಸ ತೊಗಲುಗಳ*

– ಕವನದುದ್ದಕ್ಕೂ ಕವಿ ಈ ಬಗೆಯ ಹೊಣೆಗಾರಿಕೆಯನ್ನು ತನ್ನ ಪ್ರಭುವಿನ ಮೇಲೆ ಹೊರಿಸುತ್ತಿದ್ದರೂ ಈ 'ಪ್ರಭೂ' ಯಾರು ಎಂಬ ಸೂಚನೆಯನ್ನು ಮಾತ್ರ ಕವಿ ಅಥವಾ ಕವನ ಬಿಟ್ಟುಕೊಡುವಂತೆ ಮೇಲುನೋಟಕ್ಕೆ ಕಾಣುತ್ತಿಲ್ಲ. ಆದರೆ,

೫. *ಹೊರಗೆ ಬೀಸಲೆದೊಳಕ್ಕೆ ಹಿಮ್ಮೆಟ್ಟಿದಾಗ್ಗೆಲ್ಲ*
*ಪ್ರೇತಾತ್ಮಗಳ ಗೆರಿಲ್ಲಾ ಪಡೆಯ ಕಳಿಸದಿರು*

– ಎಂಬ ನಕಾರಾತ್ಮಕ ಕೋರಿಕೆಯ ಈ ಸಂಭೋಗ ಶೃಂಗಾರ ದೃಶ್ಯದಲ್ಲಿ ಈ ಪ್ರಭೂ ಯಾರಿರಬಹುದೆಂದು ಊಹಿಸುವುದಕ್ಕೆ ಅಡಿಗರ ಬೇರೊಂದು ಕವನ 'ಕೆಂದಾವರೆ'ಯ ಇಂಥದೇ ಒಂದು ಸಂಭೋಗ ಶೃಂಗಾರ ನೆರವಿಗೆ ಬರುವಂತೆ ನನಗೆ ಕಾಣಿಸುತ್ತದೆ. ಆ ಕವನದಲ್ಲಿ ಅಡಿಗರು ಗಂಧವತಿ–ಪುಷ್ಪವತಿ–ಫಲವತಿ ಈ ಮೂರೂ ಶೃಂಗಾರಾಶಯಗಳನ್ನು ಮೂರು ಪದ್ಯಗಳ ಮೂಲಕ ಕ್ರಮವಾಗಿ ಚಿತ್ರಿಸಿದ್ದಾರೆ. ಅಲ್ಲಿಯ ಮೂರನೆಯ ಆಶಯದ ಈ ಉದಾಹರಣೆಯನ್ನು ಗಮನಿಸಿ:

*ತನ್ನ ಕೈಕೈಯೊಳು ಒಲವು ಬಲೆಗಳನ್ನಿಟ್ಟು*
*ನೀರಿನಾಳದೊಳವನು ಬಿಂಬಿಸುವನು;*
*ಮೈಮರೆತುದಾ ಪದ್ಮ.*

ಪರಸ್ಪರ ವಿರುದ್ಧ ಮನಃಸ್ಥಿತಿಯ ಒಂದೇ ಕ್ರಿಯೆ ಈ ಎರಡೂ ಉದಾಹರಣೆಗಳಲ್ಲಿ

ರೂಪುಗೊಂಡಿರುವುದನ್ನು ನಾವು ಗಮನಿಸಬಹುದು. 'ಕೆಂದಾವರೆ'ಯ ಈ ಉದಾಹರಣೆಯಲ್ಲಿ ಸ್ಪಷ್ಟವಾಗಿ ಕ್ರಿಯಾಶೀಲನಾಗಿರುವುದು ಸೂರ್ಯ. ಕಮಲ–ಸೂರ್ಯರ ನಡುವಣ ಸಂಬಂಧವೇ ಇದನ್ನು ಅನುಮಾನಕ್ಕೆಡೆಯಿಲ್ಲದಂತೆ ಸ್ಪಷ್ಟಪಡಿಸುತ್ತದೆ. ಅದೇ 'ಸೂರ್ಯನೇ' ಈ 'ಪ್ರಭೂ' ಯಾಕಾಗಿರಬಾರದು ?

ಅಡಿಗರ ಮತ್ತೊಂದು ಕವನ 'ಸ್ವಾತಂತ್ರ್ಯ: ೧೯೫೪ರ ಪಾಠ'ದ ಈ ಕೆಳಗಿನ ಸಾಲುಗಳನ್ನೂ ಇದಕ್ಕೆ ಪೂರಕವಾಗಿ ಗಮನಿಸಿ :

*ಬೆಳೆಯಬಿಡು ಮರವ ಬೀಸಾಗಿ, ಒಂದೇ ಚದರ*
*ಗಜ ಸಾಕು. ಸುತ್ತು ಬೇಕೆ*
*ಬೇಲಿ ? ಬಿಗಿ, ಊರ್ಧ್ವಮುಖಿ*
*ಏರಲಿರಲಾಕಾಶದಲ್ಲಿ ತಳಿರ ತುರಾಯಿ ತಕ್ಕಷ್ಟು ತಾವು*
*ತನ್ನ ಪಾಡಿಗೆ ತಾನೆ ಶಾಖೆ ಹರಡಿ*
*ನೇಸರಿನ ಲಗ್ಗೆ ಹಾಸಿಗೆಗೆ, ಗರ್ಭಾದಾನ*
*ಜರುಗಿ ಹೀಚುಗಳ ಹೊರೆ*
*ತೂಗುವುದು ತೊಟ್ಟಿಲಲಿ ಪುಟ್ಟ ಹಸುಳೆ*

– ಇದಕ್ಕೆ ವ್ಯಾಖ್ಯಾನ ಅನಾವಶ್ಯಕ. ಇಲ್ಲಿ 'ನೇಸರಿನ ಲಗ್ಗೆ ಹಾಸಿಗೆಗೆ' ಎಂಬ ಮಾತು ನನಗೆ ಮುಖ್ಯ. ಭೂಮಿಯ ಮೇಲಿನ ಯಾವುದೇ ಫಲವಂತಿಕೆ ನೇಸರನಿಂದಲ್ಲದೆ ಬೇರೆಯಲ್ಲ ಎಂಬುದು ಇಲ್ಲಿ ಸ್ಪಷ್ಟ. ಪ್ರಾರ್ಥನೆಯಲ್ಲಿ ಪರಂಗಿರೋಗ ಕಾಣಿಸಿಕೊಂಡರೆ ಇಲ್ಲಿ ಪರಂಗಿ ಕಸಿ ಕಾಣಿಸಿಕೊಳ್ಳುತ್ತಿದೆ. ಇದು ಕೂಡಾ ಸಹಜವಾಗಿಯೇ ಇದೆ. ಪಾಶ್ಚಾತ್ಯ ಸಂಸ್ಕೃತಿಯನ್ನು ಕುರಿತ ಎಚ್ಚರಿಕೆಯ ಮಾತು ಕೂಡ. ಪ್ರಕೃತಿಯ ತತ್ವ ಕುರಿತು ಮಾತಾಡುತ್ತ ಮಾತಾಡುತ್ತಲೇ ಇದ್ದಕ್ಕಿದ್ದಂತೆ 'ತೂಗುವುದು ತೊಟ್ಟಿಲಲಿ. ಪುಟ್ಟ ಹಸುಳೆ' ಎಂಬಂಥ ಸುಂದರ ಪ್ರತಿಮೆಯನ್ನು ಎದುರು ನಿಲ್ಲಿಸಿ ಪ್ರಕೃತಿ ಮತ್ತು ಮಾನವ ಪ್ರಕೃತಿಯ ಒಳ ಸಂಬಂಧವನ್ನು ಅರ್ಥೈಸಲು ಪ್ರಯತ್ನಿಸುತ್ತಾರೆ. ಇದು ಭೂಮಿಗೀತದಂಥ ಸಂಕೀರ್ಣತೆ ಇನ್ನೂ ದಟ್ಟವಾಗಿದೆ.

ಅಡಿಗರ ಕಾವ್ಯ ವಿಸ್ತಾರದಲ್ಲಿ ಭೂಮಿ ಮತ್ತು ಸೂರ್ಯಸಂಬಂಧ ಕುರಿತ ಸಂಕೇತ, ಪ್ರತೀಕ ಮತ್ತು ಪ್ರತಿಮೆಗಳು ನೂರಾರು ಸಂಖ್ಯೆಯಲ್ಲಿ ದೊರೆಯುತ್ತವೆ. ಅಡಿಗರ ಆಲೋಚನೆ ಮತ್ತು ಚಿಂತನ ಕ್ರಮಗಳನ್ನು ಒಟ್ಟಾರೆಯಾಗಿ ನಿರ್ಣಯಿಸುವ ಸುವಿಖ್ಯಾತ ಕವನ 'ಪ್ರಾರ್ಥನೆ'. ಆದ್ದರಿಂದಲೇ ಇದು ಅಡಿಗರ ಸೃಜನಶೀಲತೆಯ ಪ್ರಣಾಳಿಕೆಯಂತೆ ಕಂಡಿರಬಹುದು.

ಇನ್ನು ನಮ್ಮ ಮುಖ್ಯ ಕವನ ಪ್ರಾರ್ಥನೆಯಲ್ಲಿಯೇ ಇದನ್ನು ಸ್ಪಷ್ಟೀಕರಿಸುವ ಮತ್ತೇನಾದರೂ ಪೂರಕ ಸುಳುಹುಗಳು ದೊರೆಯುತ್ತದೆಯೋ ಹೇಗೆ ಎಂದು ನೋಡುವುದು ಕೂಡ ವಿಮರ್ಶೆಯ ಹೊಣೆ.

ಈ ಮುಂದಿನ ಎರಡು ಉದಾಹರಣೆಗಳನ್ನು ಗಮನಿಸಿ :

*೧. ...ನಿನ್ನ ಗಾಳಿಯ ಬೆಟ್ಟ*
*ಘನಿಸಿ ಆಗುವ ಧಾತು ದುಡುಕಿ ಬಗೆವುದು ನೆಲದ*
*ತೊಡೆಯ, ಚೆಲ್ಲುವುದೆಲ್ಲ ಕಡೆಯು, ದ್ರಾವಣ ಸುಖಕೆ,*
*ವಿವಶ ಮುಳ್ಳೂ, ಹುಲ್ಲು.*

*೨. ನಿನ್ನಂತೆ ಊರ್ಧ್ವರೇತಸ್ಯನಾಗೊಬ್ಬಂಟಿ*
*ಮೇಲು ಮಾಳಿಗೆಯ ಕಿರುಕೋಣೆಯ ಮೈಮರವನ್ನೂ*
*ತಕ್ಕ ತೊಡೆ ನಡುವೆ ಧಾತು–ಸ್ಖಲನದೆಚ್ಚರವ (ಕಲಿಸು)*

– ಈ ಎರಡೂ ಉದಾಹರಣೆಗಳಲ್ಲಿ ಯಾರನ್ನೋ ಕುರಿತು ಮಾತನಾಡುತ್ತಿರುವುದು ಸ್ಪಷ್ಟವಾಗಿಯೇ ಇದೆ. ನೀರಿನ ಆವಿಯಿಂದ ತುಂಬಿಕೊಂಡಿರುವ ಗಾಳಿಯ ಬೆಟ್ಟ ಘನಿಸಿ ಮೋಡವಾಗುವುದು ಯಾರಿಗೆ ತಾನೆ ತಿಳಿದಿಲ್ಲ ? ಆ ಮೋಡವೇ ಇಲ್ಲಿ ಧಾತುವಾಗಿ ದುಡುಕಿ ಬಗೆವುದು ನೆಲದ ತೊಡೆಯ. ಇಲ್ಲಿ ಕವಿ ಭೂಮಿಯನ್ನು ಹಸಿರಾಗಿಸುತ್ತಿರುವ ಅಥವಾ ಮುಳ್ಳು ಹುಲ್ಲುಗಳನ್ನು ವಿವಶಗೊಳಿಸುತ್ತಿರುವ ಮೋಡದ ರೇತೋ ಬಿಂದುರೂಪಿ ಮಳೆಯ ಪರಿಣಾಮವನ್ನು ಪರಿಣಾಮಕಾರಿಯಾಗಿಯೇ ಪ್ರತಿಮೀಕರಿಸುತ್ತಿದ್ದಾರೆ. ಇಲ್ಲಿ ಗಮನಿಸಬೇಕಾದ ಒಂದು ವರ್ತುಲವೆಂದರೆ ಆವಿಯಿಂದ ತುಂಬಿದ ಗಾಳಿಯ ಬೆಟ್ಟ ಘನಿಸಿ ಆದ ಮೋಡ ಸುರಿಸಿದ ದ್ರಾವಣ ಭೂಮಿಯ ಸಕಲ ಸೃಷ್ಟಿಗೂ ಇದು ಮೂಲ. ಈ ಮೂಲಕ್ಕೆ ಸ್ಪಷ್ಟ ಕಾರಣ – ಮುಲಾಜೇ ಇಲ್ಲ – ಸೂರ್ಯ. ಇದು ನೆಲ ಮತ್ತು ನೇಸರಿನ ಸಂಬಂಧವನ್ನು ಸ್ಪಷ್ಟವಾಗಿಯೇ ಹೇಳುತ್ತಿದೆಯಲ್ಲವೆ ?

ಇನ್ನು, ಎರಡನೆಯ ಉದಾಹರಣೆಯಲ್ಲಿ ಇದುವರೆಗೆ ಮೈಪಡೆದಿದ್ದ ರತಿ–ಮನ್ಮಥ ಕ್ರಿಯೆಯ ವಿಡಂಬನೆಯ ಶೈಲಿಯ ಜಾಗದಲ್ಲಿ ಸಹಜವೂ ಸಕಾರಾತ್ಮಕವೂ ಆದ ಆಧ್ಯಾತ್ಮಿಕ ರತಿಕ್ರಿಯೆ ಎದುರಾಗುತ್ತದೆ. ಲಿಂಗಾಂಗ ಸಂಬಂಧದಲ್ಲಿ ನಡೆಯುವ ಲೈಂಗಿಕ ಕ್ರಿಯೆಯನ್ನು 'ಆತ್ಮರತಿ' ಸುಖಕ್ಕೆ ವರ್ಗಾಯಿಸಿಕೊಳ್ಳುವ ಪರಂಪರಾಗತ ವಿಧಾನವಿದು. 'ಆತ್ಮ ಹೊಕ್ಕು ತಿಕ್ಕಲು ತಕ್ಕ ಸುಕ್ಕಿರದ ಹೊಸ ತೊಗಲುಗಳ' ಈ ಹಿಂದೆಯೂ ಬಂದಿದ್ದ ಈ ಮಾತು ಕೂಡ ಇದನ್ನು ಸಮರ್ಥಿಸುತ್ತದೆ. ಪ್ರಾರ್ಥನೆ ಕವನದ ಕೇಂದ್ರ 'ಆತ್ಮರತಿ ಸುಖ' ಅಥವಾ 'ಮೇಲು ಮಾಳಿಗೆಯ ಕಿರುಕೋಣೆಯ ಮೈಮರೆವು', ಅಡಿಗರಿಗೆ ಪ್ರಿಯವಾದ ಭಾಷೆಯಲ್ಲಿಯೇ ಹೇಳುವುದಾದರೆ, 'ಸಹಸ್ರಾರ' 'ಅಂಚೆ ತಲುಪೀತೆ ಸಹಸ್ರಾರಕೆ' ಎಂಬ ಮಾತು ಕೂಡ ಈ ಗಳಿಗೆಗೆ ನೆನಪಾಗದಿರದು.

ಈ ಎರಡೂ ಉದಾಹರಣೆಗಳಲ್ಲಿರುವ ಮತ್ತೊಂದು ಮುಖ್ಯಾಂಶವನ್ನು ನಾವು ಗಮನಿಸಬೇಕು. ಮೊದಲನೆಯದರಲ್ಲಿ ಎರಡಿದ್ದದ್ದೊಂದಾಗುತ್ತಿರುವುದನ್ನು ಕವಿ ಗುರುತಿಸುತ್ತಿದ್ದಾರೆ. ಎರಡನೆಯದರಲ್ಲಿ ಒಂದೊದ್ದಿದುದೊಂದಾಗುತ್ತಿರುವುದನ್ನು 'ಕಾಣು'ತ್ತಿದ್ದಾರೆ. ಊರ್ಧ್ವರೇತಸ್ಯನಾಗೊಬ್ಬಂಟಿ ಮೇಲುಮಾಳಿಗೆಯ ಕಿರುಕೋಣೆಯಲ್ಲಿ ಮೈಮರೆಯಿಸುವ ರತಿಸುಖ ಇದು. ಮೊದಲಿನೆಲ್ಲ ಉದಾಹರಣೆಗಳಲ್ಲಿ ರೇತಸ್ಸು ಕೆಳಮೊಗವಾಗಿ ಚಲಿಸಿದರೆ, ಇಲ್ಲಿ ಮಾತ್ರ ಅದು ಮೇಲ್ಮೊಗವಾಗಿ ಚಲಿಸುತ್ತದೆ. ಅದರ ಗುರಿ ನಾಭಿ ಹೃದಯಾದಿ ನಾಲ್ಕು ಘಟ್ಟಗಳನ್ನು ದಾಟಿಕೊಂಡು ಮಿದುಳನ್ನು ತಲಪುವುದು. ಅದೇ ಸಹಸ್ರಾರದ ನೆಲೆವನೆ. ಅಲ್ಲಿಯೆ ಸಕಲ ತತ್ತ್ವ ಸೃಷ್ಟಿಯ ಅಗ್ನಿಕುಂಡ ಬೆಳಗುತ್ತಿರುವುದು. ಇದು ಈ ಕವಿ ಈ ಕವನದ ಮೂಲಕ ಕಂಡರಿಸಿದ ದರ್ಶನ. ಆದ್ದರಿಂದ ಭೂಮಿಯ ಮೇಲಿನ ಮನುಷ್ಯ ತಲೆಯನ್ನು ಜೋಪಾನವಾಗಿ ಕಾಯ್ದುಕೊಳ್ಳಬೇಕಾಗಿದೆ. ಅದು ನಮ್ಮ ಎಲ್ಲ ಇಂದ್ರಿಯಗಳ ಆವಾಸಸ್ಥಾನ ಕೂಡ. ಅಲ್ಲಮಪ್ರಭುವಿನ ವಚನದ ಒಂದು ತುಣುಕು ಈ ಗಳಿಗೆಗೆ ನೆನಪಾಗುತ್ತಿದೆ.

*ಉನ್ಮನಿಜ್ಯೋತಿ ಬ್ರಹ್ಮರಂಧ್ರದ ಮೇಲೆ, ಸಹಸ್ರದಳ ಪದ್ಮ*
*ಅಲ್ಲಿ ಅಮೃತವಿಹುದು, ಅಲ್ಲಿ 'ಓಂ' ಕಾರ ಸ್ವರೂಪನಾಗಿ*
*ಗುಹೇಶ್ವರಲಿಂಗವು ಸದಾ ಸನ್ನಿಹಿತನು.*

– ಈ ನಿಜದ ನೆಲೆಯಿಂದ ನೋಡಿದಾಗ ಗೋಪಾಲಕೃಷ್ಣ ಅಡಿಗರು ಈ ಕವನದ ಮೂಲಕ ಹೇಳಲು ಬಯಸಿದ್ದು ಇದುವರೆಗಿನ ನಮ್ಮ ವಿಮರ್ಶಕರು ಢಾಳಾಗಿ ಗುರುತಿಸಿರುವ ಭಯ–ಆಹಾರ–ರತಿಗೆ ಸಂಬಂಧಿಸಿದ ವಾಚ್ಯ ವಿಚಾರಗಳನ್ನಲ್ಲ ಎಂಬುದು ಸ್ಪಷ್ಟವಾಗುತ್ತದೆ. ಕವನದ ಬಹುಮುಖ್ಯ ಆಶಯವಾದ ವ್ಯಂಜನಾವೃತ್ತಿಯ ವ್ಯಂಗ್ಯಾರ್ಥದ ಕಡೆಗೆ ವಿಮರ್ಶಕರ ಗಮನ ಹರಿದಂತಿಲ್ಲ. ಈವರೆಗೆ ಈ ಕವನದಿಂದ ಲಭ್ಯವಿರುವ ತಿಳಿವಳಿಕೆ ಒಬ್ಬ ಸಾಮಾನ್ಯ ಮಟ್ಟದ ಆಯುರ್ವೇದ ವೈದ್ಯ (ಅಳಲೆಕಾಯಿ ಪಂಡಿತ) ಹೇಳಿಕೊಡಬಹುದಾದ ಪಾಠದಂತಿದೆ. ಶುದ್ಧವಾದ, ಸುಸಂಸ್ಕೃತವಾದ, ವಾಸ್ತವ ಅನುಭವಗಳಿಂದ ಕೂಡಿದ ಸರ್ವಾಂಗೀಣ ಆರೋಗ್ಯದಾಯಕ ಸಾಹಿತ್ಯ ಸಂಸ್ಕೃತಿ ನಿರ್ಮಾಣದ ಜರೂರಿನ ಅಗತ್ಯವನ್ನು ಕುರಿತು ಇಲ್ಲಿ ಪ್ರಾರ್ಥಿಸಲಾಗಿದೆ. ಈ ಕೆಲಸವನ್ನು ಮೇಲೆ ಊರ್ಧ್ವರೇತಸ್ಯನಾಗೊಬ್ಬಂಟಿಯಾಗಿ ಉರಿಯುತ್ತಿರುವ ಸೂರ್ಯನಲ್ಲದೆ ಬೇರೆ ಯಾರು ಮಾಡಬೇಕು ! ಯಾಕೆಂದರೆ ಭೂಮಿ ಮತ್ತು ಸೂರ್ಯರ ನಡುವಣ ಸಂಬಂಧ ಅವಿನಾವಾದದ್ದು.

*ರವಿ ತಿರುಗಿದ ಉತ್ತರಕೆ, ನಾನೂ*
*ಉತ್ತರ ಹುಡುಕುತ್ತಿರುವೆ*
*ನರವರಾ ಕನಿಗು ಜಗದಾತ್ಮ ದಿನಮಣಿಗು ಇಹ*
*ಸಾಮ್ಯ ತಾರತಮ್ಯಗಳ ಕುರಿತೇ*

– 'ಸಂಕ್ರಾಂತಿ ಸೂರ್ಯ' ಕವನದಲ್ಲಿಯ ಈ ಮಾತುಗಳೂ ಸೂರ್ಯನನ್ನು ಮನುಷ್ಯ ಸಂಬಂಧವಾಗಿಯೇ ಅರ್ಥೈಸಿಕೊಳ್ಳುತ್ತಿರುವುದನ್ನು ಗಮನಿಸಬೇಕು. ಊರ್ಧ್ವಾಭಿಮುಖತೆಯೇ ಮಾನವತೆಯ ಮುಖ್ಯ ಲಕ್ಷಣ ಎಂಬುದು ಅಡಿಗರ ಸ್ಪಷ್ಟ ನಿಲುವು.

**ಎನ್. ಬೋರಲಿಂಗಯ್ಯ**
ನಂ. ೪೪, ೮ನೇ ಮುಖ್ಯರಸ್ತೆ, ೧೨ನೇ ಅಡ್ಡರಸ್ತೆ
ಸರಸ್ವತಿಪುರಂ, ಮೈಸೂರು – ೫೭೦ ೦೦೯

# ಗುಬ್ಬಚ್ಚಿ ಕಲಿಸಿದ ಪಾಠ

(ಒಂದು ಮಕ್ಕಳ ಕಥೆ)

ಒಂದೂರಿನಲ್ಲಿ (ಅದೊಂದು ಸಣ್ಣ ಹಳ್ಳಿ) ಬಹಳ ವಯಸ್ಸಾದ ಒಬ್ಬ ಮುದುಕ ಇದ್ದ; ಅವನ ಹೆಂಡತಿಯೂ ಅಷ್ಟೇ ಮುದುಕಿಯಾಗಿದ್ದಳು. ಮುದುಕ ತುಂಬ ಒಳ್ಳೆಯವನು, ಹೃದಯವಂತ, ಕರುಣಾಳು. ಆದರೆ ಹೆಂಡತಿ ಒಳ್ಳೆಯವಳಲ್ಲ; ದುರಾಸೆ ಹೆಂಗಸು, ಅವಳಿಗೆ ಯಾರನ್ನು ಕಂಡರೂ ಆಗದು – ಎಂದು ಸುತ್ತಮುತ್ತಲಿನ ಊರುಗಳಲ್ಲೆಲ್ಲ ಕುಪ್ರಸಿದ್ಧಳಾಗಿದ್ದಳು. ಈ ಮುದಿ ದಂಪತಿಗಳಿಗೆ ಮಕ್ಕಳಿರಲಿಲ್ಲ. ಕರುಣಾಳು ಮುದುಕ ಒಂದು ಗುಬ್ಬಚ್ಚಿಯನ್ನು ಸಾಕುತ್ತಿದ್ದ, ಅದನ್ನು ಕಂಡರೆ ತುಂಬ ಪ್ರೀತಿ. ಮಗುವಿಗಿಂತ ಹೆಚ್ಚು ಅಕ್ಕರೆಯಿಂದ ಅದನ್ನು ನೋಡಿಕೊಳ್ಳುತ್ತಿದ್ದ.

ಒಂದು ಮುಂಜಾನೆ ಮುದುಕಿ ಬಿಡುವಿಲ್ಲದಷ್ಟು ಕೆಲಸದಲ್ಲಿ ತೊಡಗಿದ್ದು ಬಟ್ಟೆ ಒಗೆಯುವುದರಲ್ಲಿ ನಿರತಳಾಗಿದ್ದಳು. ಊಟಕ್ಕೆಂದು, ಮೊದಲೇ ಒಂದಿಷ್ಟು ಗಂಜಿ ತಯಾರಿಸಿ ಗೂಡಿನಲ್ಲಿಟ್ಟಿದ್ದಳು. ಕೆಲಸ ಮುಗಿದ ನಂತರ ಊಟ ಮಾಡುವ ಯೋಜನೆ. ಕೆಲಸ ಮುಗಿದ ಮೇಲೆ ಹೋಗಿ ನೋಡಿದರೆ ಆ ಪಾತ್ರೆ ಖಾಲಿ. ಅವಳಿಗೆ ಮಹದಾಶ್ಚರ್ಯವಾಯಿತು. ಕೋಪದಿಂದ ಸುತ್ತಲೂ ತಿರುಗಿ ನೋಡುತ್ತ 'ನನ್ನ ಗಂಜಿಯನ್ನು ಯಾರು ತಿಂದರು ?' ಎಂದು ಕೂಗಾಡಿದಳು.

ಸ್ವಲ್ಪ ದೂರದಲ್ಲಿ ಆರಾಮವಾಗಿ ಕೂತಿದ್ದ ಗುಬ್ಬಚ್ಚಿ : 'ಅಮ್ಮ ಏನು ಹುಡುಕುತ್ತಿದ್ದೀರಿ ?' ಎಂದು ಕೇಳಿತು.

'ಯಾರೋ ನನ್ನ ಊಟದ ಗಂಜಿಯನ್ನು ತಿಂದು ಹಾಕಿದ್ದಾರೆ. ನಂಬಲಸಾಧ್ಯವಾದ ಸಂಗತಿ ಇದು ?'

**ಡಾ॥ ಎಚ್. ಕೆ. ರಾಮಚಂದ್ರಮೂರ್ತಿ**

ಮುದುಕ ಹೊರಡಲು ಸಿದ್ಧವಾಗುತ್ತಿರುವಾಗ ಗುಬ್ಬಚ್ಚಿಗಳೆಲ್ಲವೂ ಸೇರಿ ಏನೇನೋ ವಸ್ತುಗಳನ್ನು ಸಂಗ್ರಹಿಸಿ ಎರಡು ಬೆತ್ತದ ಬುಟ್ಟಿಗಳಲ್ಲಿಟ್ಟು ಅವನನ್ನು ಕುರಿತು 'ಅಜ್ಜಾ ! ಈ ಎರಡು ಬುಟ್ಟಿಗಳಲ್ಲಿ ಒಂದು ಚಿಕ್ಕದು, ಹಗುರವಾಗಿದೆ – ಇನ್ನೊಂದು ದೊಡ್ಡದು, ಭಾರವಾಗಿದೆ. ನಿಮಗೆ ಯಾವುದು ಇಷ್ಟವೋ ಅದನ್ನು ಸ್ವೀಕರಿಸಿ' ಎಂದವು. ತಕ್ಷಣ ಮುದುಕ 'ನಾನು ತೀರಾ ವಯಸ್ಸಾದವನು. ಪುಟ್ಟ ಹಗುರ ಬುಟ್ಟಿಯೇ ನನಗೆ ಸಾಕು ಕೊಂಡೊಯ್ಯುವುದು ಸುಲಭವಾಗುತ್ತದೆ' ಎಂದು ನಿರ್ಣಾಯಕವಾಗಿ ನುಡಿದ. ಅವರ ಆ ಪ್ರೀತಿಯ ಕಾಣಿಕೆಯನ್ನು ತೆಗೆದುಕೊಂಡು ಅತ್ಯಂತ ಸಂತೋಷ ಸಂಭ್ರಮದಿಂದ ಮುದುಕ ಹಿಂತಿರುಗಿದ.



'ನಿಮ್ಮ ಊಟದ ಗಂಜಿಯೇ? ಅದನ್ನು ನಾನು ತಿಂದೆ.'

'ಏನು? ನೀನು ತಿಂದೆಯಾ? ಏನು ಇದರ ಅರ್ಥ?'

'ಅಯ್ಯೋ ಕ್ಷಮ್ಸಿ ಅಜ್ಜಿ; ನಾನು ಮಹಾಪರಾಧ ಮಾಡಿದೆ... ನಾನು ದಿನವೂ ಊಟ ಮಾಡುವ ಪಾತ್ರೆಯಲ್ಲಿ ಅದಿತ್ತು. ಓಹೋ! ನನಗೋಸ್ಕರ ಇವತ್ತು ಅಜ್ಜಿ ಏನೋ ವಿಶೇಷವನ್ನು ತಯಾರು ಮಾಡಿದ್ದಾರೆ... ಎಂದು ತಿಂದುಬಿಟ್ಟೆ. ಈ ಬಡ ಗುಬ್ಬಿ ತಿಳಿಯದೆ ಮಾಡಿದ ಘೋರ ಅಪರಾಧ ದಯವಿಟ್ಟು ಕ್ಷಮ್ಸಿ, ಅಜ್ಜಿ' ಎಂದು ಗುಬ್ಬಿ ಗೋಗರೆಯಿತು, ಕಣ್ಣೀರಿಟ್ಟಿತು.

ಆದರೆ ಹೃದಯ ಶೂನ್ಯ ಮುದುಕಿಗೆ ವಿಪರೀತ ಸಿಟ್ಟು ಬಂತು. ಮೊದಲೇ ಅವಳಿಗೆ ಆ ಗುಬ್ಬಚ್ಚಿಯನ್ನು ಕಂಡರೆ ಆಗುತ್ತಿರಲಿಲ್ಲ. ಇನ್ನು ಈಗ...? ಆ ಬಡ ಗುಬ್ಬಿಯ ಸಮಾಧಾನದ ಮಾತಿಗೆ ಕಿವಿಗೊಡದೆ ಅದರ ನಾಲಿಗೆ ಕತ್ತರಿಸಿ ಆ ಬಡ ಪ್ರಾಣಿಯನ್ನು ಗೂಡಿನಿಂದ ಆಚೆಗೆ ಓಡಿಸಿಬಿಟ್ಟಳು.

ಸಂಜೆ ಹೊತ್ತಿಗೆ ಮುದುಕ ಮನೆಗೆ ಹಿಂತಿರುಗಿದ. ತನ್ನ ಪ್ರೀತಿಯ ಗುಬ್ಬಚ್ಚಿ ಎಲ್ಲಿ ಹೋಯಿತೆಂದು ಹುಡುಕಾಡಿದ, ಕಂಗಾಲಾದ. 'ನನ್ನ ಗುಬ್ಬಚ್ಚಿ ಎಲ್ಲಿ ಹೋಯಿತು?' ಎಂದು ಹೆಂಡತಿಯನ್ನು ಕೇಳಿದ. ಬೆಳಿಗ್ಗೆ ನಡೆದ ದುರದೃಷ್ಟಕರ ಘಟನೆಯನ್ನು ವಿವರಿಸಿದಳು. ಆ 'ದರಿದ್ರ' ಹಕ್ಕಿಯ ದುರಾಸೆಯನ್ನು ಬಣ್ಣಿಸಿ ತಾನು ಮಾಡಿದ್ದ ಕೆಟ್ಟ ಕೆಲಸವನ್ನು ಸಮರ್ಥಿಸಿಕೊಂಡಳು.

'ಅಯ್ಯೋ, ನನ್ನ ಪ್ರೀತಿಯ ಗುಬ್ಬಚ್ಚಿಗೆ ಈ ಗತಿ ಆಯಿತೇ' ಎಂದು ಮುದುಕ ಗೋಳಾಡಿದ. ಅಯ್ಯೋ! ಪಾಪಿ ಅಮಾಯಕ ಹಕ್ಕಿ, ತಿಳಿಯದೆ ಮಾಡಿದ ಒಂದು ಸಣ್ಣ ತಪ್ಪಿಗಾಗಿ ಈ ಕ್ರೂರ ಕೃತ್ಯ ನಡೆಸಲು ನಿನಗೆ ಮನಸ್ಸಾದರೂ ಹೇಗೆ ಬಂತು? ಎಂದು ಮುದುಕ ಮಮ್ಮಲ ಮರುಗಿದ. ಅನಾಥ ಮುದುಕ ಮಾರನೆ ದಿನ, ಏಕಾಕಿಯಾಗಿ ಕೊರಗುತ್ತಾ ದಿಕ್ಕು ತೋಚದೆ ಮನೆಯ ಸುತ್ತ ಅಲೆದಾಡಿದ. ದುಃಖ ತಡೆಯಲಾರದೆ, ತನ್ನ ಪ್ರೀತಿಯ ಗುಬ್ಬಿಯನ್ನು ಹುಡುಕಲು ಮನೆ ಬಿಟ್ಟು ಹೊರಟ. ಹಾದಿ ಬೀದಿ, ಕಾಡುಮೇಡು, ಬೆಟ್ಟಗುಡ್ಡಗಳಲ್ಲಿ ಹಕ್ಕಿಯನ್ನು ಕೂಗಿ ಕರೆಯುತ್ತ ಅಲೆದಾಡಿದ. 'ನಾಲಿಗೆ ಇಲ್ಲದ ನನ್ನ ಪ್ರೀತಿಯ ಗುಬ್ಬಿ ಎಲ್ಲಿ ಹೋದೆ?' ಎಂದು ಅವಿರತವಾಗಿ ಗೋಳುಗರೆಯುತ್ತಾ ದೂರ ಪ್ರದೇಶಗಳಲ್ಲಿ ಓಡಾಡಿದ.

ಕಟ್ಟಕಡೆಗೆ ದಟ್ಟವಾಗಿ, ದೂರದೂರಕ್ಕೆ ಹಬ್ಬಿದ ಒಂದು ಬಿದಿರು ಮೆಳೆಯ ಬಳಿ ಬಂದ. ತನ್ನ ಮುದ್ದು ಹಕ್ಕಿಯನ್ನು ಅಲ್ಲಿ ಕಂಡ. ಯಜಮಾನನ ಧ್ವನಿಯನ್ನು ಗುರುತಿಸಿ ಆ ಗುಬ್ಬಿ ತನ್ನ ಪುಟ್ಟ ಪುಟ್ಟ ಕಾಲುಗಳಲ್ಲಿ ಕುಪ್ಪಳಿಸುತ್ತಾ ಅವನ ಬಳಿ ಬಂತು. ಅವನನ್ನು ನೋಡಿ ಗುಬ್ಬಿಗೂ ದುಃಖ ಉಮ್ಮಳಿಸಿತು. ತನ್ನನ್ನು ಅಷ್ಟು ಪ್ರೀತಿಯಿಂದ ಅಷ್ಟು ದೀರ್ಘಕಾಲ ಸಾಕಿ ಸಲಹಿದ, ತನ್ನನ್ನು ಹುಡುಕಿಕೊಂಡು ಕಾಡುಮೇಡುಗಳಲ್ಲಿ ಅಲೆದಾಡಿ ಸೋತಿದ್ದ, ಮುದುಕನಿಗೆ ತಾನೆಷ್ಟು ಆಭಾರಿಯಾಗಿದ್ದೇನೆಂದು ಹೇಳಲು ಪ್ರಯತ್ನಿಸಿ ಮರುಗಿತು.

**ಹನಿಗವನ**

ವಿಶ್ವ ಶಾಂತಿಗೆ ಬುದ್ಧ
ಸಮಾನತೆಗೆ ಬಸವಣ್ಣ
ಆರ್ಥಿಕ ಸಮಕ್ಕೆ ಕಾರ್ಲ್ ಮಾರ್ಕ್ಸ್
ರಾಷ್ಟ್ರೀಯತೆಗೆ ನೇತಾಜಿ
ದೇಶಾಭಿಮಾನಕ್ಕೆ ಭಗತ್ ಸಿಂಗ್
ಅಹಿಂಸೆಗೆ ಗಾಂಧೀಜಿ
ಪ್ರಜಾಪ್ರಭುತ್ವಕ್ಕೆ ಅಂಬೇಡ್ಕರ್
ಹಾಗಾದರೆ
ನಿನ್ನ ಹೆಜ್ಜೆಯ ಗುರುತು ಯಾವುದಕ್ಕೆ?

**ಶಾಂತಕುಮಾರ್ ಪೂಜಾರ್ (ಶಾಂಪೂ)**
ಬೆಂಗಳೂರು – ೨೦

ಕ್ಷೇಮ ಸಮಾಚಾರಗಳ ವಿಧಿಗಳೆಲ್ಲ ಮುಗಿದ ನಂತರ ಗುಬ್ಬಿ ಆ ಮುದುಕನನ್ನು ತನ್ನ ಸಂಸಾರ ವಾಸಿಸುತ್ತಿದ್ದ ಮನೆಗೆ ಕರೆದೊಯ್ಯಿತು. ಅಲ್ಲಿ ಅವನಿಗೆ ಅಭೂತಪೂರ್ವ ಸ್ವಾಗತ ಸಿಕ್ಕಿ ಮನೆಯಲ್ಲಿನ ಎಲ್ಲರೂ ಅವನಿಗೆ ವಂದನೆಗಳನ್ನು ಸಲ್ಲಿಸಿದರು. ಮನೆ ಮಂದಿಯೆಲ್ಲರೂ ಸೇರಿ ಅವನಿಗೆ ಪುಷ್ಕಳ ಭೋಜನ ಏರ್ಪಡಿಸಿದರು. ಸೊಗಸಾದ ಉತ್ಸವ ನಡೆಸಿ ಗೌರವ ರಕ್ಷೆ ನೀಡಿದರು. ಸಮಾರಂಭದ ಕೊನೆಯ ಭಾಗವಾಗಿ ಎಲ್ಲರೂ ಸೇರಿ ಒಂದು ನೃತ್ಯಕೂಟ ನಡೆಸಿದರು. ಇಂದಿಗೂ ಅದನ್ನು 'ಗುಬ್ಬಚ್ಚಿಗಳ ನೃತ್ಯ'ವೆಂದೇ ಕರೆಯುವುದುಂಟು.

ಈ ಅಪರೂಪದ ಹರ್ಷೋತ್ಸಾಹದ ಉತ್ಸವದಿಂದ ಮುದುಕನಿಗೆ ಎಂದೂ ಇಲ್ಲದಷ್ಟು ಖುಷಿ ಆಯಿತು. ತನ್ನ ಇಡೀ ಜೀವನದಲ್ಲೇ ಅಷ್ಟೊಂದು ಸಂತೋಷ ತನಗೆ ದೊರೆತಿರಲಿಲ್ಲವೆಂದು ಅವನು ಘೋಷಿಸಿದ. ಅವರು ತೋರಿಸಿರುವ ಪ್ರೀತಿ ವಿಶ್ವಾಸಗಳಿಂದ ತಾನು ಮತ್ತೆ ಯೌವನ ಸ್ಥಿತಿಗೆ ಬಂದಿರುವುದಾಗಿ ಹೇಳಿದ. ಸಂಜೆಯಾಗುವ ಹೊತ್ತಿಗೆ ಅವರು ತನ್ನನ್ನು ಬೀಳ್ಕೊಡುವಂತೆ ಬೇಡಿಕೊಂಡ.

'ಈ ರಾತ್ರೆ ನಮ್ಮ ಮನೆಯಲ್ಲೇ ತಂಗಿದ್ದರೆ, ನಮಗದು ಅತ್ಯಂತ ಗೌರವದ ಸಂಗತಿ. ನಮ್ಮ ಈ ಬಡ ಕುಟೀರಕ್ಕೆ ಅದು ಬಹುದೊಡ್ಡ ಮರ್ಯಾದೆ' ಎಂದು ಒಕ್ಕೊರಲಿನಿಂದ ಕೇಳಿಕೊಂಡರು. 'ಇಲ್ಲ. ದಯವಿಟ್ಟು ಕ್ಷಮಿಸಿ ನನ್ನ ಪ್ರೀತಿಯ ಗುಬ್ಬಚ್ಚಿಗಳೇ – ಈಗ ಹೊತ್ತಾಗುತ್ತಿದೆ. ನಾನು ನನ್ನ ಮನೆಗೆ ಹೋಗಲೇ ಬೇಕು. ಆದರೆ ಇನ್ನೊಮ್ಮೆ ನಾನು ಬರುತ್ತೇನೆ – ನನ್ನನ್ನು ಈಗ ಕಳುಹಿಸಿಕೊಡಿ' ಎಂದು ಮುದುಕ ಉತ್ತರಿಸಿದ.

'ನೀವು ಇಷ್ಟು ಬೇಗ ಹೊರಟಿರುವುದರಿಂದ ನಮಗೆಲ್ಲ ಅತೀವ ದುಃಖವಾಗುತ್ತಿದೆ – ಆದರೆ ನೀವು ಇನ್ನೊಮ್ಮೆ ಬರುವುದಾದರೆ ಈಗ ನಿಮ್ಮನ್ನು ಬೀಳ್ಕೊಡಲು ಅಡ್ಡಿ ಇಲ್ಲ. ಆದರೆ ಈ ನಿಮ್ಮ ಭೇಟಿಯ ನೆನಪಿಗಾಗಿ ನಾವು ನಿಮಗೊಂದು ಕಾಣಿಕೆ ಕೊಡುತ್ತೇವೆ. ದಯವಿಟ್ಟು ಸ್ವೀಕರಿಸಿ ನಮ್ಮನ್ನು ಆಶೀರ್ವದಿಸಿ' ಎಂದು ಗುಬ್ಬಚ್ಚಿ ಸಂಸಾರ ಅಹವಾಲು ಸಲ್ಲಿಸಿತು. ಮುದುಕ ಹೊರಡಲು ಸಿದ್ಧವಾಗುತ್ತಿರುವಾಗ ಗುಬ್ಬಚ್ಚಿಗಳೆಲ್ಲವೂ ಸೇರಿ ಏನೇನೋ ವಸ್ತುಗಳನ್ನು ಸಂಗ್ರಹಿಸಿ. ಎರಡು ಬೆತ್ತದ ಬುಟ್ಟಿಗಳಲ್ಲಿಟ್ಟು ಅವನನ್ನು ಕುರಿತು 'ಅಜ್ಜಾ! ಈ ಎರಡು ಬುಟ್ಟಿಗಳಲ್ಲಿ ಒಂದು ಚಿಕ್ಕದು, ಹಗುರವಾಗಿದೆ – ಇನ್ನೊಂದು ದೊಡ್ಡದು, ಭಾರವಾಗಿದೆ. ನಿಮಗೆ ಯಾವುದು ಇಷ್ಟವೋ ಅದನ್ನು ಸ್ವೀಕರಿಸಿ' ಎಂದವು.

ತಕ್ಷಣ ಮುದುಕ 'ನಾನು ತೀರಾ ವಯಸ್ಸಾದವನು. ಪುಟ್ಟ ಹಗುರ ಬುಟ್ಟಿಯೇ ನನಗೆ ಸಾಕು. ಕೊಂಡೊಯ್ಯುವುದು ಸುಲಭವಾಗುತ್ತದೆ' ಎಂದು ನಿರ್ಣಾಯಕವಾಗಿ ನುಡಿದ. ಅವರ ಆ ಪ್ರೀತಿಯ ಕಾಣಿಕೆಯನ್ನು ತೆಗೆದುಕೊಂಡು ಅತ್ಯಂತ ಸಂತೋಷ ಸಂಭ್ರಮದಿಂದ ಮುದುಕ ಹಿಂತಿರುಗಿದ.

ಏತನ್ಮಧ್ಯೆ ಮುದುಕನ ಹೆಂಡತಿಗೆ ಕೋಪ ತಾರಕಕ್ಕೇರಿ ಅವಳು ಗಟ್ಟಿಯಾಗಿ ಗೊಣಗುತ್ತಿದ್ದಳು. ಗಂಡನನ್ನು ಕಂಡ ತಕ್ಷಣ 'ಎಲ್ಲಿ ಹಾಳಾಗಿ ಹೋಗಿದ್ದೆ ಇಷ್ಟು ಹೊತ್ತು? ಅಡುಗೆಯೆಲ್ಲಾ ಆರಿ ತಣ್ಣಗಾಗಿದೆ – ಇನ್ನು ಮತ್ತೆ ಅದನ್ನು ಬಿಸಿ ಮಾಡಬೇಕಾಗಿದೆ' ಎಂದು ಕಿರುಚಿ ಕೂಗಾಡಿದಳು, ರಂಪ ಮಾಡಿದಳು.

'ಸುಮ್ಮನೆ ನನ್ನ ಮೇಲೆ ಕೂಗಾಡಬೇಡ. ನಾನು ನನ್ನ ಮುದ್ದು ಗುಬ್ಬಚ್ಚಿಯನ್ನು ಹುಡುಕಲು ಹೋಗಿದ್ದೆ. ನನ್ನನ್ನು ಕಂಡು ಗುಬ್ಬಿಗೆ ಪರಮ ಸಂತೋಷವಾಯಿತು. ನಾನು ಹಿಂತಿರುಗಿ ಹೊರಡುವಾಗ ನನಗೊಂದು ಉಡುಗೊರೆ ಕೊಟ್ಟ. ನನ್ನ ಮುಂದೆ ಎರಡು ಬುಟ್ಟಿಗಳನ್ನಿಟ್ಟು 'ಯಾವುದನ್ನು ಬೇಕಾದರೂ ಆರಿಸಿಕೋ. ಒಂದು, ಪುಟ್ಟ ಹಗುರ ಬುಟ್ಟಿ, ಇನ್ನೊಂದು ದೊಡ್ಡ ಭಾರವಾದ ಬುಟ್ಟಿ' ಎಂದ ಆ ನನ್ನ ಪ್ರೀತಿಯ ಗುಬ್ಬಿ ಸಹಜವಾಗಿಯೇ. ನಾನು ಪುಟ್ಟ ಬುಟ್ಟಿ ಎತ್ತಿಕೊಂಡು ಬಂದೆ. 'ಬಾ, ಇದನ್ನು ತೆರೆದು ನೋಡೋಣ, ಒಳಗೆ ಏನಿದೆ, ಅಂತ'. ಆಗ ಇಬ್ಬರೂ ಸೇರಿ ಬುಟ್ಟಿ ಬಿಚ್ಚಿದರು. ಎಂಥ ಮಹದಾಶ್ಚರ್ಯ ಇಬ್ಬರಿಗೂ! ಒಳಗಡೆ ಇರಿಸಿದ್ದ ಭರಣಿಯಿಂದ ಚಿನ್ನ ಬೆಳ್ಳಿಯ ತುಕಡಿಗಳು, ಮುತ್ತು–ಹವಳ ವಜ್ರ–ವೈಢೂರ್ಯ ಹೊರಗೆ ಚೆಲ್ಲಿ ಮಿಂಚಿದವು. ಜೊತೆಗೆ ಬಣ್ಣಬಣ್ಣದ ರೇಷ್ಮೆ ಬಟ್ಟೆಗಳು, ಫಳಫಳಿಸುವ ಆಭರಣಗಳು ಹೊರಬಿದ್ದವು. ಸಂತೋಷದಿಂದ ಸಂಭ್ರಮಿಸುವ ಬದಲು ಮುದುಕಿ ಯಥಾಪ್ರಕಾರ ಗೊಣಗಿದಳು – ಗಂಡನತ್ತ ತಿರುಗಿ, ರೇಗುತ್ತಾ ಅವನೇಕೆ ದೊಡ್ಡ ಬುಟ್ಟಿ ಹೆಕ್ಕಿ ತರಲಿಲ್ಲವೆಂದು ಅವನನ್ನು ಮನಸ್ವೀ ಶಪಿಸಿದಳು.

'ನೀನೊಬ್ಬ ದಡ್ಡ, ಮೂರ್ಖ; ಐವತ್ತು ವರ್ಷಗಳಿಂದ ನಿನ್ನಂಥ ಪೆದ್ದನ ಜತೆ ನಾನು ಹೆಣಗಬೇಕಾಗಿದೆ' ಎಂದು ಅಬ್ಬರಿಸಿ, ತಲೆ ತಲೆ ಚಚ್ಚಿಕೊಂಡಳು.

'ಸುಮ್ಮನಿರು, ಸಾಕು. ಇಲ್ಲದ ಹುಯಿಲೆಬ್ಬಿಸಬೇಡ. ನಮ್ಮ ಈ ಮುದಿ ವಯಸ್ಸಿನಲ್ಲಿ ಅನಾಯಾಸವಾಗಿ ಸಿಕ್ಕಿದ ಇದಕ್ಕಿಂತ ಹೆಚ್ಚೇನು ಬೇಕು' ಎಂದು ಮುದುಕ, ಹೆಂಡತಿಯನ್ನು ಸಮಾಧಾನಪಡಿಸಲು ಒದ್ದಾಡಿದ.

'ಸರಿ, ಹಾಗಾದರೆ, ನಿನ್ನ ದಡ್ಡ ತಲೆಗೆ ಇದಕ್ಕಿಂತ

ಹೆಚ್ಚೇನೂ ಹೊಳೆಯದು! ನಾನೇ ಹೋಗಿಬರ್ತೇನೆ. ನೋಡುತ್ತಿರು – ನಾನು ನಿನಗಿಂತ ಎಷ್ಟು ಜಾಣೆ, ವ್ಯವಹಾರ ಚತುರೆ...' ಎಂಬಿತ್ಯಾದಿ ಕೊಚ್ಚಿಕೊಳ್ಳುತ್ತಾ ಹೊರಟೇಬಿಟ್ಟಳು. ಮುದುಕ ಅವಳನ್ನು ತಡೆಯಲು ಶತಪ್ರಯತ್ನ ಮಾಡಿ ಸೋತ. ಗಯ್ಯಾಳಿ ಮುದುಕಿ ಹೇಗಾದರೂ ಗುಬ್ಬಚ್ಚಿಯನ್ನು ಹುಡುಕಿ ಹೆಚ್ಚಿನ ಲಾಭ ಗಿಟ್ಟಿಸುವುದಾಗಿ ನಿರ್ಧರಿಸಿ ಮನೆಯಿಂದಾಚೆ ಹೊರಟುಹೋದಳು.

ಅವಳೂ ಸಹ ಕಾಡು–ಮೇಡು, ಬೆಟ್ಟಗುಡ್ಡ ಕಾಡು ಕಣಿವೆ ದಾಟಿ ಗುಬ್ಬಚ್ಚಿಯನ್ನು ಕೂಗಿ ಕರೆಯುತ್ತಾ ಅಲೆದಾಡಿದಳು. ಬಹುದೂರ ನಡೆದು ಸುಸ್ತಾಗಿ ಕೊನೆಗೆ ಗುಬ್ಬಚ್ಚಿ ಮನೆಯ ಹತ್ತಿರ ಬಂದಳು. ಜಾಣ ಗುಬ್ಬಚ್ಚಿ ಅವಳು ಬರುವುದನ್ನೇ ದೂರದಿಂದಲೇ ಗಮನಿಸಿ ಅವಳನ್ನು ಸ್ವಾಗತಿಸಲು ಸಿದ್ಧವಾಗಿತ್ತು. ಆದರೆ ಕೇವಲ ಚಿನ್ನ ಬೆಳ್ಳಿ ದುಡ್ಡುಕಾಸಿನ ದುರಾಸೆಯಿಂದ ತುಂಬಿದ್ದ ಮುದುಕಿಗೆ ಆ ಸ್ವಾಗತ ಇತ್ಯಾದಿ ಬೇಕಾಗಿರಲಿಲ್ಲ. 'ನೋಡು ನನಗೆ ನಿನ್ನ ಹಬ್ಬ, ಕುಣಿತ, ಪುಷ್ಕಳ ಭೋಜನ ಇದೊಂದೂ ಬೇಡ ನಾನು ಮನೆಗೆ ಹಿಂತಿರುಗುವ ಆತುರದಲ್ಲಿದ್ದೇನೆ... ಆದರೆ ನೀನು ಏನಾದರೂ ಉಡುಗೊರೆ ಕೊಡುವುದಾದರೆ ನಾನು ಅದನ್ನು ಸ್ವೀಕರಿಸಲು ಅಡ್ಡಿ ಇಲ್ಲ. ಸಂತೋಷ' ಎಂದಳು.

ಅತ್ಯಂತ ಗೌರವಾದರಗಳಿಂದ ಗುಬ್ಬಚ್ಚಿ ಅವಳಿಗೆ ಸಣ್ಣ ಹಗುರ ಬುಟ್ಟಿ, ದೊಡ್ಡ ಭಾರದ ಬುಟ್ಟಿಗಳನ್ನು ಕೊಟ್ಟು 'ನಿನಗೆ ಯಾವುದು ಬೇಕೋ ಆರಿಸಿಕೋ' ಎಂದಿತು. ಅತಿ ದುರಾಸೆಯ ಮುದುಕಿ ತಕ್ಷಣ ಮುಂದಕ್ಕೆ ಕುಪ್ಪಳಿಸಿ ದೊಡ್ಡ ಭಾರವಾದ ಬುಟ್ಟಿಯನ್ನು ಎತ್ತಿಕೊಂಡಳು. 'ನಾನು ನನ್ನ ಗಂಡನಿಗಿಂತ ಬಲಶಾಲಿ – ಎಷ್ಟು ಭಾರವನ್ನಾದರೂ ಹೊರಬಲ್ಲೆ – ನಿನ್ನ ಉಡುಗೊರೆಯನ್ನು ಸಂತೋಷದಿಂದ ಸ್ವೀಕರಿಸುತ್ತೇನೆ' ಎಂದಳು. ಭಾರವಾದ ದೊಡ್ಡ ಬುಟ್ಟಿಯನ್ನೆತ್ತಿಕೊಂಡು ಮುದುಕಿ ತನ್ನ ಮನೆಯತ್ತ ಪಲಾಯನ ಮಾಡಿದಳು. ಆದರೆ ಸ್ವಲ್ಪ ದೂರ ಹೋಗುವುದರಲ್ಲಿ ಬುಟ್ಟಿಯು ಭಾರದಿಂದ ಕುಸಿದು ಬೀಳುವಷ್ಟು ಆಯಾಸವಾಯಿತು. ನಡೆಯುವುದೇ ಕಷ್ಟವೆನಿಸಿತು. ಗುಬ್ಬಚ್ಚಿ ಮನೆಯಿಂದ ದೂರದಲ್ಲಿ ಮರೆಯಾದ ಸ್ಥಳದಲ್ಲಿ ಬುಟ್ಟಿಯನ್ನು ಬಿಚ್ಚುವ ಕುತೂಹಲ ಕೆರಳಿ ಆಯಾಸ ಅಸಹನೀಯ ವೆನಿಸಿತು. ಅವಳ ತಾಳ್ಮೆ ಮಿತಿ ಮೀರಿತ್ತು. ರಸ್ತೆ ಬದಿಯಲ್ಲಿ ಬುಟ್ಟಿಯನ್ನು ಬಿಚ್ಚಿದಳು. ಅದರೊಳಗಿಂದ ಹಾವುಗಳು, ದಪ್ಪ ಚೇಳುಗಳು, ಭೀಕರಾಕಾರದ ಕಂಬಳಿ ಹುಳುಗಳು, ಕಪ್ಪೆಗಳು, ವಂಡರಗಪ್ಪೆಗಳು ಬುಳಬುಳನೆ ಹೊರಬಿದ್ದು ಅವಳ ಮೈಕೈಗಳಿಗೆ ಮುತ್ತಿಕೊಂಡವು. ಅಪಾರ ಭೀತಿಯಿಂದ ಕುಣಿದು ಕುಪ್ಪಳಿಸಿ ಮೈಕೊಡವಿಕೊಂಡು ಭಯಂಕರ ಹಾವು–ಚೇಳುಗಳಿಂದ ಬಿಡಿಸಿಕೊಂಡು ಮುದುಕಿ (ತಾನು ಯಾವುದಕ್ಕಾಗಿ ದುರಾಸೆಯಿಂದ ಅಷ್ಟು ದೂರ ಬಂದಿದ್ದಳೋ) ಆ ಬುಟ್ಟಿಯನ್ನು ಅಲ್ಲೇ ಒಗೆದು ಮನೆಯತ್ತ ಓಟ ಕಿತ್ತಳು. ಈ ಭೀಕರ ಅನುಭವದಿಂದ ಸುಧಾರಿಸಿಕೊಂಡು ಮನೆ ಸೇರಿದಳು. ಗಂಡನಿಗೆ ತನ್ನ 'ಘೋರ' ಅನುಭವವನ್ನು ವಿವರಿಸಿದಳು.

'ನಿನಗೆ ಏನು ಆಗಬೇಕಾಗಿತ್ತೋ ಅದು ಆಯಿತು...' ಎಂದು ಮೃದುವಾಗಿ ನುಡಿದ ಅವಳ ಗಂಡ.

'ಹೋಗಬೇಡ – ನಿನಗೆ ಅದರಿಂದ ಒಳಿತಾಗು ವುದಿಲ್ಲ ಎಂದು ವಿಧವಿಧವಾಗಿ ಬೇಡಿಕೊಂಡೆ – ನೀನು ಹಟದಿಂದ ಹೊರಟೆ – ನಿನ್ನ ಅವಿವೇಕಕ್ಕೆ ತಕ್ಕುದಾಯಿತು' ನಿನ್ನ ದುರಾಸೆಗೆ ತಕ್ಕ ಶಿಕ್ಷೆ ಸಿಕ್ಕಿತು ಎಂದ.

ಅವಳ ಜೀವನದಲ್ಲಿ ಮೊಟ್ಟಮೊದಲನೆಯ ಬಾರಿಯೋ ಎನ್ನುವಂತೆ ಅವಳು ಗಂಡನ ಮಾತುಗಳನ್ನು ಸಾವಧಾನವಾಗಿ ಆಲಿಸಿದಳು. ಗುಬ್ಬಚ್ಚಿ ತನಗೆ ಅಗತ್ಯವಾದ ನೀತಿಪಾಠವನ್ನು ಕಲಿಸಿತು ಎಂದು ಅವಳಿಗೆ ಮನದಟ್ಟಾಯಿತು. ನಿಜವಾಗಿ ಆ ಪಾಠದಿಂದ ಅವಳಲ್ಲಿ ಆಶ್ಚರ್ಯಕರ ಮಾರ್ಪಾಡಾಯಿತು. ತನ್ನ ಕರುಣಾರ್ದ್ರ ಹೃದಯದ ಗಂಡನೊಂದಿಗೆ ಹೊಂದಿಕೊಂಡು, ಸುತ್ತಲಿನ ಎಲ್ಲರನ್ನೂ ತಾನೂ ಸಹ ದಯೆ, ಸಹಾನುಭೂತಿ, ಅಂತಃಕರಣಗಳಿಂದ ನಡೆಸಿಕೊಳ್ಳ ಬೇಕೆಂಬುದನ್ನು ಅರ್ಥಮಾಡಿಕೊಂಡಳು.

*(ಜಪಾನಿನ ಜಾನಪದ ಕಥಾಲೋಕದಿಂದ)*

**ಡಾ|| ಎಚ್. ಕೆ. ರಾಮಚಂದ್ರಮೂರ್ತಿ**
ನಂ. ೧೦೨, 'ಶರಾವತಿ ಪ್ಯಾಲೇಸ್', ೩ನೇ ಅಡ್ಡರಸ್ತೆ
ಸಿ. ಆರ್. ಲೇಔಟ್, ಜೆ. ಪಿ. ನಗರ ೧ನೇ ಹಂತ
ಬೆಂಗಳೂರು – ೫೬೦ ೦೭೮




## ಸನ್ಮಾನ

ಹಿರಿಯರಿಗೆ ಸನ್ಮಾನ ಮಾಡಲು
ವೇದಿಕೆಗೆ ಕರೆದರು
ಅವರಿಂದ ವೇದಿಕೆ ಹತ್ತಲಾಗಲಿಲ್ಲ
ಇಬ್ಬರ ನೆರವಿಂದ ವೇದಿಕೆಗೆ ಹೋದರು
ಅಲ್ಲಿ ಯಾರೋ ಸನ್ಮಾನ ಪತ್ರ ವಾಚಿಸಿದರು
ಅವರ ಕಿವಿಗಳಿಗೆ ಏನೂ ಕೇಳಿಸಲಿಲ್ಲ
ಸಕ್ಕರೆ ಕಾಯಿಲೆಯಿಂದ ಬಳಲುವ ಅವರಿಗೆ
ಒಂದು ಬಟ್ಟಲು ತುಂಬ ಹಣ್ಣು ಕೊಟ್ಟರು
ಹೆಂಡತಿ ಕಳಕೊಂಡ ಅವರಿಗೆ
ಮಲ್ಲಿಗೆಮಾಲೆ ಹಾಕಿದರು
ಹರಿದ ಶರ್ಟು ಮುಚ್ಚುವಂತೆ
ಶಾಲು ಹೊದಿಸಿದರು
ಭಾಷಣದಲ್ಲಿ ಯಾರೋ ಅಂದರು
ಈ ಸನ್ಮಾನ ಅವರಿಗೆ
ಎಂದೋ ಸಿಗಬೇಕಿತ್ತು!

**ಕೆ. ಅಶೋಕ್ ಕುಮಾರ್**
ಐ.ಎಚ್.೫೯, 'ಗಾಯತ್ರಿ', ೨ನೇ ಮುಖ್ಯರಸ್ತೆ, ೬ನೇ ಅಡ್ಡರಸ್ತೆ
ಲ್ಯಾಂಡ್ ಲಿಂಕ್ಸ್, ದೇರೆಬೈಲು, ಕೊಂಚಾಡಿ, ಮಂಗಳೂರು – ೫೭೫ ೦೦೮




# ನೆಪ್ಚ್ಯೂನ್ ಅನ್ನು ಗುರುತಿಸುವ ಅವಕಾಶ

ಬರಿಗಣ್ಣಿಗೆ ಕಾಣುವ ಐದು ಗ್ರಹಗಳನ್ನು ನಭಾವಲೋಕನದ ಓದುಗರು ಕಂಡುಕೊಂಡಿದ್ದಾರೆ. ಆದರೆ ಯುರೇನಸ್ ಮತ್ತು ನೆಪ್ಚ್ಯೂನ್‌ಗಳನ್ನು ಈ ಅಂಕಣದಲ್ಲಿ ಸೇರಿಸಿಲ್ಲ. ಏಕೆಂದರೆ ಅವು ಬರಿಗಣ್ಣಿಗೆ ಕಾಣುವುದಿಲ್ಲ. ಈ ತಿಂಗಳಲ್ಲಿ ಚಂದ್ರ ನೆಪ್ಚ್ಯೂನ್ ಅನ್ನು ಮರೆ ಮಾಡುವ ಆಚ್ಛಾದನೆ ನಡೆಯುವುದರಿಂದ ಚಂದ್ರನ ಸಮೀಪವೇ ಇರುವ ಅದನ್ನು ಗುರುತಿಸುವ ಪ್ರಯತ್ನ ಮಾಡಬಹುದು. ಇದಕ್ಕೆ ದೂರದರ್ಶಕ ಅಥವಾ ದುರ್ಬೀನು ಅವಶ್ಯವಾಗಿ ಬೇಕೇ ಬೇಕು. ೬ರಂದು ಅರ್ಧ ಚಂದ್ರದ ಪ್ರಕಾಶವಿಲ್ಲದ ಭಾಗದಲ್ಲಿ ಹುಡುಕಿದರೆ ಕಾಣುವ ಕ್ಷೀಣ ಚುಕ್ಕೆಯೇ ನೆಪ್ಚ್ಯೂನ್. ಇದು ನಕ್ಷತ್ರಗಳ ಹಾಗೆಯೇ ಕಾಣುವುದರಿಂದ ಅಷ್ಟೇನೂ ವಿಶೇಷ ಎನ್ನಿಸುವುದಿಲ್ಲ. ಆದರೆ ಹಲವಾರು ವರ್ಷಗಳಿಂದ ಈ ಅಂಕಣವನ್ನು ಓದುತ್ತಿರುವ ಅನೇಕ ವೀಕ್ಷಕರು ಈ ಗ್ರಹವನ್ನು ನೋಡುವ ಉತ್ಸುಕತೆ ವ್ಯಕ್ತಪಡಿಸಿದ್ದಾರೆ.

ಸಂಜೆ ಕಾಣುವ ಶುಕ್ರ ಗ್ರಹವನ್ನು ಗುರುತಿಸಲು ಏನೇನೂ ಕಷ್ಟಪಡ ಬೇಕಾಗಿಲ್ಲ. ಆದರೆ ಅದರ ಸಮೀಪ ಇರುವ ಮಂಗಳವನ್ನು ಹುಡುಕಲು ಸ್ವಲ್ಪ ಪ್ರಯತ್ನ ಪಡ ಬೇಕಾಗುವುದು. ೩ರಂದು ಚಂದ್ರನ ಪಕ್ಕ ಶುಕ್ರ ಕಾಣುವುದು; ಎರಡು ದಿನಗಳ ನಂತರ ಅಂದರೆ ೫ರಂದು ಚಂದ್ರನ ಪಕ್ಕ ಕಾಣುವ ಚುಕ್ಕೆಯೇ ಮಂಗಳ. ಶುಕ್ರದ ಕೆಳಗೆ ದಿಗಂತದ ಅಂಚಿನಲ್ಲಿ ಕಾಣುವ ಇನ್ನೊಂದು ಚುಕ್ಕೆ ಬುಧ ಗ್ರಹ. ೧೦ರಂದು ಅದು ಗರಿಷ್ಠ ಎತ್ತರದಲ್ಲಿ ಕಾಣುವ ಸಂದರ್ಭ ಉಪಯೋಗಿಸಿಕೊಂಡು ಗುರುತಿಸುವ ಪ್ರಯತ್ನ ಮಾಡಬಹುದು. ಈ ಮೂರೂ ಗ್ರಹಗಳು ಪಶ್ಚಿಮದಲ್ಲಿ ಕಾಣುವುವು. ಸೂಕ್ಷ್ಮವಾಗಿ ಗಮನಿಸಿ ಆ ಭಾಗದಲ್ಲಿ ಅಷ್ಟೇನೂ ಪ್ರಕಾಶಮಾನವಾದ ನಕ್ಷತ್ರಗಳೇ ಇಲ್ಲ. ಆದರೆ ನೆತ್ತಿಯಲ್ಲಿ ಪ್ರಕಾಶಮಾನವಾದ ಚೌಕ ನಕುಲ (ಪೆಗಸಸ್) ಕಾಣುವುದು. ಮುಂದೆ ಮೇಷ, ವೃಷಭ ರಾಶಿಗಳು ಕಾಣುವುವು. ಅಂಚಿನಲ್ಲಿ ಪ್ರಕಾಶ ಮಾನವಾದ ನಕ್ಷತ್ರಪುಂಜ ಮಹಾವ್ಯಾಧ ಕಾಣುವುದು. ಉತ್ತರದಲ್ಲಿ ಕುಂತಿ (ಕೆಸಿಯೋಪಿಯ), ಪಾರ್ಥ (ಪರ್ಸಿಯುಸ್) ಮತ್ತು ದ್ರೌಪದಿ (ಆಂಡ್ರೊಮೆಡಾ) ಕಾಣುವುವು.

ಗುರು ಗ್ರಹ ಮುಂಜಾವಿನಲ್ಲಿ ಕಾಣುವುದು. ೨೧ರಂದು ಚಂದ್ರ ಇದರ ಪಕ್ಕ ಹಾದುಹೋಗುವುದು. ಇದು ತುಲಾರಾಶಿಯ ಭಾಗ; ಅಷ್ಟೇನೂ ಪ್ರಕಾಶಮಾನವಲ್ಲದ ನಕ್ಷತ್ರಗಳ ನಡುವೆ ಇದನ್ನು ಹುಡುಕಲು ಚಂದ್ರನ ಸಹಾಯ ಬೇಕಿಲ್ಲ. ಮಧ್ಯರಾತ್ರಿಯ ನಂತರ ಉದಯಿಸುವ ಇದು ಮುಂಜಾವಿನಲ್ಲಿ ನೆತ್ತಿಯ ಮೇಲೆಯೇ ಕಾಣುತ್ತದೆ. ಕಳೆದ ತಿಂಗಳವರೆಗೂ ಸಂಜೆಯ ಆಕಾಶದಲ್ಲಿ ಕಾಣುತ್ತಿದ್ದ ಶನಿ ಗ್ರಹ ಸೂರ್ಯನನ್ನು ಆಚೆ ಬದಿಯಿಂದ ಹಾದುಹೋಗುವ ನೋಡಲು ಸಿಗುವುದಿಲ್ಲ. ತಿಂಗಳ ಕೊನೆಗೆ ಬೆಳಗಿನ ಜಾವ ಕಾಣಿಸಿಕೊಳ್ಳುತ್ತದೆ. ತಿಂಗಳ ಕೊನೆಗೆ ಬುಧ ಗ್ರಹವೂ ಕಾಣದಂತಾಗುತ್ತದೆ.

ಈ ತಿಂಗಳ ೧೨–೧೩ ಈ ಅವಧಿಯಲ್ಲಿ ಜೆಮಿನಿಡ್ಸ್ ಉಲ್ಕಾವೃಷ್ಟಿ ಇದೆ. ಜೆಮಿನಿ ಅಂದರೆ ಮಿಥುನ ರಾಶಿಯಿಂದ ಹೊರಟಂತೆ ಕಾಣುವ ಈ ಉಲ್ಕೆಗಳು ಗರಿಷ್ಠ ಎಂದರೆ ಗಂಟೆಗೆ ೧೦–೨೦ ಬೀಳಬಹುದಾದರೂ ಚಂದ್ರನ ಬೆಳಕು ಹೆಚ್ಚಾಗಿರುವುದರಿಂದ ಅಷ್ಟೇನೂ ಅದ್ಭುತವಾಗಿ ಕಾಣುವುದಿಲ್ಲ.

೨೧ರಂದು ಉತ್ತರಾಯಣ ; ಅಂದರೆ ಹಗಲಿನ ಅವಧಿ ಕನಿಷ್ಠವಾಗಿರುತ್ತದೆ. ಚಳಿಗಾಲದ ಪರಿಣಾಮ ಸ್ಪಷ್ಟವಾಗಿ ಗೋಚರಿಸುವುದು.

ಉ

ಕುಂತಿ

ನಕುಲ

ವೃಷಭ

ಮೇಷ

ಪೂ

ಪ

ಮೀನ

ಗರುಡ

ಕುಂಭ

ಮಕರ

ವೈತರಣಿ

ಶುಕ್ರ

ಬುಧ

ತಿಮಿಂಗಿಲ

ಮಕರ

ಬಕ

ದ



*ಡಿಸೆಂಬರ್ ೩ರ ಸಂಜೆ ಚಂದ್ರ, ಶುಕ್ರ ಮತ್ತು ಬುಧ*

**ಖಗೋಳ ದಿನಚರಿ**

೩ ಶುಕ್ರ ಚಂದ್ರ ಜೋಡಿ
೫ ಮಂಗಳ ಚಂದ್ರ ಜೋಡಿ
೬ ನೆಪ್ಚ್ಯೂನ್ ಗ್ರಹದ ಆಚ್ಛಾದನೆ
೭ ಚಾಂದ್ರಮಾಸದ ಮೊದಲ ಪಾದ
೧೦ ಬುಧ ಗ್ರಹದ ಗರಿಷ್ಠ ಕೋನೋನ್ನತಿ
೧೨ ಜೆಮಿನಿಡ್ಸ್ ಉಲ್ಕಾವೃಷ್ಟಿ
೧೩ ರೋಹಿಣಿ ಚಂದ್ರ ಜೋಡಿ
೧೪ ಹುಣ್ಣಿಮೆ ೫:೩೦ಕ್ಕೆ
೧೮ ಮಘ – ಚಂದ್ರ ಜೋಡಿ
೨೧ ಚಾಂದ್ರಮಾಸದ ಕೊನೆಯ ಪಾದ
ಉತ್ತರಾಯಣ ೧೫:೩೦ಕ್ಕೆ
೨೨ ಮುಂಜಾವು ಗುರು – ಚಂದ್ರ ಜೋಡಿ
೨೩ ಚಿತ್ರಾ ಚಂದ್ರ ಜೋಡಿ
೨೭ ಶನಿ ಚಂದ್ರ ಜೋಡಿ
೨೮ ಬುಧ ಗ್ರಹದ ಯುತಿ
೨೯ ಬುಧ ಚಂದ್ರ ಜೋಡಿ
ಅಮಾವಾಸ್ಯೆ ೬:೩೦ಕ್ಕೆ

(* ಛಾಯಾಗ್ರಹಣಕ್ಕೆ ಸದವಕಾಶ)

**ಡಾ॥ ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್
ಬೆಂಗಳೂರು – ೫೬೦ ೦೦೧

# ನೀರ ಹೆಣ



ತಿಂಗಳ ಕಥೆ

ಡಾ|| ಶಿವರಾಮ ಅಸುಂಡಿ

ಅತ್ತೂ ಅತ್ತೂ ಕಣ್ಣೀರೇ ಬತ್ತಿಹೋಗಿದ್ದರೂ ಬುಡ್ಡಮ್ಮನ ರೋದನೆ ಮುಂದುವರಿದಿತ್ತು. ಎದುರಿಗಿನ ನದಿಯನ್ನು ನೋಡುವುದು, ಗೋಳೋ ಎಂದು ಅಳುವುದು ಮುಂದುವರಿದೇ ಇತ್ತು. ಇಡೀ ಊರೇ ಅವಳನ್ನು ಸಂತೈಸುತ್ತಿದ್ದರೂ ಸಮಾಧಾನಗೊಳ್ಳುವ ಸ್ಥಿತಿಯಲ್ಲಿರಲಿಲ್ಲ. ಅವಳ ಕಣ್ಣೀರ ಕೋಡಿಯಿಂದಲೇ ತುಂಬಿತೇನೋ ಎನ್ನುವಂತೆ ಮಾಂಜ್ರಾ ನದಿ ತುಳುಕುತ್ತಿತ್ತು. 'ಯಂಗಾದ್ರಾ ಮಾಡಿ ಅವ್ನ ವೊರಾಗ್ ಕರ್ಕಂಬರ್ರಪ್ಪೋ... ಏನನ್ನಾ ಮಾಡ್ರಪ್ಪೋ... ನಿಮಗ್ ಕೈಮುಗೀತೀನ್ರಪ್ಪೋ...' ಎಂದು ಸಂತೈಸಲು ಬಂದವರನ್ನು ಬುಡ್ಡಮ್ಮ ಬೇಡಿಕೊಳ್ಳುತ್ತಿದ್ದಳು. 'ಸಮಾಧಾನ್ ಮಾಡ್ಕ್ಯ ಬುಡ್ಡೀ... ಏನಾಗಲ್ಲಾ... ಊರಂಬೋ ಊರೇ ನಿನ್ ಸಲ್ಯಾಗ್ ಇಲ್ಲೀಗ್ ಬಂದಾದ... ಧೈರ್ಯಾ ತಂದ್ಕಾ...' ಎಂದು ಬೀರವ್ವ ಬುಡ್ಡಮ್ಮಳಿಗೆ ಸಮಾಧಾನ ಹೇಳಿದ್ದಳಾದರೂ ಆಕೆಗೆ ಗೊತ್ತಿಲ್ಲದೆಯೇ ಕಣ್ಣಂಚಿನಲ್ಲಿ ನೀರು ಬಂದಿತ್ತು.

'ಅಯ್ಯೋ ಇದ್ರ ಅಣೀಬರಾನೇ ಇಷ್ಟ್... ಬ್ಯಾಕಂದಾಗ ಇದ್ರಾಗ್ ಒಂದ್ ಹನೀನೂ ನೀರಿರೋದಿಲ್ಲ. ಬ್ಯಾಡಂದಾಗ ಮಾತ್ರಾ ಥೈ ಅಂತ ಕುಣಕೋತ ಬರ್ತೈತೀ... ಹಿಂಗ್ ಬಂದ್ ಹಂಗ್ ವೋಗೋದ್ರಾಗ್ ಯಾರ್ನಾರಾ ಎತ್ತಿಕೊಂಡೇ ವೋಗ್ತೈತೀ...! ಎಲ್ಲಾ ನಮ್ ಕರ್ಮಾ...' ಎಂದು ಬಸಮ್ಮ ನದಿಯನ್ನು ದುರುಗುಟ್ಟಿ ನೋಡಿದ್ದಳು. ಬೀರವ್ವ ಮತ್ತು ಬಸಮ್ಮಳ ಮಾತು ಕೇಳುತ್ತಿದ್ದಂತೆಯೇ ಬುಡ್ಡಮ್ಮನ ಕಣ್ಣೀರ ಕೋಡಿ ಕಟ್ಟೆಯೊಡೆಯಿತು. 'ನೋಡೇ ಯಕ್ಕಾ... ನನಗಿಂಗಾಯ್ತೂ... ಆ ದ್ಯಾವ್ರೀಗೆ ನನ್ಮ್ಯಾಲ್ಯಾಕ್ ಸಿಟ್ಟೋ... ನಾನೇನ್ ತಪ್ಪ್ ಮಾಡೀನೀ... ನನ್ ಮಕ್ಳೇನ್ ಪಾಪಾ ಮಾಡ್ಯಾವಾ...' ಎಂದು ಹಣೆ ಹಣೆ ಬಡಿದುಕೊಂಡಿದ್ದಳು. ಬುಡ್ಡಮ್ಮಳಿಗೆ ಸಾಥ್ ಕೊಡುವಂತೆ ನೆರೆದ ಮಹಿಳೆಯರೆಲ್ಲರೂ ಒಂದೇ ಸಮನೆ ಅತ್ತಿದ್ದರಿಂದ ಇಡೀ ಪ್ರದೇಶದಲ್ಲಿ ಅಳು ಮಾರ್ದನಿಸಿತು. 'ಆಗೋದ್ ಆಗೋಗ್ಯಾದ. ಆಕೀಗೇ ಸಮಾಧಾನ ಯೇಳೋದ್ ಬಿಟ್ಟು, ನೀವೂ ಅತ್ಕೊಂತಾ ಕುಂತ್ರಾ ಯಂಗ್...' ಎಂದು ಗುಂಪನ್ನು ಗದುರಿಕೊಂಡಿದ್ದ ಶಿವರಾಯಪ್ಪ, ಮುಂದಿನ ವ್ಯವಸ್ಥೆ ಮಾಡಲೆಂದು ಯುವಕರನ್ನು ಕರೆದುಕೊಂಡು ಊರ ಕಡೆ ಮುಖ ಮಾಡಿದ್ದ. ಅಲ್ಲಿಂದ ಹೊರಟವರನ್ನು ತದೇಕ ದೃಷ್ಟಿಯಿಂದ ನೋಡುತ್ತಿದ್ದ ಬುಡ್ಡಮ್ಮನ ಕಿವಿಗೆ ಅದೇ ಮಾತುಗಳು ಪದೇ ಪದೇ ಅಪ್ಪಳಿಸಿ, ಬೆಚ್ಚಿಬೀಳುವಂತೆ ಮಾಡಿದ್ದವು. 'ಯಕ್ಕೋ ಈರಣ್ಣಣ್ಣಾ ನದ್ಯಾಗ್ ಜಾರ್ಕೊಂಡ್ ಹ್ವಾದಾ... ಜಾರ್ಕೊಂಡ್ ಹ್ವಾದಾ...' ಎಂಬ ಮಾತುಗಳು ಮೈ ಬೆವರುವಂತೆ ಮಾಡಿದ್ದವು.

* * *

ಹೊಲಕ್ಕೆ ಹೋದ ಗಂಡನಿಗೆ ಬುತ್ತಿ ತೆಗೆದುಕೊಂಡು ಹೋಗೋಣವೆಂಬ ಸಿದ್ಧತೆಯಲ್ಲಿದ್ದ ಬುಡ್ಡಮ್ಮಳ ಕಿವಿಗೆ 'ಯಕ್ಕೋ ನೀರ್ ಕುಡ್ಯಾಕ್ ಹ್ವಾದ್ ಈರಣ್ಣಣ್ಣಾ ... ನದ್ಯಾಗಾ ಜಾರ್ಕೊಂಡ್ ವೋಗ್ಯಾನಕ್ಕೋ... ನೋಡ್ ನೋಡತಿರ್ಲಿಕ್ಕೇ ಮಂಗಮಾಯಾ ಆಗಿಬಿಟ್ಟಾ ... ಮುಳಿಗೋದ್ನೋ... ಏನಾದ್ನೋ...' ಎಂಬ ನಾರಾಣಿ ಮಾತುಗಳು ಬರಸಿಡಿಲಿನಂತೆರಗಿದ್ದವು. ಬುತ್ತಿ ಕಟ್ಟುವುದನ್ನು ಬಿಟ್ಟು ಬುಡ್ಡಮ್ಮ ದಡಬಡಾಯಿಸಿ ಓಡಿದ್ದಳು. 'ಯಪ್ಪಾ ಯೇನಾಯ್ತೋ... ಅವ್ರೀಗೇನಾಯ್ತೋ...!' ಎಂದು ಬುಡ್ಡಮ್ಮ ಒಂದೇ ಏಟಿಗೆ ಓಡಿದ್ದನ್ನು ನೋಡಿ, ಚಾವಡಿ ಕಟ್ಟೆಯ ಮೇಲೆ ಕುಳಿತವರು ಗಾಬರಿಯಾಗಿದ್ದರು. ಕೆಲವರು ದಡಬಡಾಯಿಸಿ ಆಕೆಯ ಬೆನ್ನು ಹತ್ತಿ ಓಡಿದ್ದರು.

ಮಹಾರಾಷ್ಟ್ರದಲ್ಲಿ ಒಂದಿಷ್ಟು ಮಳೆಯಾಗಿದ್ದರಿಂದ ಮಾಂಜ್ರಾ ನದಿಗೆ ಹೊಸ ನೀರು ಬಂದು ಧನೇಗಾಂವ್ ಬ್ಯಾರೇಜ್ ತುಂಬಿತ್ತು. ಹಿನ್ನೀರು ವಿಶಾಲ ವ್ಯಾಪ್ತಿಯಲ್ಲಿ ಹರಡಿ ನದಿ ಉಕ್ಕಿ ಹರಿಯುತ್ತಿದೆ ಎಂಬಂತೆ ಭಾಸವಾಗುತ್ತಿತ್ತು.

ಈರಣ್ಣ ಎಲ್ಲಿ ಎಂದು ಎಲ್ಲರೂ ನದಿಯುದ್ದಕ್ಕೂ ದಿಟ್ಟಿಸಿ ನೋಡಿದ್ದರು. ಹುಡುಕಾಡುತ್ತಲೇ 'ಎಲ್ಲಲೇ ಕಾಣವಲ್ಲಾ...?' ಎಂದು ಕೆಲವರು ನಾರಾಣಿಯನ್ನು ಪ್ರಶ್ನಾರ್ಥಕವಾಗಿ ನೋಡಿದ್ದರು. ಅವನು ಮಾತ್ರ ಆ ಕಲ್ಲಿನ ಮೇಲೆ ಕುಳಿತಿದ್ದ, ಹಂಗೇ ನೀರು ಬಂತು, ಹಿಂಗೇ ಜಾರಿದ ಎಂಬಿತ್ಯಾದಿಯಾಗಿ ಹೇಳಿದ್ದ. ಆದರೆ ಅವನು ಹೇಳುತ್ತಿದ್ದ ಕಲ್ಲೇ ಕಾಣಿಸಲಿಲ್ಲ. ಬಹುಶಃ ನೀರಿನಲ್ಲಿ ಮುಳುಗಿರಬೇಕೆಂದು ಕೆಲವರು ಸುಮ್ಮನಾದರು. ಅದೇ ವೇಳೆಗೆ ಬುಡ್ಡಮ್ಮ ಬೋರೆಂದು ಅಳುತ್ತಾ ಗಂಡನನ್ನು ಹುಡುಕಲೆಂದು ನದಿಯೊಳಗೇ ಇಳಿಯಲು ಮುಂದಾಗುತ್ತಿದ್ದಂತೆಯೇ ಅಕ್ಕಪಕ್ಕದಲ್ಲಿದ್ದವರು ಹಿಡಿದು ದಂಡೆಯ ಮೇಲೆ ಕರೆತಂದಿದ್ದರು. 'ನಿನ್ಗೇನ್ ಬುದ್ದೀಗಿದ್ದೀ ಐತ್ಯಾ ಇಲ್ಲಾ... ಅದ್ರಾಗಿಳ್ದ್ ನೀನೂ ಸಾಯ್ಬೇಕಂತ ಮಾಡೀಯೇನ್... ನಿನ್ ಗಂಡಾ ಅಲ್ಲಿ ಮುಳುಗ್ಯಾನೋ... ಇಲ್ಲೋ.. ಯಾರಿಗ್ಗೊತ್ತ್... ನಮ್ಗಂತೂ ಏನೂ ತಿಳಿಯಲ್ಲಾಗ್ಯಾದ್. ಸ... ಸೊಲೂಪ್ ತಡೀ... ನೋಡಾನ' ಎಂದು ಕೃಷ್ಣಪ್ಪ ಗದುರಿಕೊಂಡಿದ್ದ.




'ಲೇ, ಯಾರ್ಗೆನ್ನಾ ಈಸಾಡಕ್ ಬರ್ತಿದ್ರಾ ಇಳೂದ್ ನೋಡ್ರೋ... ನಾಣಿ ಯೇಳಿದ್ ಜಾಗದ್ ಬುಡದಾಗ ಕೈಯಾಡ್ರೋ... ನೀರಿನ್ಯಾಗ್ ಜಾಲಾಡಿದ್ರಾ ಏನಾದ್ರಾ ಸುಳೀವ್ ಸಿಕ್ರೂ ಸಿಗ್ಬೋದ್...' ಎಂದು ಕೃಷ್ಣಪ್ಪ ಸೂಚಿಸುತ್ತಿದ್ದಂತೆಯೇ ಇಬ್ಬರು ಯುವಕರು ನೀರಿಗೆ ಜಿಗಿದು ಮುಳುಗಿ, ತೇಲಿ ಈರಣ್ಣನನ್ನು ಹುಡುಕುವ ಯತ್ನ ಮಾಡಿದ್ದರು. ಅದೇ ವೇಳೆಗೆ ಬಂದ ಈರಣ್ಣನ ಮಗ ತಿಪ್ಪೇಶಿ, ಉಕ್ಕಿಬರುತ್ತಿದ್ದ ದುಃಖವನ್ನು ಅದುಮಿಟ್ಟುಕೊಂಡು ನೀರಿಗೆ ಧುಮುಕಿದ್ದ. ನೀರಿನಲ್ಲಿ ಹುಡುಕುವವರ ಸಂಖ್ಯೆ ಹೆಚ್ಚಾಯಿತೇ ಹೊರತು, ಈರಣ್ಣನ ಸುಳಿವು ಸಿಕ್ಕಲಿಲ್ಲ. 'ಆ ನಾಣೀ ಸುಳ್ ಯೇಳ್ತಿರ್ಬೇಕ್ ನೋಡ್ರೋ... ಇಲ್ಲಾಂದ್ರ ಇಷ್ಟೊತ್ತಿಗೆ ಯಣಾನಾದ್ರೂ ಸಿಗ್ಬೇಕಾಗಿತ್ತೂ...?' ಎಂದು ಶಿವರಾಯಪ್ಪ ಅನುಮಾನ ವ್ಯಕ್ತಪಡಿಸಿದ್ದ, "ನಮ್ಮಮ್ನಾಣೆ ಇಲ್ಲೇ ಈರಣ್ಣ ನೀರಿನ್ಯಾಗ್ ಬಿದ್ದಿದ್ದೂ... ಎತ್ತೂಳ್ಗೆ ನೀರ್ ಕುಡ್ಸಾಕ್ ಬಂದಾಗ್ ನೋಡೀನೀ... ಸುಳ್ಳಲ್ಲಣ್ಣೋ..." ಎಂದು ತಲೆಮೇಲೆ ಕೈಯಿಟ್ಟು ನಾರಾಣಿ ಆಣೆ-ಪ್ರಮಾಣ ಮಾಡಿದ್ದ. ಶೋಧಕಾರ್ಯ ಮುಂದುವರಿಯಿತಾದರೂ ಫಲಿತಾಂಶ ಸಿಕ್ಕಿರಲಿಲ್ಲ. ನೀರಿನ ಹರಿವಿಗೆ ಮುಂದೆ ಏನಾದರೂ ಕೊಚ್ಚಿಕೊಂಡು ಹೋಗಿರಬಹುದೆಂದು ನದಿಯುದ್ದಕ್ಕೂ, ದಂಡೆಯ ಮೇಲಿನಿಂದ ಪರಿಶೀಲನೆ ಮಾಡಲಾಯಿತು. ಕೊನೆಗೆ ಪೊಲೀಸರಿಗೆ ದೂರು ನೀಡಲಾಯಿತು.

* * *

ಕಳೆ ತೆಗೆಯಲು ಹೋದ ಸಂದರ್ಭದಲ್ಲಿ ದಾಹ ಇಂಗಿಸಿಕೊಳ್ಳಲು ನದಿಗೆ ಇಳಿದಾಗ ದುರ್ಘಟನೆ ನಡೆದುಹೋಗಿತ್ತು. ಈರಣ್ಣ ಬದುಕಿದ್ದಾನೋ, ಮುಳುಗಿ ಸತ್ತೇಹೋದನೋ ಎಂಬ ಗೊಂದಲ, ಆತಂಕ ಕುಟುಂಬದ ಸದಸ್ಯರನ್ನು ಗಲಿಬಿಲಿಗೊಳಿಸಿತ್ತು. ಪೊಲೀಸರು ಬರುತ್ತಿದ್ದಂತೆಯೇ ಬುಡ್ಡಮ್ಮ ಕೈಮುಗಿದು ಬೇಡಿಕೊಂಡಿದ್ದಳು. ಪತಿಯನ್ನು ಹುಡುಕಿಕೊಡುವಂತೆ ಕಾಲಿಗೆ ಬಿದ್ದು ಬೇಡಿಕೊಂಡಿದ್ದಳು. ಪೊಲೀಸರು ಮಾತ್ರ ಜೀಪ್‌ನಲ್ಲಿ ನದಿಯುದ್ದಕ್ಕೂ ಒಂದು ರೌಂಡ್ ಹಾಕಿ, ಹುಡುಕುವ ಶಾಸ್ತ್ರ ಮುಗಿಸಿದ್ದರು. ಈರಣ್ಣ ಮುಳುಗಿದ್ದಾನೆಂದು ಸುದ್ದಿ ಮುಟ್ಟಿಸಿದ್ದ ನಾರಾಣಿಗೆ ತರಹೇವಾರಿ ಪ್ರಶ್ನೆ ಹಾಕಿದ್ದರು. ಸರ್ಕಾರ ಪರಿಹಾರ ನೀಡುತ್ತದೆಂಬ ಆಸೆಯಲ್ಲಿ ಆತ್ಮಹತ್ಯೆ ಮಾಡಿಕೊಂಡಿದ್ದಾನಾ ಹೇಗೆಂದು ಅನುಮಾನ ವ್ಯಕ್ತಪಡಿಸಿದ್ದರು. ಏನಾದರೂ ಸುಳಿವು ಸಿಕ್ಕಲ್ಲಿ ಕೂಡಲೇ ಠಾಣೆಗೆ ಬಂದು ತಿಳಿಸುವಂತೆ ಸೂಚಿಸಿದ್ದರು. "ಅಲ್ಲಾ ಸಾಮೀ... ನೀರಿನ್ಯಾಗ್ ಮುಳುಗಿದೋರ್ನ್ನ ಹುಡುಕ್ತೀರಂತ ನಿಮಗ್ ಏಳಿದ್ರಾ, ನೀವ್ ಬಂದ್ ನಮ್ಗೇ ಸುದ್ದಿ ಮುಟ್ಸಂತೀರೀ...!" ಎಂಬ ಕೃಷ್ಣಪ್ಪನ ಉದ್ಗಾರಕ್ಕೆ, "ಯ್ಯೋ... ಯಾವೂರ್ ದಾಸಯ್ಯ ನೀನ್... ನಮ್ಗೇನ್ ಇದೊಂದೇ ಕೆಲ್ಸಾನಾ... ಅವ್ನೇನ್ ನಮ್ಮನ್ ಕೇಳಿ ನೀರ್ನ್ಯಾಗ್ ಇಳುದ್ನಾ...? ಚಾನ್ಸ್ ಸಿಕ್ತಂತಾ ಎಲ್ಲಾರೂ ನಮ್ಮನ್ನೇ ದಬಾಯ್ಸೋರು... ಬಾಯಿ ಐತಂತಾ ಬಡಾಯಿಸ್ಬ್ಯಾಡಾ... ಅವ್ನೇನ್ ನೀರಿನ್ಯಾಗ್ ಮುಳುಗ್ಯಾನೋ... ಇಲ್ಲಾ ಮುಳುಗಿದಂಗ್ ನಾಟ್ಕಾ ಮಾಡಿ ಯಾವಾಕಿ ಜೋಡಿ ಓಡೋಗ್ಯಾನೋ. ಯಾರ್ನೋಡ್ಯಾರ್... ಅವ್ನ್ಯಾವೋನೋ ಯೇಳೀದ್ನಂತಾ... ಇವ್ರ್ ಬಂದ್ ಕಂಪ್ಲೇಂಟ್ ಕೊಟ್ರಂತಾ... ನಾವ್ ಬಂದ್ ವುಡುಕ್‌ಬೇಕಂತಾ... ಥತ್ತೇರಿಕೀ..." ಎನ್ನುತ್ತಾ ಪೇದೆ ರಾಮಪ್ಪ ಲಾಠಿ ಕುಕ್ಕಿ ಜೀಪ್ ಹತ್ತಿದ್ದ.

ಸೂರ್ಯೋದಯದ ವೇಳೆಗೆ ಬುಡ್ಡಮ್ಮ ಹೊಲದ ಮಧ್ಯದಲ್ಲಿ ಕುಳಿತು ತದೇಕಚಿತ್ತದಿಂದ ತೊಗರಿ ಗಿಡಗಳನ್ನು ನೋಡಿದ್ದಳು. ಬೆದರುಬೊಂಬೆಯಂತೆ ಕುಳಿತಿದ್ದ ಅವಳನ್ನು ಸೂರ್ಯನ ಕಿರಣಗಳೇ ಚುರ್‌ಗುಟ್ಟುವ ಮೂಲಕ ಬಡಿದೆಬ್ಬಿಸಿದ್ದವು. ಕನಸಿನಿಂದ ಎಚ್ಚೆತ್ತವಳಂತೆ ಬೆಚ್ಚಿದ ಬುಡ್ಡಮ್ಮ ಮಗನನ್ನು ಕೂಗಿದ್ದಳು. ಮುಖ ಉಜ್ಜುತ್ತಾ ಮೇಲೆದ್ದ ತಿಪ್ಪೇಶಿ, ನದಿ ಕಡೆ ಕಣ್ಣುಹಾಯಿಸಿದ್ದ. ನೀರಿನ ಮಧ್ಯದಲ್ಲಿ ಏನೋ ತೇಲಿದಂತೆ ಭಾಸವಾಗಿ ತಾಯಿಯನ್ನು ಕೂಗಿ ಕರೆದಿದ್ದ. ಮಗನ ಕೂಗಾಟ ಕೇಳಿ ಓಡೋಡಿ ಬಂದ ಬುಡ್ಡಮ್ಮ ನೀರಿನಲ್ಲಿ ತೇಲಿರುವ ಆಕೃತಿಯನ್ನು ನೋಡಿ, "ಅಯ್ಯೋ ಘಾತಾಯ್ತಲ್ಲೋ ಮಗಾ... ಎಂಥಾ ಕೆಲ್ಸಾಯ್ತಲ್ಲೋ... ಬುಟ್ಹೋದ್ನಲ್ಲಪ್ಪೋ ನಮ್ಮನ್ನೆಲ್ಲಾ ಬುಟ್ಹೋದ್ನಲ್ಲೋ..." ಎಂದು ತೆಕ್ಕೆಗೆ ಬಿದ್ದು ಅತ್ತಿದ್ದಳು. ತಿಪ್ಪೇಶಿಯೂ ಅಮ್ಮನ ತೋಳಲ್ಲಿ ಮುಖವಿಟ್ಟು ಗಳಗಳನೆ ಅತ್ತಿದ್ದ. ನೀರಿನಲ್ಲಿ ತೇಲುತ್ತಿರುವ ಆಕೃತಿಯ ಮೇಲಿನ ಬಟ್ಟೆಯನ್ನು ಗಮನಿಸಿದ ನಂತರ ಅದು ಈರಣ್ಣನ ಶವ ಎಂಬುದು ಇಬ್ಬರಿಗೂ ಖಾತ್ರಿಯಾಗಿತ್ತು. ಕೂಡಲೇ ತಿಪ್ಪೇಶಿ ಊರಿನ ಕಡೆ ಓಡೋಡಿ ಬಂದು, ನರಸಿಂಹಗೌಡ ಮತ್ತಿತರರಿಗೆ ಸುದ್ದಿ ಮುಟ್ಟಿಸಿದ್ದ.

ಇಡೀ ಊರೇ ನದಿ ದಂಡೆಯ ಮೇಲೆ ಜಮಾಯಿಸಿದ ನಂತರ ಪೊಲೀಸರ ಜೀಪು, ಭರ್ ಎಂದು ಸದ್ದು ಮಾಡುತ್ತಾ ಬಂದಿತ್ತು. ನದಿಯ ಮಧ್ಯದಲ್ಲಿ ಹೆಣ ಇದೆ ಎಂದು ಖಾತ್ರಿಪಡಿಸಿಕೊಂಡರೂ ಪೊಲೀಸರು ಅದನ್ನು ತೆಗೆಯಲು ಮುಂದಾಗಲಿಲ್ಲ. ಯಾಕೆ ವಿಳಂಬ ಎಂದು ನರಸಿಂಹಗೌಡ ಪ್ರಶ್ನಿಸುತ್ತಿದ್ದಂತೆಯೇ, "ನೋಡ್ರೀ ಗೋಡ್ರೇ... ಸತ್ತವ್ನೂ ನಿಮ್ಮೂರ್ನೋನೇ. ಆದ್ರಾ ಹೆಣಾ ನಮ್ ಬಾರ್ಡರ್‌ನಲ್ಲಿಲ್ಲ. ಅದೂ ಪಕ್ಕದ ರಾಜ್ಯದಾಗ ಬರ್ತೈತೀ. ನೀವ್ ಮಾರಾಸ್ತ್ರಾ ಪೊಲೀಸ್ರ್‌ಗ್ ಸುದ್ದೀ ಮುಟ್ಸೋದ್ ಒಳ್ಳೇದ್..." ಎಂದು ಇನ್ಸ್‌ಪೆಕ್ಟರ್ ಉಮೇಶ ಹೇಳುತ್ತಿದ್ದಂತೆಯೇ ಮುಂದೇನು ಮಾಡುವುದೆಂಬ ಜಿಜ್ಞಾಸೆ ಎಲ್ಲರನ್ನೂ ಕಾಡಿತು. ಇನ್ಸ್‌ಪೆಕ್ಟರ್ ಮಾತಿನಿಂದ ಅಸಮಾಧಾನಗೊಂಡ ತಿಪ್ಪೇಶಿ, "ಅವ್ರಿವ್ನ್ ಏನ್ ಕೇಳ್ಬೇಕ್ ನಡೀರೀ. ಸತ್ತಿರೋದ್ ನಮ್ಮಪ್ಪ. ನಾವೇ ತೊಗೊಂಡ್ ಬಂದ್ ಮಣ್ ಮಾಡೋನ್" ಎಂದು ಕಣ್ಣೀರು ಒರೆಸಿಕೊಳ್ಳುತ್ತಾ ನದಿಗೆ ಇಳಿಯಲು ಮುಂದಾಗಿದ್ದ. "ಏಯ್ ತಮ್ಮಾ ಅದೂ ಪೊಲೀಸ್ ಕೇಸದಾ. ಅಪ್ಪಿ-ತಪ್ಪೀ ಹೆಣಾ ಮುಟ್ಟೀಯಂದ್ರಾ ನಿನ್ನೂಗ ವೊಳಾಗಾಕ್ಬೇಕಾಗ್ತದಾ. ನೀನೇ ನಿಮ್ಮಪ್ಪನ್ ಮಡ್ರ ಮಾಡಿ, ನದ್ಯಾಗ್ ತಂದಾಕೀ ಅನ್ಬೇಕಾಗ್ತದಾ. ಹೆಣಾನಾ ಯಾರೂ ಮುಟ್ಟಂಗಿಲ್ಲ. ವೋಗೀ ಮಾರಾಸ್ತ್ರ ಪೊಲೀಸ್ರಗಿ ಸುದ್ದಿ ಮುಟ್ಟುಸ್ರೀ..." ಎಂದು ಅಪ್ಪಣೆ ಮಾಡಿ, ಇನ್ಸ್‌ಪೆಕ್ಟರ್ ಅಲ್ಲಿಂದ ಕಾಲ್ಕಿತ್ತಿದ್ದ. ಪೊಲೀಸರ ಮಾತು ಕೇಳಿ ಆಕಾಶವೇ ತಲೆ ಮೇಲೆ ಕುಸಿದವಳಂತೆ, ಬುಡ್ಡಮ್ಮ ನೆಲದ ಮೇಲೆ ಬಿದ್ದು ಹೊರಳಾಡಿದ್ದಳು. ಕೆಲವರು ಆಕೆಯನ್ನು ಸಮಾಧಾನಿಸಲು ಮುಂದಾದರೆ, ಮತ್ತೆ ಕೆಲವರು ತಿಪ್ಪೇಶಿಯನ್ನು ಕರೆದುಕೊಂಡು ಮಹಾರಾಷ್ಟ್ರ ಪೊಲೀಸರಿಗೆ ಸುದ್ದಿ ಮುಟ್ಟಿಸಲು ತೆರಳಿದ್ದರು.

ತಿಪ್ಪೇಶಿ ದೂರು ನೀಡಿದ ಹಲವು ಗಂಟೆಯ ನಂತರ ಮಹಾರಾಷ್ಟ್ರ ಪೊಲೀಸರು ನದಿ ದಂಡೆಗೆ ಬಂದು ಪರಿಶೀಲನೆ ಮಾಡಿದ್ದರು. ಹೆಣವನ್ನು ನೋಡಿ ದೂರು ಕೊಟ್ಟು ಬಂದ ತಿಪ್ಪೇಶಿ ಮತ್ತಿತರರ ವಿರುದ್ಧ ಕಿಡಿಕಾರಿದ್ದರು. ನದಿ ಮಧ್ಯದಲ್ಲಿನ ಹೆಣ ತಮ್ಮ ವ್ಯಾಪ್ತಿಗೆ ಬರುವುದಿಲ್ಲ. ಏನಿದ್ದರೂ ಕರ್ನಾಟಕ ರಾಜ್ಯಕ್ಕೆ ಸಂಬಂಧಿಸಿದ್ದು, ನಿಮ್ಮ ಪೊಲೀಸರಿಗೇ ದೂರು ನೀಡಿಕೊಳ್ಳಿ. ನಮಗೆ ಸಂಬಂಧವೇ ಬರುವುದಿಲ್ಲವೆಂದಿದ್ದರು. "ಅಲ್ಲಾ ಸಾಬ್ರೇ, ನಮ್ ಪೊಲೀಸ್ರೂ ನಮಗ್ ಸಂಬಂಧಾ ಇಲ್ಲಾ ಅಂತಾರ. ನೀವ್ ನೋಡಿದ್ರಾ ನಮ್ಗೂ ಸಂಬಂಧಿಲ್ಲಾ ಅಂತೀರಿ. ಹಂಗಾದ್ರಾ ನಾವೇನ್ ಸೆಂಟ್ರಲ್ ಗೋರ್ಮೆಂಟ್‌ಗೆ ಕಂಪ್ಲೇಂಟ್ ಮಾಡ್ಬೇಕಾ...?" ಎಂದು ನರಸಿಂಹಗೌಡ ಪ್ರಶ್ನಿಸಿದ್ದ. "ನೋಡ್ ಪಟೇಲಾ... ನಡೂವಿರೋ ಹೆಣಾ ಈ ಕಡೀ ದಂಡೆಗೆ ಬಂದ್ರ ನಮಗ್ ಸಂಬಂಧಾ ಬರ್ತೈತಿ. ಅಂಗೇನಾದ್ರಾ ಯಣಾ ಈ ಕಡೀ ಬಂತಂದ್ರಾ ಏಳ್ರೀ... ಮುಂದ ವಿಚಾರ ಮಾಡೋನ..." ಎಂದು ಪೊಲೀಸರು ಹೊರಟುಹೋಗಿದ್ದರು. ಬುಡ್ಡಮ್ಮನಿಂದ

ಹಿಡಿದು ಇಡೀ ಲಖನಗಾಂವ ಜನರಿಗೆ ದೊಡ್ಡ ಪೇಚಿಗಿಟ್ಟುಕೊಂಡಿತು.

ಮತ್ತೆ ಕರ್ನಾಟಕ ಪೊಲೀಸರ ಬಳಿ ತೆರಳಿದ ಗ್ರಾಮಸ್ಥರು, ಮಹಾರಾಷ್ಟ್ರ ಪೊಲೀಸರು ಹೇಳಿದ ವಿಷಯವನ್ನು ಮುಟ್ಟಿಸಿದ್ದರು. "ಅದೇನಪ್ಪಾ ನಾವೂ ಹೇಳಿದ್ದು, ಈ ದಂಡಿಗೆ ಬಂದ್ರೇ ಮಾತ್ರಾ ನಮಗ್ ಸಂಬಂಧಾ ಬರ್‍ತದಾ. ಇಲ್ಲಾಂದ್ರ ಏನೂ ಮಾಡೋಕಾಗಲ್ಲಾ... ಆ ನದೀ ಏನಿದ್ರೂ ಅವ್ರ ರಾಜ್ಯದಾಗೈತೀ... ಅವ್ರೇ ಅದ್ನ ನೋಡಿಕ್ಯಾಬೇಕ್..." ಇನ್ಸ್‌ಪೆಕ್ಟರ್ ಉಮೇಶ ಮಾತು ಮುಗಿಸಿದ್ದ. "ಹೀಂಗಂದ್ರಾ ಯಂಗ್ ಸಾಬ್ರಾ... ನೀವೇ ದೊಡ್ ಮನ್ಸ್ ಮಾಡ್ರೀ.. ಯಂಗಾದ್ರಾ ಮಾಡಿ ಅದ್ನ್ ವೊರಾಗ್ ತೆಗೂಸ್ರೀ... ಮೂರ್ ದಿನಾಯ್ತೂ... ಕೊಳ್ತಿರತದ ನೋಡ್ರೀ ಪುಣ್ಯಾ ಬರ್‍ತೈತೀ..." ಎಂದು ಪೀರಪ್ಪ ಮನವಿ ಮಾಡಿಕೊಂಡಿದ್ದ. ಊರಿನವರ ಮಾತಿಗೆ ಇನ್ಸ್‌ಪೆಕ್ಟರ್ ಕ್ಯಾರೇ ಎಂದಿರಲಿಲ್ಲ.

ನಿರಾಸೆಯಿಂದಲೇ ನದಿ ದಂಡೆಗೆ ಬರುತ್ತಿದ್ದ ಜನರನ್ನು ಎದುರ್ಗೊಂಡ ಬುಡ್ಡಮ್ಮ, "ಏನಾಯ್ತೂ ಏನಾಯ್ತೂ..." ಎಂದು ಪ್ರಶ್ನಿಸಿದ್ದಳು. "ಏನಾಯ್ತಂದ್ರಾ...? ನಿನ್ ತಲೀ ಆಯ್ತೂ... ಸತ್ತೋನ್ ಸತ್ತಾ ಅಲ್ಲೇ ಸಾಯ್ಬೇಕಿತ್ತಾ" ಎಂದು ತಿಪ್ಪೇಶಿ ರೇಗಿದ್ದ. ಮಗನ ಉತ್ತರದಿಂದ ಕುಪಿತಗೊಂಡ ಬುಡ್ಡಮ್ಮ, ತಿಪ್ಪೇಶಿ ಕೆನ್ನೆಗೆ ಬಾರಿಸಿದ್ದಳು. "ಉಟ್ಸೀದ್ ಅಪ್ಪನ್ ಬಗ್ಗೇ ಮಾತಾಡೋ ಮಾತೇನೋ... ನೀನ್ ನನ್ನೊಟ್ಟ್ಯಾಗೇ ಉಟ್ಟೀನಂತ್ ಅಂದ್ಕೊಂಡಿದ್ದೇನೋ... ಎಲ್ಲಾ ಪರಮಾತ್ಮನಿಚ್ಚಾ... ಅವ್ನಾಟ್ದ್ ಮುಂದೆ ನಾವ್ಯಾಲೆಕ್ಕಾ" ಎಂದು ಆಕಾಶದ ಕಡೆ ಕೈತೋರಿಸಿದ್ದಳು. ನದಿ ಕಡೆ ನೋಡುತ್ತಾ ಗಳಗಳನೆ ಅತ್ತು, ಕುಸಿದು ಕುಳಿತಿದ್ದಳು. ಆ ವೇಳೆ ಬುಡ್ಡಮ್ಮನನ್ನು ಸಂತೈಸುವುದೇ ನೆರೆದವರಿಗೆ ದೊಡ್ಡ ಕೆಲಸವಾಯಿತು.

ಬುಡ್ಡಮ್ಮ ಮತ್ತು ಮಕ್ಕಳು ತೆಕ್ಕೆಗೆ ಬಿದ್ದು ಅಳುವುದು ನಡೆದೇ ಇತ್ತು. ಊರಿನ ಬಹುತೇಕರು ನದಿ ದಂಡೆ ಸೇರಿದ್ದರು. ಎಲ್ಲರ ದೃಷ್ಟಿ ನದಿ ಮಧ್ಯದಲ್ಲಿದ್ದ ಹೆಣದ ಕಡೆ ನೆಟ್ಟಿತ್ತು. ಕೆಲವರು ನೀರಿನ ಅಲೆಗಳನ್ನೇ ದಿಟ್ಟಿಸುತ್ತಿದ್ದರು. ದೊಡ್ಡದಾದ ಗಾಳಿ ನಮ್ಮೂರ ಕಡೆ ಬೀಸಿತೆಂದರೆ ಹೇಗೆ ಎಂದು ಮನದಲ್ಲಿಯೇ ಪ್ರಶ್ನಿಸಿಕೊಂಡಿದ್ದರು. ಆದರೆ ಹುಲ್ಲುಕಡ್ಡಿಯೂ ಅಲುಗಾಡದಷ್ಟು ಗಾಳಿ ಇಲ್ಲದಿದ್ದುದರಿಂದ ನಿರಾಸೆಯಾಯಿತು. ಹೆಣ ಯಾವ ದಂಡೆಗೂ ಬಾರದೇ ಇದ್ದರೆ ಏನು ಮಾಡಬೇಕೆಂದು ತಮ್ಮಲ್ಲಿಯೇ ಪ್ರಶ್ನಿಸಿಕೊಂಡು, ಗಂಭೀರ ಚರ್ಚೆಯಲ್ಲಿ ತೊಡಗಿಕೊಂಡಿದ್ದರು. ಕೆಲವೊಬ್ಬರು ಬೀಡಿ ಸೇದಿ ಬುಸ್ ಬುಸ್ ಎಂದು ಹೊಗೆ ಬಿಟ್ಟು ಮನದಲ್ಲಿನ ದುಗುಡ ನಿವಾರಣೆಗೆ ಆಗಸವನ್ನು ದಿಟ್ಟಿಸಿದ್ದರು. ಇದೆಲ್ಲದರಿಂದಾಗಿ ಇಡೀ ಪರಿಸರ ಬಿಸಿಯೇರಿತ್ತು. ಇದರೊಟ್ಟಿಗೆ ರಣ ಬಿಸಿಲಿನಿಂದ ಬಾಯಾರಿಕೆಯಾಗಿ ಬೊಬ್ಬೆ ಹೊಡೆಯುವಂತಾದರೂ ನದಿಗೆ ಇಳಿದು ಯಾರೂ ನೀರು ಕುಡಿಯುವ ಧೈರ್ಯ ಮಾಡಿರಲಿಲ್ಲ. ಅತ್ತೂ ಅತ್ತೂ ಸುಸ್ತಾಗಿ ಬುಡ್ಡಮ್ಮ ನದಿ ದಂಡೆಯ ಮೇಲೆ ಉಸಿರಿಲ್ಲದವಳಂತೆ ಬೀಳುವ ವೇಳೆಗೆ ಸೂರ್ಯನೂ ಸುಸ್ತಾಗಿ ಪಡುವಣ ದಿಕ್ಕಿಗೆ ಜಾರಿದ್ದ. ಹೊತ್ತು ಮುಳುಗುವ ವೇಳೆಗೆ ಬಹುತೇಕರು ಅಲ್ಲಿಂದ ಕಾಲ್ಕಿತ್ತಿದ್ದರು. ಆ ವೇಳೆಗೆ ನದಿ ಮಧ್ಯದಲ್ಲಿದ್ದ ಶವ ಒಂದಿಷ್ಟು ಸ್ಥಾನಪಲ್ಲಟಗೊಂಡಿತ್ತಾದರೂ, ಯಾವ ದಡವನ್ನೂ ಸೇರದೆ ಜನರ ತಾಳ್ಮೆಗೆ ಸವಾಲೊಡ್ಡಿತ್ತು.

ಇದೇನು ಸದ್ಯಕ್ಕೆ ಬಗೆಹರಿಯುವ ಲಕ್ಷಣವಿಲ್ಲವೆಂದು ನರಸಿಂಹಗೌಡ ಬುಡ್ಡಮ್ಮನ ಕುಟುಂಬವನ್ನು ಸಮಾಧಾನಿಸಿದ್ದ. ಊರಿಗೆ ತೆರಳಿ ಊಟದ ವ್ಯವಸ್ಥೆಯನ್ನೂ ಮಾಡಿಸಿದ್ದ. ಆದರೆ ಒಂದಗುಳನ್ನೂ ಮುಟ್ಟಲು ನಿರಾಕರಿಸಿದ ಬುಡ್ಡಮ್ಮ, ಮಕ್ಕಳಿಗೆ ತಿನ್ನುವಂತೆ ಸಲಹೆ ಮಾಡಿದ್ದಳು. ಇನ್ನೇನು ಮಕ್ಕಳು ತುತ್ತು ಬಾಯಿಗಿಟ್ಟುಕೊಳ್ಳಬೇಕೆನ್ನುವಷ್ಟರಲ್ಲಿಯೇ ಪ್ರತ್ಯಕ್ಷಗೊಂಡಿದ್ದ ರುದ್ರಯ್ಯಸ್ವಾಮಿ, "ತಿನ್ರೀ ತಿನ್ರೀ... ತಿಥೀ ಊಟಾ ತಿನ್ರೀ... ಹೆಣಾನಾ ಮುಂದಿಟ್ಕೊಂಡ್ ತಿನ್ರೀ... ತಿನ್ರೀ..." ಎಂದು ಮಗುಮ್ಮಾಗಿ ನುಡಿದಿದ್ದ. ಸ್ವಾಮಿಯ ಮಾತು ಕೇಳಿ ತಿಪ್ಪೇಶಿ ಮತ್ತು ಅವನ ಸಹೋದರಿಯರು ಕೈಯಲ್ಲಿದ್ದ ತುತ್ತನ್ನು ಬಾಯಿಗಿಟ್ಟುಕೊಳ್ಳುವ ಧೈರ್ಯವಾಗದೆ ನೆಲಕ್ಕೆ ಚೆಲ್ಲಿದ್ದರು. "ಅಲ್ಲಾ ಬುಡ್ಡೀ, ಅವಂತೂ ಸಣ್ ಉಡೂಗ್ರೂ... ನಿನಗ್ ಬುದ್ಧೀ ಬ್ಯಾಡಾ...? ಹೆಣಾನ ಮುಂದಿಟ್ಕಂಡ್ ತಿನ್ನೋದಂದ್ರಾ... ಇಷ್ಟೊತ್ತಿಗೆ ಮೂರ್ ದಿನೂದ್ ಕಾರ್ಯಾ ನಡೂದ್, ಹೆಂಡೆಕೂಳ್ ಆಕ್ಬೇಕಿತ್ತು. ಅಂಥಾದ್ರಾಗ್ ಇನ್ನಾ ಹೆಣಾನೇ ತೆಗ್ದಿಲ್ಲಾ. ಮಣ್ ಮಾಡೋ ಮಾತ್ ದೂರಾನೇ ಉಳೀತು. ಈರ್‍ಯಾ ನದೀಗ್ ಕಾಲಿಟ್ ಗಳ್ಗೀನೇ ಸರಿಯಿಲ್ಲಾ. ಇವ್ನ್ ಸಾವ್ನಿಂದಾ ನಮ್ಮೂರೀಗ್ ಏನೋ ಗಾಚಾರ ಕಾದಂಗೈತೀ. ಅಂವ ಅಂತರ್ ಪಿಸಾಚ್ಯಾಗಿ ಇಲ್ಲೇ ಸುತ್ತೋದ್ ಗ್ಯಾರಂಟೀ...!' ಎಂದು ಸ್ವಾಮಿ ಆಕಾಶದಲ್ಲಿನ ನಕ್ಷತ್ರಗಳನ್ನು ಎಣಿಸಿದಂತೆ ಮಾಡಿದ್ದ. "ಏ ಸಾಮೀ ಅದೇನಂತಾ ಮಾತಾಡ್ತೀ... ಆಕೀಗ್ ಧೈರ್ಯ ತುಂಬೋದ್ ಬುಟ್ ಇನ್ನಿಷ್ಟ್ ಎದ್ರಸಾಕತ್ತೀ ? ಶಿವಪೂಜ್ಯಾಗ್ ಕರ್ಡಿ ಬಿಟ್ಟಂಗ್ ತಿನ್ನೋರ್ ಬಾಯಾಗ್ ಮಣ್ಣಾಕ್ದೀ ನೋಡ್. ಪಾಪ ಮೂರ್ದಿನಾಯ್ತೂ... ಏನೂ ತಿಂದಿಲ್ಲಾಂತ ಊಟಾ ತಂದ್‌ಕೊಟ್ರಾ... ಅದ್ಕೂ ಕಲ್ಲಾಕ್ದಲ್ಲೋ" ಎಂದು ಫಕೀರಪ್ಪ ತರಾಟೆಗೆ ತೆಗೆದುಕೊಂಡಿದ್ದ.

"ಹೀಂಗ್ಯಾಕ್ ಸಿಟ್ಟಾಗ್ತೀಯೋ ಫಕ್ಕೀರಾ... ನಾನ್ ಇರೋದ್ನ ಯೇಳಿದ್ನೆಪ್ಪಾ... ಹೆಣಾ ಮಣ್ ಮಾಡಿಲ್ಲಾಂದ್ರ ಅದ್ರ್ ಆತ್ಮಾ ಇಲ್ಲೇ ಸುತ್ತತಾದ. ಯಾರ್‍ನಾರಾ ಮುತ್ತಿಕೊಳ್ತದಾ. ಲೋಕಾರೂಢೀ ಗೊತ್ತಿರೋ ವಿಸ್ಯಾನೇ. ಅದೇನೋ ಅಂತಾರಲ್ಲಾ ಇದ್ದಿದ್ ಇದ್ದಂಗ್ ಏಳಿದ್ರಾ.. ಎದ್ ಬಂದ್..." ಎಂದು ಮಾತು ಮೊಟಕುಗೊಳಿಸಿದ ರುದ್ರಯ್ಯಸ್ವಾಮಿ ಶಾಲು ಕೊಡವಿಕೊಂಡಂತೆ ನಟಿಸುತ್ತಾ ಊರ ಕಡೆ ಮುಖ ಮಾಡಿದ್ದ. ಸ್ವಾಮಿಯ ಮಾತು ಕಿವಿಗೆ ಬೀಳುತ್ತಿದ್ದಂತೆಯೇ ರಾತ್ರಿ ವೇಳೆ ಬುಡ್ಡಮ್ಮನ ಕುಟುಂಬದ ಸಹಾಯಕ್ಕೆಂದು ನರಸಿಂಹಗೌಡ ನಿಯೋಜಿಸಿದ್ದ ಯುವಕರ ಗುಂಪು ಸದ್ದಿಲ್ಲದೆ ಕಾಲ್ಕಿತ್ತಿತ್ತು. ರುದ್ರಯ್ಯಸ್ವಾಮಿ ಮಾತನ್ನು ಗಂಭೀರವಾಗಿ ತೆಗೆದುಕೊಂಡಿದ್ದ ಬುಡ್ಡಮ್ಮಳನ್ನು ರಾತ್ರಿಯೆಲ್ಲಾ ಈರಣ್ಣನ ಆತ್ಮ ಅತಂತ್ರವಾಗಿ ಸುತ್ತಿದಂತೆ ಭಾಸವಾಗಿತ್ತು.

✶ ✶ ✶

ಬೆಳಕು ಹರಿಯುವ ವೇಳೆಗೆ ಈರಣ್ಣನ ಹೆಣ ಆ ಕಡೆ ದಡ ತಲುಪಿತ್ತು. ಎದ್ದ ತಕ್ಷಣ ಅದನ್ನು ನೋಡಿದವಳೇ ಬುಡ್ಡಮ್ಮ, ಉಲ್ಲಸಿತಳಾದವಳಂತೆ ಎಲ್ಲರನ್ನೂ ಎಬ್ಬಿಸಿದ್ದಳು. ಕೊನೆಗೂ ತನ್ನ ಗಂಡನ ಶವಕ್ಕೆ ಮೋಕ್ಷ ಸಿಕ್ಕಿತೆಂಬ ಭಾವನೆ ಅವಳದ್ದಾಗಿತ್ತು. ಇನ್ನೇನು ಮಹಾರಾಷ್ಟ್ರ ಪೊಲೀಸರಿಗೆ ಸುದ್ದಿ ಮುಟ್ಟಿಸಲೆಂದು ಹೊರಟವರನ್ನು ಫಕ್ಕೀರಪ್ಪ ತಡೆದಿದ್ದ. "ಯಂಗೋ ನಿನ್ ಗಂಡೂನ್ ಕಳಕೊಂಡೀ... ಅವ್ನ್ ಯೆಸ್ರಿನ್ಯಾಗ್ ಯಂಗಿದ್ರೂ ವೊಲಾ ಐತಿ. ಬ್ಯಾಂಕ್‌ನ್ಯಾಗ್ ಸಾಲಾನೂ ಮಾಡೈತೀ. ಸಾಲದ್ ಸಲ್ಯಾಕ್ ನದೀಗ್ ಬಿದ್ ಸತ್ತಾನಂತ್ ಕಂಪ್ಲೇಂಟ್ ಕೊಟ್ರಾ ಪರಿಹಾರಾನಾದ್ರಾ ಸಿಗತೈತೀ. ಆ ರೊಕ್ಕಾ ನಿನ್ ಕಷ್ಟಕ್ಕಾದ್ರಾ ಬರ್‍ತೈತೀ. ಏನಂತೀ ಬುಡ್ಡಮ್ಮಾ...?" ಎಂದು ಪ್ರಶ್ನಾರ್ಥಕವಾಗಿ ನೋಡಿದ್ದ. ಈ ಮಾತಿಗೆ ತಲೆಯಾಡಿಸಿದ್ದ ತಿಪ್ಪೇಶಿ ಅಮ್ಮನನ್ನೇ ದಿಟ್ಟಿಸಿದ್ದ. "ಯಣ್ಣಾ ಯಾ ರೊಕ್ಕಾನೂ

## ಹೊಸತು – ೨೦೧೭ ಜನವರಿ ಸಂಚಿಕೆ : ಓದುಗರ ವೇದಿಕೆ

ಆತ್ಮೀಯ ಓದುಗ ಬಂಧುಗಳೇ,

ವರ್ಷವಿಡೀ ದೇಶಪ್ರೇಮ, ದೇಶದ್ರೋಹದ ಬಗೆಗಿನ ವಿವಾದ ದೊಡ್ಡದಾಗಿತ್ತು. 'ದೇಶಪ್ರೇಮ'ವನ್ನು ರಾಜಕೀಯದ ಹಿನ್ನೆಲೆಯಲ್ಲಿ, ವಿವಿಧ ರೀತಿಯಿಂದ ವ್ಯಾಖ್ಯಾನಿಸಲಾಗಿತ್ತು. ಕೇವಲ 'ಭಾರತ ಮಾತಾಕಿ ಜೈ' ಎಂದ ತಕ್ಷಣ ಅದು ದೇಶಪ್ರೇಮದ ಅಭಿವ್ಯಕ್ತಿಯೆ, ಕಾನೂನಿನ ದೃಷ್ಟಿಯಲ್ಲಿ, ದೇಶದ ಅಭಿವೃದ್ಧಿ, ಐಕ್ಯತೆ, ಸಮಗ್ರತೆ ಹಿನ್ನೆಲೆಯಲ್ಲಿ ದೇಶಪ್ರೇಮವನ್ನು ಹೇಗೆ ವ್ಯಾಖ್ಯಾನಿಸಬಹುದು. ದೇಶ ಮತ್ತು ಪ್ರೇಮವನ್ನು ಜನತೆಯ ಹಿತದೃಷ್ಟಿಯಿಂದ ಹೇಗೆ ವಿಶ್ಲೇಷಿಸಬಹುದು? ದೇಶವೆಂದರೆ ಭೌಗೋಳಿಕ ವ್ಯಾಪ್ತಿ ಮಾತ್ರವೇ ಅಥವಾ ಅದರೊಟ್ಟಿಗೆ ದೇಶವಾಸಿಗಳೂ ಸೇರುತ್ತಾರೆಯೇ ? ಎಂಬ ಈ ಎಲ್ಲ ಪ್ರಶ್ನೆಗಳ ಹಿನ್ನೆಲೆಯಲ್ಲಿ ಪ್ರಜ್ಞಾವಂತರಾದ 'ಹೊಸತು' ಓದುಗರು 'ದೇಶಪ್ರೇಮ' ಕುರಿತು ೨೫೦ ಪದಗಳಿಗೆ ಮೀರದಂತೆ ಲೇಖನ ಬರೆದು ಡಿಸೆಂಬರ್ ೧೦ರೊಳಗೆ ಹೊಸತು ವಿಶೇಷ ಸಂಚಿಕೆಯ 'ಓದುಗರ ವೇದಿಕೆ'ಗೆ ಕಳಿಸಿಕೊಡಬೇಕಾಗಿ ವಿನಂತಿ.

*– ಸಂ.*

## ಅಭಿನಂದನೆ....

ಇಂಡಿಯನ್ ಸೈಕಿಯಾಟ್ರಿಕ್ ಸೊಸೈಟಿ – ಸೌತ್ ಝೋನ್ ಬ್ರ್ಯಾಂಚ್ ಇವರು ೨೦೧೫-೧೬ನೇ ಸಾಲಿನ 'ಮೆಂಟಲ್ ಹೆಲ್ತ್ ಅವೇರ್ನೆಸ್ ಪ್ರಮೋಶನ್ ಅವಾರ್ಡ್'ಅನ್ನು ಡಾ॥ ಸಿ. ಆರ್. ಚಂದ್ರಶೇಖರ್ ಅವರಿಗೆ ನೀಡಿ ಗೌರವಿಸಿದ್ದಾರೆ. ಖ್ಯಾತ ಮನೋವೈದ್ಯರಾದ ಡಾ॥ ಸಿ. ಆರ್. ಸಿ. ಅವರಿಗೆ 'ನವಕರ್ನಾಟಕ' ಹಾಗೂ 'ಹೊಸತು' ಬಳಗದ ಅಭಿನಂದನೆಗಳು.

ಬ್ಯಾಡಾ... ರುಪ್ಯೆನೂ ಬ್ಯಾಡ. ನನಗ್ ನನ ಗಂಡನ್ ಹೆಣಾನ ಕೊಡ್ಸೀದ್ರೆ ಅದೇ ದೊಡ್ ಉಪ್ಕಾರಾ. ಮಕ್ಳನ್ ಸಾಕೋಷ್ಟ್ ಶಕ್ತೀ ರೆಟ್ಯಾಗ್ ಐತೀ. ಅದೊಂದ್ನ್ ಕೊಡ್ಸೀ ಪುಣ್ಯಾ ಕಟ್ಕೋರೀ..." ಎಂದು ಬುಡ್ಡಮ್ಮ ಗದ್ಗದಿತಳಾಗಿ ಕೈ ಮುಗಿದಿದ್ದಳು.

ಬುಡ್ಡಮ್ಮನ ಮಾತಿಗೆ ಫಕ್ಕೀರಪ್ಪ ಮಾರುತ್ತರ ಕೊಡುವ ಧೈರ್ಯ ಮಾಡಲಿಲ್ಲ. ಸೀದಾ ಹೋಗಿ ಪೊಲೀಸರಿಗೆ ಸುದ್ದಿ ಮುಟ್ಟಿಸಿದ್ದ. ಇವರು ಬೆಳಿಗ್ಗೆಯೇ ವಿಷಯ ತಿಳಿಸಿದರೂ ಮಹಾರಾಷ್ಟ್ರ ಪೊಲೀಸರು ಬರುವ ವೇಳೆಗೆ ಮಧ್ಯಾಹ್ನವಾಗಿ, ಹೆಣವೂ ನದಿ ಮಧ್ಯಕ್ಕೆ ಸೇರುವಂತಾಗಿತ್ತು. ಬಂದವರೇ ಮತ್ತದೇ ವರಾತೆ ತೆಗೆದಿದ್ದರು. ಹೆಣ ನದಿಯ ಮಧ್ಯದಲ್ಲಿಯೇ ಇದೆ, ವೃಥಾ ತಮ್ಮ ಸಮಯ ವ್ಯರ್ಥ ಮಾಡಿದ್ದರೆಂದು ರೇಗಿ ವಾಪಸ್ಸು ಹೋಗಿದ್ದರು. ಕರ್ನಾಟಕ ಮತ್ತು ಮಹಾರಾಷ್ಟ್ರ ಪೊಲೀಸರ ಹಗ್ಗಜಗ್ಗಾಟದ ನಡುವೆ ಈರಣ್ಣನ ಹೆಣ ಉಬ್ಬಿ ಕೊಳೆತು ದುರ್ನಾತ ಬೀರುವಂತಾಗಿತ್ತು. ಬ್ಯಾರೇಜ್‌ನ ಹಿನ್ನೀರಿನಲ್ಲಿ ಹೆಣ ಅತ್ತಿತ್ತ ಕದಲುತ್ತಾ ನಿಧಾನಕ್ಕೆ ಮುಂದೆ ಸಾಗಲಾರಂಭಿಸಿತು. ಸಮಯವಾದಂತೆಲ್ಲಾ ಸ್ವಲ್ಪ ಸ್ವಲ್ಪ ಮುಂದೆ ಸಾಗಿ ಬ್ಯಾರೇಜ್ ಸಮೀಪಿಸಲಾರಂಭಿಸಿತ್ತು. ಅಪ್ಪಿ-ತಪ್ಪಿ ಬ್ಯಾರೇಜ್ ದಾಟಿ ಮುಂದೆ ಸಾಗಿ, ಕೊಚ್ಚಿಹೋಯಿತೆಂದರೆ ಹೇಗೆ ಎಂಬ ಪ್ರಶ್ನೆ ಕಾಡಲಾರಂಭಿಸಿತು.

ಆಕಾಶದ ಕಡೆ ಮುಖಮಾಡಿ ಬುಡ್ಡಮ್ಮ ತನ್ನ ಮನೆದೇವರನ್ನು ಪ್ರಾರ್ಥಿಸಿದ್ದಳು. ಆಕೆಯ ಪ್ರಾರ್ಥನೆ ಫಲಿಸಿತೆನ್ನುವಂತೆ ಐದನೇ ದಿನ ಹೆಣ ಕರ್ನಾಟಕದ ಕಡೆ ವಾಲಿತ್ತು. ಇನ್ನೇನು ದಡ ಸೇರಲಿದೆ ಎಂಬ ಭರವಸೆಯೊಂದಿಗೆ ನರಸಿಂಹಗೌಡ ಪೊಲೀಸರಿಗೆ ಮಾಹಿತಿ ನೀಡಿದ್ದ. ಸ್ಥಳಕ್ಕೆ ಬಂದವರೆ ಪೊಲೀಸರು ಹೆಣವಿದ್ದ ಸ್ಥಿತಿ ನೋಡಿ, ಈ ಕಡೆ ದಡಕ್ಕೆ ಟಚ್ ಆದರೆ ಮಾತ್ರ ಅದ್ನ್ ಮುಟ್ಟಾಕ ಅವಕಾಶ ಇದೆಯೆಂದು ಕಾನೂನು ಮಾತನಾಡಿದ್ದರು. ಅಲ್ಲಿಯವರೆಗೂ ಕಾಯಲೇಬೇಕೆಂದು ಹೇಳಿ ವಾಪಸ್ಸಾಗಿದ್ದರು. 'ಹಾವೂ ಸಾಯಲಿಲ್ಲ, ಕೋಲೂ ಮುರಿಯಲಿಲ್ಲ' ಎಂಬಂತೆ ಈರಣ್ಣನ ಹೆಣ ಯಾವ ದಡವನ್ನೂ ತಲುಪಲಿಲ್ಲ. ಈ ಸುದ್ದಿ ಅದು ಹೇಗೋ ಮಾಧ್ಯಮಗಳನ್ನು ತಲುಪಿ, ದೊಡ್ಡ ಸುದ್ದಿಯಾಗಿ ಪೊಲೀಸರ ಕಾರ್ಯವೈಖರಿ ಚರ್ಚೆಗೆ ಗ್ರಾಸಮಾಡಿತ್ತು. ಎರಡೂ ರಾಜ್ಯಗಳ ಪೊಲೀಸರಿಗೆ, ಹಿರಿಯ ಅಧಿಕಾರಿಗಳು ತರಾಟೆಗೆ ತೆಗೆದುಕೊಂಡಿದ್ದರು. ಎದ್ದೆನೋ, ಬಿದ್ದೆನೋ ಎಂಬಂತೆ ಅತ್ತ ಮಹಾರಾಷ್ಟ್ರ, ಇತ್ತ ಕರ್ನಾಟಕ ಪೊಲೀಸರು ಓಡೋಡಿ ಬಂದು ನದಿಯುದ್ದಕ್ಕೂ ಹೆಣಕ್ಕಾಗಿ ಜಾಲಾಡಿದ್ದರು.

ಮಾಂಜ್ರಾ ನದಿಯಲ್ಲಿ ಹೆಣವೇ ಮಂಗಮಾಯ ! ಮೀನುಗಳೇನಾದರೂ ಕಿತ್ತು ತಿಂದವಾ ಅಥವಾ ಬ್ಯಾರೇಜ್ ದಾಟಿ ಮುಂದೆ ಸಾಗಿದೆಯಾ ಎಂದು ಅನುಮಾನಗೊಂಡ ಪೊಲೀಸರು, ಮುಂದಿನ ದಾರಿ ತೋಚದೆ ಆತಂಕಗೊಂಡರು. ಅಲ್ಲಿಯವರೆಗೆ 'ನನಗೆ ಸಂಬಂಧವಿಲ್ಲ, ನಿನಗೆ ಸಂಬಂಧವಿಲ್ಲ' ಎಂದು ಕಚ್ಚಾಡುತ್ತಿದ್ದ ಉಭಯ ರಾಜ್ಯಗಳ ಪೊಲೀಸರು ಭಾಯಿ ಭಾಯಿಯಾಗಿದ್ದಕ್ಕೆ ನದಿ ದಂಡೆಯೇ ಸಾಕ್ಷಿಯಾಗಿತ್ತು ! ಜಂಟಿಯಾಗಿ ಕಾರ್ಯಾಚರಣೆ ನಡೆಸಲು, ಉಭಯ ರಾಜ್ಯಗಳ ಪೊಲೀಸರು ತೀರ್ಮಾನಿಸಿದ್ದರು. ತೆಲಂಗಾಣಾ ಬಾರ್ಡರ್‌ವರೆಗೂ ಹೋಗಿ ಬಂದರೂ ಹೆಣದ ಸುಳಿವೇ ಸಿಕ್ಕಿರಲಿಲ್ಲ. ಮತ್ತೊಂದೆಡೆ ಹೆಣಕ್ಕಾಗಿ ನದಿ ದಂಡೆಯ ಮೇಲೆ ಎದುರು ನೋಡುತ್ತಿದ್ದವರೂ ನಾಪತ್ತೆಯಾಗಿರುವುದು ಅನುಮಾನಕ್ಕೆಡೆಮಾಡಿ ಕೊಟ್ಟಿತು. ಊರಿನವರೇ ಹೆಣವನ್ನು ಹೊರತೆಗೆದು, ಮಣ್ಣು ಮಾಡಿರಬೇಕೆಂದು ಪೊಲೀಸರು ಶಂಕಿಸಿದರು.

ಹೊಲದಲ್ಲಿ ಕೆಲಸದಲ್ಲಿ ತಲ್ಲೀನಳಾಗಿದ್ದ ಬುಡ್ಡಮ್ಮಳ ಬಳಿ ಬಂದ ಪೊಲೀಸರು, ಪ್ರಶ್ನೆಗಳ ಸುರಿಮಳೆಗರೆದಿದ್ದರು. "ನಿನ್ ಗಂಡನ್ ಹೆಣಾ ಎಲ್ಲೀ...? ಯಾರ್ ಅದ್ನ್ ಹೊರಾಗ್ ತೆಗ್ದೋರ್... ಅದ್ನ್ ಮುಟ್ಟಿದ್ರಾ ಪೊಲೀಸ್ ಕೇಸ್ ಆಗ್ತದಂತ ಹೇಳಿರ್ಲಿಲ್ಲಾ. ಎಷ್ಟ್ ಧೈರ್ಯಾ ನಿಮಗ್ ಹೆಣಾ ಮುಟ್ಟಾಕ್...?" ಎಂದು ಇನ್ಸ್‌ಪೆಕ್ಟರ್ ಉಮೇಶ್ ದಬಾಯಿಸಿದ್ದ. 'ಯಾರ್ ಸಾಮೀ ನೀವೂ... ಯಾರ್ ನೀವ್... ಯಾರ್ ಹೆಣಾ... ಅದೆಲ್ಲಿತ್ತೂ...?' ಎಂದು ಮರುಪ್ರಶ್ನೆ ಹಾಕಿ ಬುಡ್ಡಮ್ಮ, ಪೊಲೀಸರನ್ನೇ ತಬ್ಬಿಬ್ಬಾಗುವಂತೆ ಮಾಡಿದ್ದಳು. "ಏಯ್... ಪೊಲೀಸ್ರತ್ರಾನೇ ತಮಾಷಿ ಮಾಡ್ತೀ. ನಿಜಾ ಏನಂತಾ ಬೊಗಳ್ಲಿಲ್ಲಾಂದ್ರ... ಠೇಸನ್ಕ್ ಕರ್ಕೊಂಡೋಗಿ ಬೆಂಡ್ ಎತ್ತಬೇಕಾಗ್ತದಾ ನೋಡ್..." ಎಂದು ಮಹಾರಾಷ್ಟ್ರ ಪೊಲೀಸರು ತಮ್ಮದೇ ಆದ ಧಾಟಿಯಲ್ಲಿ ಎಚ್ಚರಿಕೆ ಕೊಟ್ಟಿದ್ದರು.

"ಓ... ನೀವ್ ಪೊಲೀಸ್ರಾ... ಕರ್ನಾಟಕ್ದೋರಾ... ಮಾರಾಸ್ಟ್ರದೋರಾ...? ಆ ದಂಡೆಕಡ್ಯೋರಾ... ಇಲ್ಲಾ ಈ ದಂಡೆಕಡ್ಯೋರಾ...? ಯಾವ್ ಕಡ್ಯೋರ್ ಸಾಮೀ...? ನನಗ್ಗೊತ್ತಾಗಲ್ಲಾಗ್ಯಾದ್ ಬುಡ್ರೀ... ಸೊಲೂಪ್ ಕಣ್ ಮಂದಾಗ್ಯಾವಾ...! ಅದೇನೋ ಯಣಾ ಅಂದ್ರಲ್ಲಾ. ಇವತ್ ಮುಂಜಾಳೀತನಾ ಯಾದ್ದೋ ಒಂದ್ ಯಣಾ ನೀರಿನ್ಯಾಗ್ ತೇಲ್ಲೀತ್ತಪ್ಪಾ...! ಅದ್ಕ್ ಅಪ್ಪಿಲ್ಲ... ಅಮ್ಮಿಲ್ಲ ಅನ್ನಂಗ್ ನೀರಿನ್ಯಾಗ್ ತೇಲ್ತಾನೇ ಇತ್ತಪ್ಪ. ಈಗೇನಾಗ್ಯಾದೋ ಗೊತ್ತಿಲ್ಲ. ಮೀನಾ... ಗೀನಾ ತಿಂದಾಕಿರ್ಬೇಕ್... ಆ ನೀರ್ನೆ ಕೇಳ್ರೀ ಗೊತ್ತಾಗ್ಬವ್ದೂ..." ಎಂದ ಬುಡ್ಡಮ್ಮ ಕೆಲಸದಲ್ಲಿ ನಿರತಳಾದಳು. "ಅಲಾಲಾಲ, ಏನ್ ನಾಟ್ಕಾ ಮಾಡ್ತೀ. ಯೆಷ್ಸೆಂಗ್ಸಾದ್ರೂ ದಿಮಾಕೇನ್ ಕಮ್ಮಿಲ್ಲ್ ಬುಡೂ... ಸುಮ್ನಾ ಏಳಿದ್ರಾ ನೆಟ್ಟಗ್ ಇರ್ತೈತೀ... ಇಲ್ಲಾಂದ್ರಾ...?" ಎಂದು ಇನ್ಸ್‌ಪೆಕ್ಟರ್ ಹಲ್ಲು ಕಡಿದಿದ್ದ. ಅಷ್ಟೇ ಸಿಟ್ಟಿನಲ್ಲಿ ಬುಡ್ಡಮ್ಮ, "ಇಲ್ಲಾಂದ್ರಾ ಏನ್... ಏನ್ ಮಾಡ್ತೀ...?" ಎಂದು ಪ್ರಶ್ನಿಸಿದ್ದಕ್ಕೆ ಕುಪಿತಗೊಂಡ ಇನ್ಸ್‌ಪೆಕ್ಟರ್ ಉಮೇಶ, "ಏ ಇವಳ್ದೇನ್ ನೋಡ್ತೀರ್... ಎತ್ತಾಕ್ಕೊಂಡ್ ನಡೀರಿ, ಕೋಳೀನ್ ಕೇಳಿ ಮಸಾಲೆ ಅರ್ಯಾಕಾಗ್ತದಾ...? ನಾಕ್ ಬಾರೀ ನದ್ಯಾಗ್ ಮುಳೂಗ್ಸೀ ತೇಲಿಸಿದ್ರಾ ಸತ್ಯಾ ತಾನೇ ವೊರಾಗ್ ಬರ್ತಾದ" ಎಂದು ಹೇಳುತ್ತಿದ್ದಂತೆಯೇ, ಎರಡೂ ರಾಜ್ಯಗಳ ಪೊಲೀಸರು ಬುಡ್ಡಮ್ಮನನ್ನು ಹಿಡಿಯಲು ಮುಂದಾದರು.

"ಹೇಯ್ ಮೈ ಮುಟ್ಟೀರಂದ್ರಾ ಕಬಡ್ದಾರ್..." ಎಂದು ಎಚ್ಚರಿಕೆ ಕೊಟ್ಟು ಕೊಸರಿಕೊಂಡ ಬುಡ್ಡಮ್ಮ, "ನಾಚ್ಕೀ ಆಗ್ಬೇಕ್ ನಿಮ್ಗಾ... ಯಣಾ ಬಿದ್ದೈತೀ ಅಂತ್ ಕಾಲಾಗಿನ್ ಚಪ್ಲೀ ಅರ್ಗೋವರ್ಗೂ ಠೇಸನ್ಕ್ ಸುತ್ತಿದ್ರೂ ಕ್ಯಾರೇ ಅನ್ಲಿಲ್ಲಾ... ಈಗ್ ಬಂದಾರ ಭಾದ್ದೂರ್ ಗಂಡೂಸ್ರೂ ಯಣಾ ಎಲ್ಲೆಂತ್ ಕೇಳಾಕ್...! ಮನೂಷ್ರಂದ್ರಾ ಕಿಮ್ಮತ್ತೇ ಇಲ್ಲೇನ್...? ನದೀ ನಡೂಕ್ ಹೆಣಾ ಇತ್ತಂದ್ರಾ ನನಗ್ ಸಂಬಂದಿಲ್ಲ... ನಿನಗ್ ಸಂಬಂದಿಲ್ಲ ಅಂತೀರೀ..., ಅದೇ ನೀರ್ ತೊಗೊಳ್ಳೋ ವಿಷ್ಯಾ ಬಂದ್ರಾ, ನಮಗ್ ಸೇರಿದ್ದೂ, ನಮಗ್ ಸೇರಿದ್ದಂತಾ ಬಡದಾಡ್ತೀರೀ. ಆದ್ರಾ ಅದೇ ನೀರಿನ್ಯಾಗ್ ಯಾರ್ದಾರಾ ಜೀವಾ ಹೋಯ್ತಂದ್ರಾ ಅದೂಕ್ ಕಿಮ್ಮತ್ತೇ ಇಲ್ಲನ್ನಂಗ್ ಮಾತಾಡ್ತೀರೀ... ನೀರೀಗ್ ಕೊಟ್ಟೋಷ್ಟ್ ಕಿಮ್ಮತ್ ಜೀವಕ್ ಕೊಡಾಕಿಲ್ಲ... ನಿಮ್ಮನ್ಯಾರನ್ನಾ ಮನೂಷ್ರಂತಾರಾ ? ಥೂ ನಿಮ್ ಜಲ್ಮಕ್ಕಾ ಬೆಂಕಿ ಆಕಾ..." ಎಂದು ಪೊಲೀಸರ ಮುಖಕ್ಕೆ ಕ್ಯಾಕರಿಸಿ ಉಗಿದಿದ್ದಳು.

ತಾಯಿಯನ್ನು ಹಿಡಿದುಕೊಂಡು ಹೋಗುತ್ತಿದ್ದಾರೆಂದು ಅದೇ ವೇಳೆ ಓಡೋಡಿ ಬಂದ ತಿಪ್ಪೇಶಿಯನ್ನು ವಶಕ್ಕೆ ತೆಗೆದುಕೊಳ್ಳಲು ಪೊಲೀಸರು ಯತ್ನಿಸಿದ್ದರು. "ಯೇಯ್ ಬಿಡ್ರೋ... ಅವ್ನ್ ಬಿಡ್ರೋ... ನಿಮ್ಗೇನ್ ನನ್ ಗಂಡೂನ್ ಯಣಾ ಬೇಕಲ್ಲಾ... ನದೀಗುಂಟಾ ಉಡೂಕ್ರೀ... ನೀರಿನ್ಯಾಗ್ ಹರ್ಕೊಂಡ್ ಹರ್ಕೊಂಡ್ ವೋಗಿ ಎಲ್ಯಾದ್ರೂ ಬೇಲೀಗ್ ಸಿಕ್ಯಾಕ್ಕೊಂಡಿರ್ಬೇಕ್...! ಸಿಗೋವರ್ಗೂ ಉಡೂಕ್ರೀ. ಸಿಕ್ತಂದ್ರಾ ತೊಗೊಂಬರ್ರೀ. ಅದ್ನ್ ಬಿಟ್ ಸುಮ್ ಸುಮ್ನಾ ಯಣಾ ಅಂತೇಳಿ ಇಲ್ಲಿಗೇನಾರಾ ಕಾಲಿಟ್ಟೀರಂದ್ರಾ ನಿಮ್ ಕಾಲೇ ಕತ್ರಸ್ತೀನ್... ನಿಮ್ನ್ ತುಂಡ್ ತುಂಡ್ ಮಾಡಿ ಅದೇ ನೀರೀಗ್ ಆಕ್ತೀನ್ ನೋಡ್...!" ಎಂದು ಕುಡುಗೋಲು ತೋರಿಸಿದ್ದ ಬುಡ್ಡಮ್ಮ, ಮಗನನ್ನು ಬಿಡಿಸಿಕೊಂಡಿದ್ದಳು. ಗದ್ದಲ ಕೇಳಿದ ಊರಿನ ಜನ ಗುಂಪು ಗುಂಪಾಗಿ ಬರಲಾರಂಭಿಸುತ್ತಿದ್ದಂತೆಯೇ, ಪೆಚ್ಚುಮೋರೆ ಹಾಕಿಕೊಂಡ ಎರಡೂ ರಾಜ್ಯಗಳ ಪೊಲೀಸರು ನದಿಯನ್ನೇ ತದೇಕಚಿತ್ತದಿಂದ ನೋಡುತ್ತಾ, ಅಲ್ಲಿಂದ ಕಾಲ್ಕಿತ್ತಿದ್ದರು. ಬುಡ್ಡಮ್ಮ ಮಾತ್ರ ಮಗನ ನೆರವಿನಿಂದ ಬೇವಿನ ಗಿಡದ ಬುಡದ ದಿಬ್ಬದ ಮೇಲೆ ಚೆಂಡು ಹೂವಿನ ಸಸಿ ನಾಟಿಯಲ್ಲಿ ನಿರತಳಾದಳು !

ಡಾ॥ ಶಿವರಾಮ ಅಸುಂಡಿ
'ಶ್ರೀನಿಕೇತನ', ವಿಠಲನಗರ, ಕಲಬುರಗಿ – ೫೮೫ ೧೦೩




ವಿವಿಧ ಪ್ರಸಂಗಗಳು, ಪಾತ್ರಗಳು ಮತ್ತು ಸನ್ನಿವೇಶಗಳಿಗೆ ತಕ್ಕಂತೆ ಬದಲಾಗುವ ಕುಂವೀಯವರ ಭಾಷೆಯ ಸ್ವರೂಪವನ್ನು ಈ ಕಾದಂಬರಿ ಅಸಂಖ್ಯ ಉದಾಹರಣೆಗಳ ಮೂಲಕ ಸ್ಪಷ್ಟಪಡಿಸುತ್ತದೆ. ಕುಂವೀಯವರು ಸರಳ ಹಾಗೂ ನೇರವಾದ ಭಾಷೆಯನ್ನು ಕರಗತ ಮಾಡಿಕೊಂಡಿದ್ದು, ಹಾಗೂ ಪ್ರಸಂಗಾವಧಾನವಾಗಿ ಅದರ ಸ್ವರೂಪವನ್ನು ಮತ್ತು ಬನಿಯನ್ನು ಬದಲಿಸುತ್ತ ಹೋಗಿರುವುದು ಕಂಡುಬರುತ್ತದೆ. ಸಾಮಾಜಿಕ ಸ್ತರದ ವ್ಯಾವಹಾರಿಕ ಭಾಷೆಯನ್ನು ಬಳಸುತ್ತಲೇ ಅದರ ವೈವಿಧ್ಯವನ್ನೆಲ್ಲಾ ಸಮರ್ಥವಾಗಿ ದುಡಿಸಿಕೊಂಡಿದ್ದಾರೆ. ನೇರ ನುಡಿ, ಸಂದರ್ಭೋಚಿತ ಭಾಷೆ, ಅಸದೃಶ ಸನ್ನಿವೇಶ ನಿರ್ಮಾಣ, ಸಂಭಾಷಣೆಯ ಸ್ವಾರಸ್ಯ, ಉಪಮೆ, ಅಲಂಕಾರ, ಗಾದೆಮಾತು, ಗ್ರಾಮೀಣ ಭಾಷೆಯ ಸತ್ವಯುತ ಬಳಕೆ, ವಿಶಿಷ್ಟಾರ್ಥದ ಗ್ರಾಮೀಣ ಪದಪುಂಜಗಳು, ಗ್ರಾಮೀಣ ಬೈಗುಳಗಳು ಇತ್ಯಾದಿಗಳೆಲ್ಲವೂ ಹಾಸುಹೊಕ್ಕಾಗಿರುವ ಕುಂವೀಯವರ ಶೈಲಿಯ ವಿವೇಚನೆ ತುಂಬ ರೋಚಕವಾಗಿದೆ.

---

ಕೃತಿಯ ಹೆಸರು : **ನಿಜಲಿಂಗ**
ಲೇಖಕರು : **ಕುಂ. ವೀರಭದ್ರಪ್ಪ**
ಪ್ರಕಾಶಕರು : **ಅನುಪಮ ಪ್ರಕಾಶನ,** ಅಥಣಿ
ಪುಟಗಳು : ೩೪೦ ಬೆಲೆ : ರೂ. ೨೦೦/-




# ನಿಜಲಿಂಗ : ಭೂತ-ವರ್ತಮಾನದ ಸಂಕೀರ್ಣತೆಯ ಅನ್ವೇಷಣೆ

**ಕುಂ.** ವೀರಭದ್ರಪ್ಪ ನವ್ಯೋತ್ತರ ಕನ್ನಡ ಸಾಹಿತ್ಯದ ಮಹತ್ವದ ಲೇಖಕರು. ನವ್ಯೋತ್ತರ ಕನ್ನಡದ ಅತ್ಯುತ್ತಮ ಲೇಖಕರಲ್ಲಿ ಒಬ್ಬರಾದ ಕುಂವೀ ಸಾಹಿತ್ಯ ಕೃಷಿ ಬಹಳ ವಿಶಿಷ್ಟವಾದ್ದು. ಇವರು ಕಳೆದ ನಾಲ್ಕು ದಶಕಗಳಿಂದ ಸಾಹಿತ್ಯದ ವಿವಿಧ ಪ್ರಕಾರಗಳಾದ ಕಥೆ, ಕಾವ್ಯ, ಕಾದಂಬರಿ, ಅನುವಾದ, ಚಲನಚಿತ್ರ – ಹೀಗೆ ಮುಂತಾದ ಕ್ಷೇತ್ರಗಳಲ್ಲಿ ಕೃಷಿಗೈಯುತ್ತಾ ಬಂದಿದ್ದಾರೆ. ಕುಂವೀ ಬರವಣಿಗೆಯನ್ನು ಒಂದು ಪವಿತ್ರ ಕಾರ್ಯ ಅಥವಾ ತಪಸ್ಸು ಎಂದು ನಂಬಿ ಬರೆಯುತ್ತಿರುವವರು. ಇವರದು ದೈತ್ಯ ಪ್ರತಿಭೆ. ಇವರ ಸಮಗ್ರ ಕಥನ ಸೃಷ್ಟಿಯಲ್ಲಿ ಅಡಗಿರುವ ಅನುಭವ ವ್ಯಾಪ್ತಿ ಬೆರಗುಗೊಳಿಸುವಂಥದ್ದು. ಜೀವನಾನುಭವದ, ಅದರಲ್ಲಿಯೂ ಗ್ರಾಮೀಣ ಜೀವನಾನುಭವದ ಸಮೃದ್ಧಿಯೂ, ಸದಾ ವಿಕಸನಶೀಲವಾಗಿರುವ ಅವರ ಸೃಜನಶೀಲ ಪ್ರತಿಭೆಯೂ, ಕಲಾಶ್ರದ್ಧೆಯೂ ಅವರನ್ನು ಯಶಸ್ಸಿನಿಂದ ಇನ್ನಷ್ಟು ಹೆಚ್ಚಿನ ಯಶಸ್ಸಿಗೆ ಕೊಂಡೊಯ್ಯುತ್ತಿರುವುದು ಅವರ ಕೃತಿಶ್ರೇಣಿಯ ಸಮೀಕ್ಷಕರೆಲ್ಲರ ಅನುಭವವಾಗಿದೆ. ಎಲ್ಲಾ ವಯೋಮಾನದ ಸಾಹಿತ್ಯ ಪ್ರೇಮಿಗಳ ಮೇಲೆ ಕುಂವೀ ಪ್ರಭಾವ ಒಂದಲ್ಲ ಒಂದು ವಿಧದಲ್ಲಿ ಅಚ್ಚಳಿಯದ್ದು. ಕುಂವೀ ಕಥೆ ಹೇಳುವುದರಲ್ಲಿ ನಿಸ್ಸೀಮರು. ಅವರ ಕಥನ ಭಾಷೆಯ ಹರವು ಬಹು ವಿಸ್ತಾರವಾಗಿದೆ. ಪ್ರತಿಯೊಂದು ಕಾದಂಬರಿಯಲ್ಲೂ ಒಂದು ಹೊಸ ಲೋಕ ಸೃಷ್ಟಿಸಬೇಕೆಂಬ ಹಟವಿದ್ದರೂ ಕುಂವೀಯವರಿಗೆ ತಾವು ಬರೆದದ್ದೆಲ್ಲವೂ ಶ್ರೇಷ್ಠವೆಂಬ ಭ್ರಮೆಯೇನೂ ಇಲ್ಲ. ಆದರೆ, ಉಳಿದ ನವ್ಯೋತ್ತರ ಲೇಖಕರಿಗಿಂತ ಸಾಮಾಜಿಕ ಬದ್ಧತೆ ಮತ್ತು ಸಮಾಜವಾದಿ ಧೋರಣೆಯ ಕ್ರಿಯಾತ್ಮಕ ಸಂಘರ್ಷಗಳ ಹಿನ್ನೆಲೆಯಲ್ಲಿ ಒಂದಿಷ್ಟು ಭಿನ್ನವೇ ಆಗಿರುವ ಕುಂವೀಯವರ ಸಾಹಿತ್ಯವನ್ನು ವಸ್ತುನಿಷ್ಠ ನೆಲೆಯಲ್ಲಿ ನಮ್ಮ ವಿಮರ್ಶಾವಲಯ ಗುರುತಿಸುವುದು ಇನ್ನೂ ತುಂಬ ಅವಶ್ಯ. ಶೋಷಣೆರಹಿತ, ಚಲನಶೀಲ ಮತ್ತು ಸರ್ವಸಮಾನತೆಯ ಸಮಾಜವೊಂದರ ಕನಸನ್ನು ನಿರಂತರವಾಗಿಟ್ಟುಕೊಂಡೇ ಬಂದವರು ಕುಂವೀ. ಆ ಕನಸನ್ನು ನನಸಾಗಿಸಲು ತಮ್ಮ ಲೇಖನಿಯನ್ನು ಝಳಪಿಸುವ ಅವರು ಅದಕ್ಕಾಗಿ ತುಳಿದದ್ದು ಬಂಡಾಯ ಮಾರ್ಗವನ್ನು. ಮುಕ್ತ ಮನಸ್ಸಿನ, ಬಿಚ್ಚು ಮಾತಿನ, ನೇರ ಶೈಲಿಯ ಕುಂವೀಯವರ ಬದುಕು ಬೇರೆಯಲ್ಲ, ಬರಹ ಬೇರೆಯಲ್ಲ. ಅವೆರಡರ ಗುರಿ–ಗಮನ ಒಂದೇ ಎಂದು ಗುರುತಿಸಲು ಯಾವುದೇ ಅಡ್ಡಿಯಿಲ್ಲ. ಹೊರಗಿನ ಬೇರೆ ಬೇರೆ ಸಿದ್ಧಾಂತಗಳು, ಧೋರಣೆಗಳು ಅವರ ವ್ಯಕ್ತಿತ್ವ ಮತ್ತು ಬರಹಗಳ ಮೇಲೆ ಆಗಾಗ ಒಂದಿಷ್ಟು ಪ್ರಭಾವ ಬೀರಿವೆಯಾದರೂ ಕುಂವೀಯವರು ಅವುಗಳಿಗೆ ತಮ್ಮನ್ನು ಪೂರ್ಣವಾಗಿ ಕಟ್ಟಿಹಾಕಿಕೊಳ್ಳದೆ, ತಮ್ಮದೇ ಆದ ದಾರಿಯನ್ನು ನಿರ್ಮಿಸಿಕೊಂಡು ಬಂದಿದ್ದಾರೆ. ಅವರ ಯಾವುದೇ ಬರವಣಿಗೆಯನ್ನು ಗಮನಿಸಿದರೂ ಅಲ್ಲಿ ಕುಂವೀತನದ ಅಚ್ಚೊತ್ತಿರುತ್ತದೆ. ಗ್ರಾಮೀಣ–ನಗರ ಪ್ರದೇಶಗಳ ಅಭಿವೃದ್ಧಿ, ಬಂಡವಾಳಶಾಹಿ, ಭ್ರಷ್ಟಾಚಾರ, ಖಾಸಗಿ ಸಂಪತ್ತು, ಬಡವರ ಕಡುಕಷ್ಟ, ಸರ್ಕಾರಗಳ ವೈಫಲ್ಯ, ಕಾಮ, ಕೌಟುಂಬಿಕ ಹಿಂಸೆ, ಶ್ರೀಮಂತ–ಬಡ ವರ್ಗಗಳ ನಡುವಣ ಭೇದ, ಜಾತೀಯತೆ, ಮೂಢನಂಬಿಕೆ, ಅನಕ್ಷರತೆ, ಸಾಮಾಜಿಕ ನ್ಯಾಯದ ಸಂಗತಿ – ಮುಂತಾದವುಗಳೆಲ್ಲಾ ಕುಂವೀಯವರ ಕಥೆ – ಕಾದಂಬರಿಗಳ ವಸ್ತುಗಳಾಗಿವೆ. ನಮ್ಮ ಕಾಲದ ಮಹತ್ವದ ಸೃಜನಶೀಲ ಲೇಖಕರಾದ ಕುಂವೀ ತೀಕ್ಷ್ಣ ರಾಜಕೀಯ ಪ್ರಜ್ಞೆಯುಳ್ಳ ಚಿಂತಕ. ಸೃಜನಶೀಲ ನೆಲೆಯಲ್ಲಿ ರಾಜಕೀಯವನ್ನು ವಿಶ್ಲೇಷಿಸುವ ಲೇಖಕರು ನಮ್ಮಲ್ಲಿ ವಿರಳ. ಕುಂವೀಯವರ ಸೃಜನಶೀಲತೆಯ ಮೂಲಸೆಲೆಯೇ ರಾಜಕೀಯಕ್ಕೆ ಸ್ಪಂದಿಸುವುದರಲ್ಲಿದೆ. ಸ್ವಂತ ಜೀವನದಲ್ಲಿ ಸಮೃದ್ಧವಾದ, ವೈವಿಧ್ಯಮಯವಾದ ಅನುಭವವನ್ನು ಪಡೆದುಕೊಂಡ ಕುಂವೀ ಆ ಅನುಭವವನ್ನು ಸಾಹಿತ್ಯ ರಚನೆಯಲ್ಲಿ ಕಲಾತ್ಮಕವಾಗಿ ಬಳಸಿಕೊಳ್ಳುವ ಸಮರ್ಥ ಲೇಖಕ.

ಪ್ರಸ್ತುತ 'ನಿಜಲಿಂಗ' ಕುಂವೀಯವರ ನೂತನ ಕಾದಂಬರಿ ಮೂರು ಆಯಾಮಗಳು, ಮೂರು ಕಾಲಘಟ್ಟಗಳು ಮತ್ತು ಮೂರು ವಿಭಿನ್ನ ತುಡಿತಗಳು ಒಟ್ಟಿಗೆ ಸೇರಿ ರಚನೆಗೊಂಡಿವೆ. ಇದು ಸ್ವಾತಂತ್ರ್ಯಾಪೂರ್ವದ ಆಂಗ್ಲರ ವಸಾಹತುಶಾಹಿ, ದೇಶಿ ಇತಿಹಾಸದ ಪಳೆಯುಳಿಕೆ ಹಾಗೂ ಸ್ವಾತಂತ್ರ್ಯೋತ್ತರ ಕಾಲದ ಭಾರತದ ಜೀವನ ಪಲ್ಲಟಗಳ ವಿವರಗಳಿಂದ ತುಂಬಿದೆ. ದೇಶ, ಕಾಲ, ಸಮಾಜ ಬಂಧನದಲ್ಲಿರುವ ನಾವು ನಮ್ಮ ಉಸಿರು ಕಟ್ಟಿಸುವ ಸ್ಥಿತಿಯನ್ನು ಹೇಳುವ, ಮನುಷ್ಯನ ಅಸಂಗತೆ, ವಿಷಾದ, ಒಂಟಿತನ, ಅನಾಥತೆಯನ್ನು

**ಸಿ. ಎಸ್. ಭೀಮರಾಯ**

ಸಾರುವ 'ನಿಜಲಿಂಗ' ಕಾದಂಬರಿ ಓದುಗರು ದಿಗ್ಭ್ರಮೆ ಹುಟ್ಟಿಸುವಷ್ಟು ಪ್ರಯೋಗಶೀಲವಾದ ಕೃತಿಯಾಗಿ ಆಕರ್ಷಿಸುತ್ತದೆ. ಕುಂವೀ ಬಹುಮುಖಿ ಕಥನದ ದನಿಗಳಲ್ಲಿ ಈ ಕಾದಂಬರಿಯನ್ನು ಬರೆದಿದ್ದಾರೆ. ಇದು ಒಮ್ಮೆ ಉತ್ಕಟ ಕೌತುಕದ ಕಥೆಯಾಗಿ, ಒಮ್ಮೆ ಅಂತರಂಗ ವಿಶ್ಲೇಷಣೆಯ ಪ್ರಜ್ಞಾವಾಹಿನಿಯಾಗಿ, ಒಮ್ಮೆ ನಿರ್ಲಿಪ್ತ ಸಾಕ್ಷಿಪ್ರಜ್ಞೆಯ ನಿರೂಪಣೆಯಾಗಿ ಕಾಣುತ್ತದೆ. ಈ ಕೃತಿಯ ಮೂಲಕ ಕುಂವೀ ತಮ್ಮ ಸೃಜನಶೀಲ ಜೀವನದ ಹೊಸ ಘಟ್ಟವನ್ನು ಪ್ರವೇಶಿಸಿದ್ದಾರೆ. 'ನಿಜಲಿಂಗ'ವನ್ನು ಅದು ನಿರೂಪಿಸುವ ಘಟನೆಗಳ ಕಾಲದಲ್ಲಿಯೇ ಬರೆಯಬಹುದಾಗಿತ್ತು ಎನ್ನಿಸುವಂತಿದೆ. ಕುಂವೀ ಓದುಗರ ಮನಸ್ಸನ್ನು ಸಂಪೂರ್ಣವಾಗಿ ಸೆಳೆದುಕೊಳ್ಳಬಲ್ಲ, ಅಂತಃಕರಣವನ್ನು ತಟ್ಟಬಲ್ಲ, ಮತ್ತೆ ಮತ್ತೆ ರೋಮಾಂಚನಗೊಳಿಸಬಲ್ಲ, ಕಥನ ಪರಂಪರೆಯನ್ನು ತುಂಬ ಸಮರ್ಥವಾಗಿ ಈ ಕಾದಂಬರಿಯಲ್ಲಿ ನಿರ್ವಹಿಸಿದ್ದಾರೆ.

ಈ ಕಾದಂಬರಿಯ ಮೊದಲರ್ಧ ಭಾಗದಲ್ಲಿ ಸ್ವಾತಂತ್ರ್ಯಪೂರ್ವದ ಭಾರತದಲ್ಲಿ ವಸಾಹತು ಶಾಹಿಯನ್ನು ತಮ್ಮದೇ ಆದ ರೀತಿಯಲ್ಲಿ ಅನಕ್ಷರಸ್ಥ ಜನಸಾಮಾನ್ಯರು ಎದುರಿಸಿದ ಚಿತ್ರಣವಿದ್ದರೆ, ಎರಡನೆಯ ಭಾಗದಲ್ಲಿ ಕಿಸೆಗಳ್ಳರು, ದರೋಡೆಕೋರರು, ಸುಪಾರಿ ಹಂತಕರು ತುಂಬಿರುವ ಅಧೋಲೋಕ ಮತ್ತು ಧನಿಕರು, ಸ್ವಾರ್ಥ ರಾಜಕಾರಣಿಗಳು, ಬೆನ್ನೆಲುಬಿಲ್ಲದ ಅಧಿಕಾರಿಗಳು ಇವರುಗಳು ತುಂಬಿರುವ ಶಿಷ್ಟ ಲೋಕ ಪರಸ್ಪರ ಎದುರಾಗುವ ಚಿತ್ರಣವಿದೆ. ಈ ಎರಡು ಭಾಗಗಳು ಒಟ್ಟಾರೆಯಾಗಿ ಧ್ವನಿಸುವುದೇನೆಂದರೆ ಇವೆರಡು ಲೋಕಗಳಲ್ಲಿಯೂ ಅಷ್ಟೇನೂ ವ್ಯತ್ಯಾಸ ಕಾಣುವುದಿಲ್ಲ. ಸ್ವಾತಂತ್ರ್ಯಪೂರ್ವ ವಸಾಹತುಶಾಹಿಯ ಕ್ರೌರ್ಯ, ದೌರ್ಜನ್ಯ, ದಬ್ಬಾಳಿಕೆ, ಸ್ವಾರ್ಥ, ದುರಾಸೆ, ಲೋಭ ಇತ್ಯಾದಿಗಳನ್ನು ಸ್ವಾತಂತ್ರ್ಯೋತ್ತರ ರಾಜಕಾರಣ ಪ್ರತಿಫಲಿಸುತ್ತದೆ.

ವ್ಯಕ್ತಿಯೊಬ್ಬನು/ಳು ಅನುಭವಿಸುವ ರೂಪಾಂತರಗಳು (ಕಥಾನಾಯಕ ನಿಜಲಿಂಗನ ತಾಯಿ ಮೊದಲಿಗೆ ಸತ್ಯಭಾಮಾ, ಅನಂತರ ಪೌಲಿನ್, ಮುಂದೆ ಅನಂತರಮ್ಮ), ಸ್ವಾಭಿಮುಖತೆ, ಶ್ರೀಮಂತ ಅಂತರ್ಪಠ್ಯೀಯತೆ ('ಆಲಿವರ್ ಟ್ವಿಸ್ಟ್,' 'ಉಷಾ ಪರಿಣಯ'), ಇತ್ಯಾದಿ ಅನೇಕ ಆಶಯಗಳನ್ನು ಈ ಕೃತಿಯು ಯಶಸ್ವಿಯಾಗಿ ಕಟ್ಟಿಕೊಡುತ್ತದೆ. ಇಡೀ ಸಮುದಾಯಗಳನ್ನೇ 'ಕ್ರಿಮಿನಲ್ ಟ್ರೈಬ್ಸ್' ಎಂದು ಗುರುತಿಸಿ ಅವುಗಳನ್ನು ಬೀದಿಗೆ ತಳ್ಳುವ ವಸಾಹತುಶಾಹಿ, ಆ ವಸಾಹತುಶಾಹಿಯನ್ನು ಪ್ರತಿನಿಧಿಸಿದರೂ ವೈಯಕ್ತಿಕವಾಗಿ ಸಜ್ಜನರಾಗಿ ಉಳಿಯುವ ಬ್ರಿಟಿಷ್ ಅಧಿಕಾರಿಗಳು, ಕ್ರಾಂತಿಕಾರಿಗಳಿಗೆ ಆಶ್ರಯ ನೀಡುವ ಬಡ ಗ್ರಾಮೀಣ ಮಹಿಳೆಯರು, ಚೋರಕಲೆಯ ನೀತಿಕೋಶ ಹಾಗೂ ನಂಬಿಕೆಗಳ, ಜನಪ್ರಿಯತೆಗಾಗಿ ಜೇಬುಗಳ್ಳನ ಮನೆಯಲ್ಲಿ ಗ್ರಾಮವಾಸ್ತವ್ಯವನ್ನು ಮಾಡುವ ಮುಖ್ಯಮಂತ್ರಿ – ಇವೇ ಮುಂತಾದವರನ್ನು ಖಚಿತ ವಿವರಗಳ ಮೂಲಕ ಕಣ್ಣಿಗೆ ಕಟ್ಟುವಂತೆ ಚಿತ್ರಿಸಿರುವ ಕುಂವೀಯ ಸೃಜನಶೀಲ ಪ್ರತಿಭೆ ಓದುಗರಲ್ಲಿ ಬೆರಗು ಮೂಡಿಸುತ್ತದೆ.

ಬ್ರಿಟಿಷರ ಆಡಳಿತ ಮತ್ತು ಧರ್ಮ ಈ ಎರಡರ ಆಕ್ರಮಣಕ್ಕೆ ಏಕಕಾಲದಲ್ಲಿ ಸಿಲುಕಿ ಹವ್ಯಕ ಬ್ರಾಹ್ಮಣರು ತಮ್ಮ ಊರು ಮತ್ತು ಮನೆಗಳನ್ನು ತೊರೆಯಬೇಕಾಗಿ ಬಂದ ಸಂದರ್ಭವನ್ನು ಕೇಂದ್ರೀಕರಿಸಿದರೂ ಈ ಕಾದಂಬರಿಯು ಇದಕ್ಕೆ ತದ್ವಿರುದ್ಧವಾದ ವಿದ್ಯಮಾನಗಳ ಕುರಿತು ಕುರುಡಾಗಿಲ್ಲದಿರುವುದು ಗಮನಾರ್ಹ ಸಂಗತಿ. ಶಿಕ್ಷಣ, ಕೃಷಿ, ವ್ಯಾಪಾರ, ಪೌರೋಹಿತ್ಯಗಳನ್ನು ತನ್ನ ಹಿಡಿತದಲ್ಲಿಟ್ಟುಕೊಂಡು ಶ್ರೇಣೀಕೃತ ಸಾಮಾಜಿಕ ವ್ಯವಸ್ಥೆಯೊಂದರ ಉನ್ನತ ಸ್ಥಾನದಲ್ಲಿದ್ದ ಈ ಜನಾಂಗವು ಬ್ರಿಟಿಷರ ಆಗಮನದಿಂದಾಗಿ ಎದುರಿಸಬೇಕಾಗಿ ಬಂದ ಪರಿಸ್ಥಿತಿಯು ಆ ಕಾಲದ ಚಾರಿತ್ರಿಕ ಪಲ್ಲಟದ ಒಂದು ಮುಖ ಮಾತ್ರ. ಕ್ರೈಸ್ತ ಧರ್ಮಕ್ಕೆ ಮತಾಂತರಗೊಂಡು ಕೆಳಜಾತಿ ವರ್ಗಗಳು ಹೊಸ ಅಸ್ಮಿತೆಯನ್ನಷ್ಟೇ ಅಲ್ಲದೆ ಭೂಮಿ, ಶಿಕ್ಷಣ ಮತ್ತು ಹೊಸ ಬದುಕಿನ ಸಾಧ್ಯತೆಗಳನ್ನು ಪಡೆದು ಕೊಂಡದ್ದು ಈ ಪಲ್ಲಟದ ಇನ್ನೊಂದು ಮುಖ್ಯ ಮುಖವೆಂಬುದನ್ನು ಕಾದಂಬರಿಯು ಮರೆಮಾಚು ವುದಿಲ್ಲ. ಹವ್ಯಕ ಬ್ರಾಹ್ಮಣರ ಬವಣೆಯನ್ನು ತುಂಬ ಸಹಾನುಭೂತಿಯಿಂದ ಚಿತ್ರಿಸುವ ಈ ಕಾದಂಬರಿಯ ಮೊದಲರ್ಧ ಭಾಗವು ಕೆಳಜಾತಿ ವರ್ಗಗಳ ಬಗ್ಗೆ ಆ ಜನಾಂಗವು ಇಟ್ಟುಕೊಂಡಿದ್ದ ತಾರತಮ್ಯ ಧೋರಣೆಗಳನ್ನು ಯಥಾವತ್ತಾಗಿ ದಾಖಲಿಸುತ್ತದೆ.

ಕ್ಯಾಪ್ಟನ್ ಸಿದ್ದಲಿಂಗ ಬ್ರಿಟಿಷ್ ಸರಕಾರದ ಪ್ರಬಲ ಅಸ್ತ್ರ ಮತ್ತು ಅವರ ಗುಲಾಮ. ಬಹು ಆಕರ್ಷಕ ವ್ಯಕ್ತಿ, ಮೃದು ಮಾತಿನವನಲ್ಲ, ಅಹಂಭಾವ ಉಳ್ಳವ, ಒರಟ, ಯಜಮಾನಿಕೆ ನಡೆಸುವ ಪ್ರವೃತ್ತಿಯವನು. ಸಿದ್ದಲಿಂಗ ಜುಲುಮೆಯಿಂದ ತೆರಿಗೆ ವಸೂಲಿ ಮಾಡಿ ರೈತರನ್ನು ಹಿಂಸಿಸಿದವನು, ಸ್ವಾತಂತ್ರ್ಯ ಹೋರಾಟಗಾರರೆಂದು ಸಂದೇಹಿಸಿ ನೂರಾರು ಅಮಾಯಕ ಪ್ರಜೆಗಳನ್ನು ಬರ್ಬರವಾಗಿ ಕೊಂದವನು. ಅವನು ಪರಮನೀಚ ಎನ್ನುವುದಕ್ಕೆ ತನಗೆ ಅನ್ನ ಹಾಕಿ ಬೆಳೆಸಿದ್ದ ದೊರೆ ರಾಜಾ ನರಸಿಂಹವರ್ಮನನ್ನು ಕೊಂದವನು. ಹೆಣ್ಣುಬಾಕನಲ್ಲ ಎನ್ನುವುದನ್ನು ಹೊರತುಪಡಿಸಿದಂತೆ ಉಳಿದೆಲ್ಲ ಕೆಟ್ಟ ಕೆಲಸಗಳನ್ನು ಸಹಜವಾಗಿಯೇ ಮಾಡಿದವನು. ಸಿದ್ದಲಿಂಗ ಯಾವುದೇ ನಿಖರ ಉದ್ದೇಶವಿಲ್ಲದೆ ಬ್ರಾಹ್ಮಣ ಮನೆತನದ ಯುವತಿ ಸತ್ಯಭಾಮಾಳನ್ನು ಮದುವೆಯಾಗುತ್ತಾನೆ, ಅವಳನ್ನು ಕ್ರೈಸ್ತ ಧರ್ಮಕ್ಕೆ ಮತಾಂತರಗೊಳಿಸುತ್ತಾನೆ. ದುಷ್ಟತನದ ವಿರಾಟ್‌ಸ್ವರೂಪದ ದರ್ಶನ ಕ್ಯಾಪ್ಟನ್ ಸಿದ್ದಲಿಂಗ. ಹೊಟ್ಟೆಯಲ್ಲಿ ದ್ವೇಷ, ಅಸೂಯೆ, ಪಿತೂರಿಗಳನ್ನು ತುಂಬಿಕೊಂಡವನು. ಸಿದ್ದಲಿಂಗ ಭಾರತೀಯರ ಪಾಲಿಗೆ ದುಷ್ಟ, ಆದರೆ ಅವನಿಗೆ ತಾನು ಮಾಡುತ್ತಿರುವುದು ದುಷ್ಟತನವೆಂಬ ಅರಿವಿದೆ. ಆದ್ದರಿಂದ ಅವನು ನಿಗೂಢವಾಗಿ ಸಾಯುತ್ತಾನೆ. ಅವನು ಮರಣೋತ್ತರವಾಗಿಯೂ ಕುಖ್ಯಾತನಾದವನು, ದಂತಕಥೆಗಳ ನಾಯಕನಾದವನು, ಮೌಖಿಕ ಗಾಯಕರ ಜಾನಪದ ಕಥೆ–ಕಾವ್ಯಗಳಲ್ಲಿ ಖಳನಾಯಕನ ಸ್ಥಾನ ಪಡೆದವನು.

ಹವ್ಯಕ ಬ್ರಾಹ್ಮಣ ದಂಪತಿಗಳಾದ ವೇಣು ಗೋಪಾಲಭಟ್ಟ ಮತ್ತು ಸುಶೀಲಾಬಾಯಿಯವರ ಮಗಳು ಸತ್ಯಭಾಮಾ. ಸತ್ಯಭಾಮಾ ಮಮತೆಗಾಗಿ ಮಿಡಿಯುವ, ಚಡಪಡಿಸುವ ಜೀವಸೆಲೆಯ ಕಾರಂಜಿ. ಮಮತೆಯ ಪಣತಿ ಕಣ್ಣಲ್ಲಿ ಹಚ್ಚಿ ಕತ್ತಲ ಕಂದಕಗಳಲ್ಲಿ ನಡೆಯುತ್ತಾಳೆ, ಯಾತ್ರೆಯ ಏಕಾಂತದಲ್ಲಿ ಗಟ್ಟಿಯಾಗುತ್ತಾಳೆ. ಪ್ರತಿ ಮನುಷ್ಯನ ಎದೆಯೊಳಗೆ ಹರಿಯಲು ಕಾದಿರುವ ಸೂಕ್ಷ್ಮ ಒಳನದಿಯೊಂದರ ಹೃದ್ಯ ಸಂಕೇತವಾಗುತ್ತಾಳೆ. ಸತ್ಯಭಾಮಾ ರೂಪ, ಗುಣ, ಶೀಲ ಯಾವುದರಲ್ಲೂ ಕಡಿಮೆಯಿಲ್ಲದ ಯುವತಿ. ಸಮಾಜ ಹಾಕಿಕೊಂಡ ತರ್ಕಶೂನ್ಯ ಕಟ್ಟಳೆಗಳನ್ನು, ಅನಿಷ್ಟ ಪರಂಪರೆಯನ್ನು ಧಿಕ್ಕರಿಸುತ್ತ ನಡೆಯುವ ಆಕೆ ಕ್ರಾಂತಿಕಾರಿ. ಜಾತಿಯ ಅಂಧ ಪರಂಪರೆಯಲ್ಲಿ ಮುಳುಗುತ್ತಿದ್ದ ತನ್ನ ತಂದೆ–ತಾಯಿಯರ ಲಕ್ಷ್ಮಣರೇಖೆಗಳನ್ನು ದಾಟಿ, ತನ್ನ ಸ್ವತಂತ್ರ ಮನೋಭಾವವನ್ನೇ ಮೆರೆದು ಪರಧರ್ಮಿಯಾದ ಕ್ಯಾಪ್ಟನ್ ಸಿದ್ದಲಿಂಗನನ್ನು ಮದುವೆಯಾಗುತ್ತಾಳೆ. ಹೆಣ್ಣು ಸಾಧಿಸಿಕೊಳ್ಳಬೇಕಾದ ಸ್ವತಂತ್ರ ಮತ್ತು ಕ್ರಾಂತಿಕಾರಿ ಮನೋಭಾವವನ್ನು, ಧೈರ್ಯ ಮತ್ತು ಸಾಹಸದ ಪ್ರವೃತ್ತಿಯನ್ನೂ ಲೇಖಕರು ಸತ್ಯಭಾಮಾಳ ವ್ಯಕ್ತಿತ್ವದ ಮೂಲಕ ಬಿಂಬಿಸುತ್ತಾರೆ. ಅವಳು ಅಭಿಜಾತ ಸುಂದರಿ. ಗಂಡ ಕ್ಯಾಪ್ಟನ್ ಸಿದ್ದಲಿಂಗನ ಮರಣದ ನಂತರ ಹಲವಾರು ಕಷ್ಟಗಳನ್ನು ಆಕೆ ಧೈರ್ಯದಿಂದ ಎದುರಿಸುತ್ತಾಳೆ. ಅವಳು ತನ್ನೆಲ್ಲ ನಾಮವಾಚಕಗಳನ್ನು ಬದಲಾಯಿಸಿಕೊಳ್ಳುತ್ತ ಹೋಗುತ್ತಾಳೆ. ಮೊದಲಿಗೆ ಸತ್ಯಭಾಮಾ, ಅನಂತರ ಪೌಲಿನ್, ಮುಂದೆ ಅನಂತರಮ್ಮ ಹೀಗೆ ಅವಳು ಸಂದರ್ಭಕ್ಕೆ ತಕ್ಕಂತೆ ತನ್ನ ನಾಮವಾಚಕಗಳನ್ನು ವಿಸರ್ಜಿಸಿಕೊಳ್ಳುತ್ತಾಳೆ. ತನ್ನ ಪೂರ್ವಾಪರವನ್ನು ಸಾಧ್ಯವಾದಷ್ಟು ಮರೆಮಾಚಿ ಬದುಕಿರುತ್ತಾಳೆ. ಅವಳ ತಾಯ್ತನ ಮತ್ತು ವಾತ್ಸಲ್ಯ ಮೆಚ್ಚುವಂಥದ್ದು.

ಸತ್ಯಭಾಮಾ ಮತ್ತು ಕ್ಯಾಪ್ಟನ್ ಸಿದ್ದಲಿಂಗರ ಪ್ರೇಮ ಗಟ್ಟಿಯಾಗಲು ಹಾಗೂ ಅವರಿಗೆ ಎಲ್ಲ ರೀತಿಯ ಸಹಾಯ ನೀಡಲು ಗೌರಿಯ ಪಾತ್ರದಲ್ಲಿಯೂ ಲೇಖಕರು ಸಾಮಾಜಿಕ ಬದಲಾವಣೆಗೆ ಕ್ರಾಂತಿಕಾರಿ ಗುಣಗಳನ್ನೇ ಕಾಣಿಸುತ್ತಾರೆ. ಸಮಾಜದ ಅನಿಷ್ಟ ಸಂಪ್ರದಾಯಗಳನ್ನು ಮುರಿದು ಮುಂದೆ ಸಾಗುವ ಯುವತಿಯರ ನೆರವಿಗೆ ನಿಲ್ಲಲು ಈಕೆಯಂಥವರು ಅಗತ್ಯವಿರುವುದನ್ನು ಲೇಖಕರು ಆ ಪಾತ್ರದ ಮೂಲಕ ಸೂಚಿಸಿದ್ದಾರೆ.

## ಎಲ್ಲೆ

ದೇಶ ದೇಶಗಳ ನಡುವೆ ಇಹುದೊಂದು ಎಲ್ಲೆ  
ಮಾತಿಗೂ ಮಿತಿಮೀರದಂತೆ, ಇಹುದೊಂದು ಎಲ್ಲೆ  
ದಾಟಿ ಹೋಗದಿರೆ ನಿಯಮ, ಶಾಂತಿ ಸಮಾಧಾನ  
ಉಲ್ಲಂಘಿಸಿದ ಕೂಡಲೇ ಆರಂಭವು ಘೋರ ಕದನ

**ಶ್ರೀನಿವಾಸ ಕುಂಡಂತಾಯ**  
ಬೆಂಗಳೂರು

## ‘ಹೊಸತು’ ಚಂದಾದಾರ / ಓದುಗರಿಗೆ ಮಾಹಿತಿ

ಜನವರಿ ೨೦೧೭ರ ‘ಹೊಸತು’ ಎಂದಿನಂತೆ ವಾರ್ಷಿಕ ವಿಶೇಷ ಸಂಚಿಕೆಯಾಗಿದ್ದು ಲೇಖನಗಳ ಆಯ್ಕೆ / ಪರಿಷ್ಕರಣೆ ಮುಂತಾದ ಕೆಲಸಗಳಿಗೆ ಹೆಚ್ಚಿನ ಕಾಲಾವಕಾಶ ಬೇಕಿರುವುದರಿಂದ ಓದುಗರಿಗೆ ಸಂಚಿಕೆ ೨೦೧೭ ಜನವರಿ ೧೮ರೊಳಗೆ ತಲುಪುವುದು. ಓದುಗರು ಸಹಕರಿಸಬೇಕಾಗಿ ವಿನಂತಿ.

ಕಥಾನಾಯಕ ನಿಜಲಿಂಗ ತಾಯಿಯ ಗರ್ಭದಲ್ಲಿರುವಾಗಲೇ ತಂದೆಯನ್ನು ಕಳೆದುಕೊಂಡು, ಬಾಲ್ಯದಲ್ಲಿಯೇ ತಾಯಿಯಿಂದ ತ್ಯಜಿಸಲ್ಪಟ್ಟು, ಊರವರ ಕೈಗೂಸಾಗಿ ಬೆಳೆದು, ಕ್ರೈಸ್ತ ಮಿಶನರಿಗಳ ಶಾಲೆಯಲ್ಲಿ ಆಂಗ್ಲ ಶಿಕ್ಷಣ ಪಡೆದು, ತಾರುಣ್ಯದಲ್ಲಿ ಜೇಬುಗಳ್ಳರ ಪ್ರಪಂಚವನ್ನು ಸೇರಿ ತನ್ನ ಕರಕೌಶಲ್ಯದಿಂದ ಚೋರಚಕ್ರವರ್ತಿಯಾಗಿ, ಕೊನೆಗೆ ಶ್ರೀಮಂತ ಮನೆತನದ ತರುಣಿಯೊಬ್ಬಳ ಶಯ್ಯಾಗೃಹವನ್ನು ಅಕಸ್ಮಾತ್ತಾಗಿ ಪ್ರವೇಶಿಸಿ, ಅವಳ ಸ್ನಿಗ್ಧಸೌಂದರ್ಯಕ್ಕೆ ಮಾರುಹೋಗಿ, ಕೊನೆಗೆ ಆ ತರುಣಿಯನ್ನೇ ಮದುವೆಯಾಗುತ್ತಾನೆ. ಅವನಲ್ಲಿ ಬ್ರಿಟಿಷರ ಶಿಕ್ಷಣ ಪದ್ಧತಿಯಿಂದ ಪಡೆದುಕೊಂಡ ಮೌಲ್ಯಗಳಿವೆ. ಆದರೆ ಇವೆರಡರಲ್ಲಿ ಹೊಂದಾಣಿಕೆ ಮಾಡುವುದು ಅವನಿಗೆ ಸಾಧ್ಯವಾಗುವುದಿಲ್ಲ.

ಡಾ॥ ವಸುಂಧರಾ ಓದುಗರ ಅಂತರಂಗವಾಗಿ, ಅಂತರಂಗದ ಆದರ್ಶವಾಗಿ ನಮ್ಮ ಕಳವಳ–ತಳಮಳಕ್ಕೆಲ್ಲಾ ಸಾಕ್ಷೀಭೂತಳಾಗಿದ್ದಾಳೆ. ಹಾಗೆಯೇ ಕಾದಂಬರಿಯಲ್ಲಿ ಬರುವ ಅನಸೂಯ, ರಾಮಣ್ಣ, ಅಂಬಮ್ಮ, ಲಾಲ್ಯಾ ನಾಯಕ, ಬಬಿತಾ, ದಿವಾಕರ್ ರೆಡ್ಡಿ, ಏಕಾಂಬರ್ ಚೌರಾಸ್ತ್, ಉಷಾ, ಚಕ್ರಪಾಣಿ, ಶೂಲಪಾಣಿ, ಕೋದಂಡಪಾಣಿ, ದಾಕ್ಷಾಯಣಿ, ಕಳಾವತಿ – ಮುಂತಾದವುಗಳೆಲ್ಲವೂ ಜೀವಂತ ಪಾತ್ರಗಳು.

ಈ ಕಾದಂಬರಿಯಲ್ಲಿ ಹಲವಾರು ಪಾತ್ರಗಳಿವೆ. ಆದರೆ ಈ ಪಾತ್ರಗಳ ನಡುವೆ ಇರುವ ಸಂಬಂಧ ಬಹಳ ತೆಳುವಾಗಿದೆ. ಕಥಾನಾಯಕನನ್ನು ಸಂಭೂತಿಗೊಳಿಸುವ ಈ ಕಾದಂಬರಿ ಕನ್ನಡದ ಈಗಿನ ಮುಖ್ಯ ಕಥನಸಾಹಿತ್ಯಕ್ಕೆ ಕೊಂಚ ಅಪವಾದದಂತಿದೆ. ಸಾಂಪ್ರದಾಯಿಕ ಕಾದಂಬರಿ ಬಂಧದ ದೃಷ್ಟಿಯಿಂದ ಈ ಕೃತಿಯಲ್ಲಿ ಬಂಧವೇ ಇಲ್ಲ; ರಮ್ಯ ಮತ್ತು ಸಾಹಸ ಕಥನಗಳ ಮಾಲೆಯಂತಿರುವ ಭೂತ ಮತ್ತು ವರ್ತಮಾನ ಕಾಲಗಳ ರೋಚಕ ಕಥಾನಕಗಳ ಮಾದರಿ ಇಲ್ಲಿರುವುದನ್ನು ಗಮನಿಸಬಹುದು. ಈ ಕಾದಂಬರಿಯ ಎಷ್ಟೋ ಘಟನೆಗಳು ತರ್ಕಬದ್ಧ ಸಂಬಂಧಗಳನ್ನು ಹೊಂದಿರುವಂತೆ ಕಾಣುವುದಿಲ್ಲ. ಒಂದು ಅಸಂಗತ ಜಗತ್ತನ್ನು ರೂಪಿಸುತ್ತ ಹೋದಂತೆ ಭಾಸವಾಗುತ್ತದೆ. ಈ ಕೃತಿ ಸಾಂಪ್ರದಾಯಿಕ ಕಾದಂಬರಿಯ ಉದ್ದೇಶ ಹಾಗೂ ಸ್ವರೂಪ ಗಳೆರಡನ್ನೂ ನಿರಾಕರಿಸುತ್ತದೆ. ನಿಜಲಿಂಗನ ಕಥೆಯನ್ನು ರೋಚಕವಾಗಿ ಕಟ್ಟಿಕೊಡುವ ಕುಂವೀ ಅವರ ಈ ಹೊಸ ಕಾದಂಬರಿಯನ್ನು ಅದ್ಭುತ–ರಮ್ಯ ಕಥಾನಕ ಎಂದೂ ಗುರುತಿಸಬಹುದು. ವಿಡಂಬನಾತ್ಮಕ ರಾಜಕೀಯ ಕಾದಂಬರಿಯೆಂದರೂ ಆದೀತು. ಕಾದಂಬರಿ ತನ್ನ ನಾಯಕರ ಜೀವನದ ಪ್ರತಿ ಹಂತದಲ್ಲಿಯೂ ಅವರ ಹಾಗೂ ಸಮುದಾಯದ ಸಂಬಂಧವನ್ನು ಕಾಣುವ ಬಗೆ ಕುತೂಹಲಕಾರಿ ಯಾಗಿದೆ. ಕ್ಯಾಪ್ಟನ್ ಸಿದ್ದಲಿಂಗ ಮತ್ತು ನಿಜಲಿಂಗ ತಮ್ಮ ಪರಿಸರದ ಕಟ್ಟುಪಾಡುಗಳನ್ನು ಮೀರಿ ಜನರೊಡನೆ ಮುಖಾಮುಖಿಯಾದಾಗ, ಹೋರಾಡು ವಾಗ, ಅವರಿಗೂ ಪರಿಸರಕ್ಕೂ ವಿರೋಧ ಉಂಟಾಗುತ್ತದೆ.

ಕುಂವೀ ಈ ಕಾದಂಬರಿಯಲ್ಲಿ ಸ್ವಾತಂತ್ರ್ಯ ಪೂರ್ವದ ಕಾಲದಿಂದ ಹಿಡಿದು ಸ್ವಾತಂತ್ರ್ಯೋತ್ತರ ಕಾಲದವರೆಗಿನ ರಾಜಕೀಯ, ಆರ್ಥಿಕ, ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಬೆಳವಣಿಗೆಗಳನ್ನು ನಗರ–ಗ್ರಾಮೀಣ ಪರಿಸರದ ಹಿನ್ನೆಲೆಯಲ್ಲಿ ಚಿತ್ರಿಸಿದ್ದಾರೆ. ಹೋರಾಟದ ಸೂಚನೆಯಿಂದ ಆರಂಭವಾಗಿ, ಹೋರಾಟದ ಸೂಚನೆಯೊಂದಿಗೆ ಮುಕ್ತಾಯ ವಾಗುವ ಈ ಕಾದಂಬರಿ ಸ್ವಾತಂತ್ರ್ಯಪೂರ್ವ–ಸ್ವಾತಂತ್ರ್ಯೋತ್ತರ ರಾಜಕೀಯ ಹೋರಾಟದ ನಿರಂತರತೆಯನ್ನು ಸಾಂಕೇತಿಕವಾಗಿ ಧ್ವನಿಸುತ್ತದೆ. ಈ ನಿರಂತರ ಹೋರಾಟದಲ್ಲಿ ಕಾಲಕಾಲಕ್ಕೆ ನಡೆಯಲೇ ಬೇಕಾದ ಬದಲಾವಣೆಗಳನ್ನು ಪರಿಣಾಮಕಾರಿಯಾಗಿ ದಾಖಲಿಸುತ್ತದೆ. ಇದರ ನಡುವೆ ಕುಂವೀಯವರು ಕಟ್ಟಿಕೊಟ್ಟಿರುವ ಹಳ್ಳಿ–ನಗರಗಳ ದಾರುಣ ಚಿತ್ರಣ, ಬ್ರಾಹ್ಮಣ–ಆದಿವಾಸಿಗಳ ಆತಂಕದ ಬದುಕು, ಅಲ್ಲಿ ನಿರಂತರವಾಗಿ ನಡೆಯುವ ಶೋಷಣೆ, ಶ್ರೀಮಂತರು, ಅಧಿಕಾರಿಶಾಹಿಗಳು ಬ್ರಿಟಿಷರೊಂದಿಗೆ ಶಾಮೀಲಾಗಿ ನಡೆಸುವ ಕ್ರೌರ್ಯ, ದೌರ್ಜನ್ಯದ ಚಿತ್ರಣಗಳು ಸ್ವಾತಂತ್ರ್ಯಪೂರ್ವದ ಭಾರತದ ವಾಸ್ತವ ಸ್ಥಿತಿಗೆ ಕನ್ನಡಿ ಹಿಡಿದಂತಿದೆ.

ಈ ಕಾದಂಬರಿಯ ಮೊದಲರ್ಧ ಭಾಗ ಸ್ವಾತಂತ್ರ್ಯಪೂರ್ವದ ಭಾರತದಲ್ಲಿ ವಸಾಹತುಶಾಹಿ ಯನ್ನು ತನ್ನದೇ ಆದ ರೀತಿಯಲ್ಲಿ ಅನಕ್ಷರಸ್ಥ ಜನಸಾಮಾನ್ಯರು ಎದುರಿಸಿದ ಪ್ರಸಂಗವನ್ನು ಚಿತ್ರಿಸುತ್ತದೆ. ಈ ಭಾಗದಲ್ಲಿ ಪಾತ್ರಗಳು ಸ್ವಾತಂತ್ರ್ಯವೇ ಇಲ್ಲದಷ್ಟು ಲೇಖಕರ ಬಂಧನದಲ್ಲಿ ಸಾಗಿವೆ. ತಮ್ಮ ಧ್ಯೇಯೋದ್ದೇಶಗಳನ್ನು ಸಾಕಾರಗೊಳಿಸಲು ಮುಖ್ಯ ಪಾತ್ರಗಳನ್ನು ದುಡಿಸಿಕೊಳ್ಳುವ ಕುಂವೀ ಅದರಿಂದ ಹೊರಗೆ ಹಣಕಿ ಹಾಕುವ ಅವಕಾಶವನ್ನು ಆ ಪಾತ್ರಗಳಿಗೆ ಕೊಟ್ಟಿಲ್ಲ. ಬದಲಾವಣೆ ಮತ್ತು ಪ್ರತಿಭಟನೆಗಳ ಸಾಧ್ಯತೆಯ ಶೋಧವೇ ಕಾದಂಬರಿಯಾಗಿದೆ. ಹೀಗಾಗಿ ಬೇರೆ ಬೇರೆ ನೈತಿಕ ಚರಿತ್ರೆಯ ಮತ್ತು ಸೈದ್ಧಾಂತಿಕ ಹುಡುಕಾಟದ ವ್ಯಕ್ತಿಗಳು ತಮ್ಮ ತಮ್ಮ ನಿಲುವನ್ನು ಮಂಡಿಸಲು ಮತ್ತು ಅಡ್ಡಪ್ರಶ್ನೆ ಹಾಕಲು ಅವಕಾಶ ಕಲ್ಪಿಸಿಕೊಡಲಾಗಿದೆ. ಹಲವು ತಲೆಮಾರುಗಳ ಜೀವನಾನುಭವವನ್ನು ನಿರರ್ಗಳವಾಗಿ ನಿರೂಪಿಸಲು ಬೇಕಾಗುವ ಕಥನ ಕ್ರಮವೊಂದನ್ನು ‘ನಿಜಲಿಂಗ’ ಶೋಧಿಸಿಕೊಂಡಿದೆ.

ವಿವಿಧ ಪ್ರಸಂಗಗಳು, ಪಾತ್ರಗಳು ಮತ್ತು ಸನ್ನಿವೇಶಗಳಿಗೆ ತಕ್ಕಂತೆ ಬದಲಾಗುವ ಕುಂವೀಯವರ ಭಾಷೆಯ ಸ್ವರೂಪವನ್ನು ಈ ಕಾದಂಬರಿ ಅಸಂಖ್ಯ ಉದಾಹರಣೆಗಳ ಮೂಲಕ ಸ್ಪಷ್ಟಪಡಿಸುತ್ತದೆ. ಕುಂವೀಯವರು ಸರಳ ಹಾಗೂ ನೇರವಾದ ಭಾಷೆಯನ್ನು ಕರಗತ ಮಾಡಿಕೊಂಡಿದ್ದು, ಹಾಗೂ ಪ್ರಸಂಗಾವಧಾನವಾಗಿ ಅದರ ಸ್ವರೂಪವನ್ನು ಮತ್ತು ಬನಿಯನ್ನು ಬದಲಿಸುತ್ತ ಹೋಗಿರುವುದು ಕಂಡುಬರುತ್ತದೆ. ಸಾಮಾಜಿಕ ಸ್ತರದ ವ್ಯಾವಹಾರಿಕ ಭಾಷೆಯನ್ನು ಬಳಸುತ್ತಲೇ ಅದರ ವೈವಿಧ್ಯವನ್ನೆಲ್ಲಾ ಸಮರ್ಥವಾಗಿ ದುಡಿಸಿಕೊಂಡಿದ್ದಾರೆ. ನೇರ ನುಡಿ, ಸಂದರ್ಭೋಚಿತ ಭಾಷೆ, ಅಸದೃಶ ಸನ್ನಿವೇಶ ನಿರ್ಮಾಣ, ಸಂಭಾಷಣೆಯ ಸ್ವಾರಸ್ಯ, ಉಪಮೆ, ಅಲಂಕಾರ, ಗಾದೆಮಾತು, ಗ್ರಾಮೀಣ ಭಾಷೆಯ ಸತ್ವಯುತ ಬಳಕೆ, ವಿಶಿಷ್ಟಾರ್ಥದ ಗ್ರಾಮೀಣ ಪದಪುಂಜಗಳು, ಗ್ರಾಮೀಣ ಬೈಗುಳಗಳು ಇತ್ಯಾದಿಗಳೆಲ್ಲವೂ ಹಾಸುಹೊಕ್ಕಾಗಿರುವ ಕುಂವೀಯವರ ಶೈಲಿಯ ವಿವೇಚನೆ ತುಂಬ ರೋಚಕವಾಗಿದೆ. ಕನ್ನಡ ಕಾದಂಬರಿಗಳ ಬೆಳವಣಿಗೆಯನ್ನು ನಿರಂತರ ಗಮನಿಸುತ್ತ ಬಂದವರಿಗೆ ಈ ಕಾದಂಬರಿಯ ಕೆಲವು ವಿಶೇಷತೆಗಳನ್ನು ಕಾಣಲು ಸಾಧ್ಯವಾಗುತ್ತದೆ. ಕಥಾವಸ್ತು ಮತ್ತು ಅದರ ನಿರ್ವಹಣೆ ಹಾಗೂ ನಿರೂಪಣೆಯ ವಿಧಾನದಲ್ಲಿ ಹೊಸತನ ಸಾಧಿಸಲು ಪ್ರಯತ್ನಿಸಲಾಗಿದೆ. ಸಾಮಾಜಿಕವಾಗಿ ಹಿಂದುಳಿದ ವರ್ಗದಲ್ಲಿರುವ ಶೋಷಿತ ವ್ಯಕ್ತಿಯೊಬ್ಬನು ವಿಕಸನಶೀಲ ಪ್ರಜ್ಞೆಯ ಮೂಲಕ ನಾಳೆಗೆ ಸಿದ್ಧವಾಗುವ ಪ್ರಕ್ರಿಯೆಯನ್ನು ಬಿಂಬಿಸುವಲ್ಲಿ ಈ ದಶಕದ ಪ್ರಮುಖ ಸಾಹಿತ್ಯಿಕ ಆಶಯವೊಂದನ್ನು ಈ ಕೃತಿ ಪಡೆದಂತಾಗಿದೆ. ಸಾಂಪ್ರದಾಯಿಕ ಅರ್ಥದಲ್ಲಿ, ಬಂಧದಲ್ಲಿ ಸಾವಯವತೆ ಇಲ್ಲದಿದ್ದರೂ ಮಾನವ, ಪ್ರಾಣಿ ಮತ್ತು ಪ್ರಾಕೃತಿಕ ಜಗತ್ತುಗಳ ಬಳಕೆಯಿಂದ ಬಂಧವೊಂದನ್ನು ಬೇರೊಂದು ನೆಲೆಯಲ್ಲಿ ಕೃತಿಗೆ ಒದಗಿಸಲಾಗಿದೆ. ಈ ಎಲ್ಲ ಅಂಶಗಳಿಂದಾಗಿ ‘ನಿಜಲಿಂಗ’ ಕನ್ನಡ ಕಾದಂಬರಿಗಳಲ್ಲಿ ಮಹತ್ವದ ಸ್ಥಾನವೊಂದನ್ನು ಪಡೆದುಕೊಳ್ಳುವುದರಲ್ಲಿ ಯಾವುದೇ ಸಂದೇಹವಿಲ್ಲ.

**ಸಿ. ಎಸ್. ಭೀಮರಾಯ**
ಆಂಗ್ಲ ಉಪನ್ಯಾಸಕರು, ಕೇರಾಫ್ ಸಿದ್ದಣ್ಣ ಬಿ. ಪೂಜಾರಿ
‘ಅಪೂರ್ವ ನಿವಾಸ’, ಯಮುನಾ ನಗರ, ಕುಸನೂರ ರಸ್ತೆ
ಕಲಬುರಗಿ – ೫೮೫ ೧೦೫

## ಅಮೆರಿಕ ಚುನಾವಣೆ ಟ್ರಂಪ್ ಅನಿರೀಕ್ಷಿತ ಜಯ !

**ಮೂ**ರು ದಶಕಗಳಿಗೂ ಹಿಂದೆ, ಶೀತಯುದ್ಧ ಉತ್ತುಂಗದಲ್ಲಿದ್ದಾಗ ಸೋವಿಯೆತ್ ಒಕ್ಕೂಟದ ಕಮ್ಯುನಿಸ್ಟ್ ನಾಯಕ ನಿಕಿಟಾ ಕ್ರುಶ್ಚೇವ್ ಅಮೆರಿಕದ ಅಧ್ಯಕ್ಷೀಯ ಚುನಾವಣೆಯನ್ನು ಲೇವಡಿ ಮಾಡುತ್ತ, 'ಅಮೆರಿಕದಲ್ಲಿ ಯಾರು ಬೇಕಾದರೂ ಅಧ್ಯಕ್ಷರಾಗಬಹುದು, ಬಹುರಾಷ್ಟ್ರೀಯ ಕಂಪೆನಿಗಳ ಬೆಂಬಲವಿದ್ದರೆ' ಎಂದು ಹೇಳಿದ್ದರು. ಆ ಮಾತು ಈಗ ನಿಜವಾಗಿದೆ. ರಿಪಬ್ಲಿಕನ್ ಪಕ್ಷದ ಅಭ್ಯರ್ಥಿ, ರಿಯಲ್ ಎಸ್ಟೇಟ್ ದೊರೆ ಡೊನಾಲ್ಡ್ ಟ್ರಂಪ್ ಅವರ ಅನಿರೀಕ್ಷಿತ ವಿಜಯ ಜಗತ್ತಿನ ಎಲ್ಲ ಬಗೆಯ ಮಾಧ್ಯಮಗಳ ಭವಿಷ್ಯವಾಣಿಯನ್ನು ಸುಳ್ಳಾಗಿಸಿತು. ಡೆಮಾಕ್ರಟಿಕ್ ಪಕ್ಷದ ಹಿಲರಿ ಕ್ಲಿಂಟನ್ ಪ್ರತಿಸ್ಪರ್ಧಿಗಿಂತ ಸ್ವಲ್ಪ ಹೆಚ್ಚು ಜನರ ಮತ ಗಳಿಸಿದ್ದಾಗ್ಯೂ ಸೋತಿದ್ದಾರೆ. ಅದೇ ಅಮೆರಿಕದ ಚುನಾವಣೆಗಳ ವೈಶಿಷ್ಟ್ಯ. ಒಂದು ರೀತಿಯಲ್ಲಿ ಅದು ಪ್ರತ್ಯಕ್ಷ ಹಾಗೂ ಪರೋಕ್ಷ. ಅಧ್ಯಕ್ಷರನ್ನು ಆಯ್ಕೆಮಾಡುವುದು 'ಎಲೆಕ್ಟೊರಲ್ ಕಾಲೇಜ್' ಎಂಬ ವ್ಯವಸ್ಥೆ. ಅಂತೂ ಹಿಲರಿ ಕ್ಲಿಂಟನ್‌ಗೆ ಅಮೆರಿಕದ ಇತಿಹಾಸದಲ್ಲಿ ಪ್ರಥಮ ಮಹಿಳೆ ಅಧ್ಯಕ್ಷರು ಎಂಬ ಹಿರಿಮೆ ತಪ್ಪಿತು. ಅಮೆರಿಕ ಅಧ್ಯಕ್ಷರ ಚುನಾವಣೆ ಬೇಕಾದಷ್ಟು ಟೀಕೆ ಟಿಪ್ಪಣಿಗಳಿಗೆ ಒಳಗಾಗಿದೆ ಈಗಾಗಲೆ. ಜಗತ್ತು ಬಲಪಂಥದತ್ತ ವಾಲುತ್ತಿದ್ದೆಯೇ ಎಂಬ ಸಿದ್ಧಾಂತವನ್ನು ಕೂಡ ಹೆಣೆಯಲಾಗಿದೆ. ಪ್ರಾಯಶಃ ಭಾರತದ ಉದಾಹರಣೆ ಪ್ರೇರಣೆ ಇದ್ದೀತೇನೋ. ಇದು ಗಮನಿಸಬೇಕಾದ ಸಂಗತಿ.

ಎಲ್ಲ ಚುನಾವಣೆಗಳಂತೆಯೇ ಅಮೆರಿಕದ ಚುನಾವಣೆಗಳಲ್ಲೂ ಅಭ್ಯರ್ಥಿಗಳು ಮತ್ತು ಅವರನ್ನು ಬೆಂಬಲಿಸುವ ಪಕ್ಷಗಳು ಹೇರಳವಾಗಿ ಹಣ ಖರ್ಚು ಮಾಡುವುದು ಸಹಜ. ಮತ್ತೆ ತೀರಾ ಕೆಳಮಟ್ಟದ ಪ್ರಚಾರ ನಡೆಸುವುದು, ಹೊಸದೇನಲ್ಲ. ಮುಂದಿನ ವರ್ಷದ ಜನವರಿ ಮೂರನೆಯ ವಾರದಲ್ಲಿ ಜಗತ್ತಿನ ಅತಿ ಬಲಿಷ್ಠ ರಾಷ್ಟ್ರದ ಅಧ್ಯಕ್ಷನಾಗಿ ಅಧಿಕಾರ ವಹಿಸಿಕೊಳ್ಳಲಿರುವ ಡೊನಾಲ್ಡ್ ಟ್ರಂಪ್ ರಾಜಕೀಯ ರಂಗ ಪ್ರವೇಶಿಸಿದ್ದು ತೀರಾ ಇತ್ತೀಚೆಗೆ. ಬೇಕಾದಷ್ಟು ಹಣ ಸಂಪಾದಿಸಿರುವ ಈ ಉದ್ದಿಮೆದಾರನ ಪ್ರಚಾರ ವೈಖರಿಯೂ ಕೂಡ ಒಂದು ಬಗೆಯಲ್ಲಿ ಮೋಜಿನದಾಗಿತ್ತು, ಅಷ್ಟೇ ವಿವಾದಾತ್ಮಕವೂ ಆಗಿತ್ತು. ಕನ್ಸರ್‌ವೇಟಿವ್, ಸ್ತ್ರೀ ದ್ವೇಷಿ, ಅನನುಭವಿ, ಅಮೆರಿಕದ ಬಿಳಿಯರನ್ನು ಬಿಟ್ಟು ಉಳಿದ ಎಲ್ಲರನ್ನೂ ದ್ವೇಷಿಸುವ ವ್ಯಕ್ತಿ ಎಂದು ನಾನಾ ಬಿರುದುಗಳನ್ನು ಹೊತ್ತ ಈತನ ಸೋಲು ಕಟ್ಟಿಟ್ಟ ಬುತ್ತಿ ಎಂದು ನಿರೀಕ್ಷಿಸಲಾಗಿತ್ತು. ಮುಸಲ್ಮಾನರ ಬಗ್ಗೆ, ಕರಿಯ ಜನಾಂಗದವರ ಬಗ್ಗೆ, 'ಚಿಕಾನೊ'ಗಳು ಎಂದು ಕರೆಯಲ್ಪಡುವ ಮೆಕ್ಸಿಕನ್ ಅಕ್ರಮ ವಲಸೆಗಾರರ ಕುರಿತು ಟ್ರಂಪ್ ಏನೇ ಅಬ್ಬರ ಮಾಡಿದ್ದರೂ, ಮೆಕ್ಸಿಕೋ ಗಡಿಯಲ್ಲಿ ಗೋಡೆ ಕಟ್ಟುವ ಮಾತನಾಡಿದರೂ, ಅವೆಲ್ಲ ಚುನಾವಣೆ ಪ್ರಚಾರದ ಅಬ್ಬರ ಅಷ್ಟೆ. ಅವನ್ನು ಕಾರ್ಯಗತ ಮಾಡುವುದು ಸುಲಭವಲ್ಲ. ಭಾರತೀಯರಾದ ನಮಗೆ ಅದರ ಅನುಭವ ಸಾಕಷ್ಟಾಗಿದೆ. ಮೋದಿ ಸರಕಾರ ಅಧಿಕಾರಕ್ಕೆ ಬಂದಮೇಲೆ. ಅದರಲ್ಲೂ ಅಮೆರಿಕದಲ್ಲಿ ಬಹುರಾಷ್ಟ್ರೀಯ ಕಾರ್ಪೊರೇಟ್ ವಲಯ ಹಾಕುವ ಗೆರೆಯನ್ನು ದಾಟಲು ಯಾವ ಅಧ್ಯಕ್ಷನಿಗೂ ಸಾಧ್ಯವಾಗದು. ವ್ಯವಸ್ಥೆ ಹಾಗಿದೆ. ಅದಕ್ಕೆ ಉದಾಹರಣೆಗಳೂ ಇವೆ. ಒಬಾಮಾ ಚುನಾವಣಾ ಸಮಯದಲ್ಲಿ ನೀಡಿದ್ದ ಭರವಸೆಗಳನ್ನು ಪೂರೈಸಲಾಗದಿದ್ದುದೇ ಸಾಕು. ಎಂಟು ವರ್ಷಗಳ ಅಧಿಕಾರಾವಧಿಯಲ್ಲಿ ಪ್ರಪಂಚದ ಯಾವುದೇ ಭಾಗದಿಂದಲೂ ಸೇವೆಯನ್ನು ಹಿಂತೆಗೆದುಕೊಳ್ಳಲು ಆತನಿಗೆ ಸಾಧ್ಯವಾಗಲಿಲ್ಲ, ಬದಲಾಗಿ ಅಮೆರಿಕ ಇನ್ನಷ್ಟು ಫಜೀತಿಯಲ್ಲಿ ಸಿಕ್ಕಿಕೊಂಡಿದೆ ಎಂಬುದನ್ನು ಮರೆಯುವಂತಿಲ್ಲ.

ಅಧಿಕಾರ ವಹಿಸಿಕೊಂಡಮೇಲೆ ಟ್ರಂಪ್ ಯಾವ ರೀತಿ ತಮ್ಮ 'ಟ್ರಂಪ್ ಕಾರ್ಡ್' ಉಪಯೋಗಿಸುತ್ತಾರೆ ನೋಡೋಣ. ಚುನಾವಣಾ ಪ್ರಚಾರದಲ್ಲಿ ಅಮೆರಿಕದ ಹಿರಿಮೆಯನ್ನು ಎತ್ತಿಹಿಡಿಯುವುದಾಗಿ, ಅಮೆರಿಕನ್ನರಿಗೇ ಉದ್ಯೋಗ ನೀಡುವುದಾಗಿ ಅವರು ನೀಡಿರುವ ಭರವಸೆ ಅವರ ಆಯ್ಕೆಗೆ ಮೂಲ ಎಂದು ಪರಿಣತರ ಅಭಿಮತ. ಬಿಳಿಯರ ಶ್ರೇಷ್ಠತೆಯನ್ನು ಮುಂದೆ ತಂದಿದ್ದು ಯುವ ಮತದಾರರನ್ನು ಆಕರ್ಷಿಸಲು ಕಾರಣ. ಅದು ಎಷ್ಟುಮಟ್ಟಿಗೆ ಕಾರ್ಯಗತವಾಗುವುದೊ ನೋಡಬೇಕು. ಅಂತೂ ಟ್ರಂಪ್ ಆಯ್ಕೆ ಅಮೆರಿಕದ ವಲಸಿಗರಲ್ಲಿ ಆತಂಕ ಮೂಡಿಸಿರುವುದಂತೂ ನಿಜ. ಹಾಲಿ ಅಧ್ಯಕ್ಷ ಒಬಾಮಾಗೆ ಇಲ್ಲದೇ ಹೋದ ಅನುಕೂಲವೊಂದು ಟ್ರಂಪ್‌ಗೆ ಸಿದ್ಧಿಸಿದೆ. ಅದು ಸೆನೆಟ್ ಹಾಗೂ ಕಾಂಗ್ರೆಸ್ ಎರಡು ಸದನಗಳಲ್ಲೂ ರಿಪಬ್ಲಿಕನ್ನರಿಗೆ ಬಹುಮತ ಇದೆ. ಹಾಗಾಗಿ ಯಾವುದೇ ಸುಧಾರಣೆಗಳನ್ನು ತರಲು ಅಡ್ಡಿ ಇಲ್ಲ. ಅಮೆರಿಕದ ಐವತ್ತು ರಾಜ್ಯಗಳಲ್ಲಿ ಮೂವತ್ತನಾಲ್ಕು ಗವರ್ನರುಗಳು ರಿಪಬ್ಲಿಕನ್ ಪಕ್ಷದವರು. ಕ್ಯಾಲಿಫೋರ್ನಿಯ, ಮಿಚಿಗನ್ ಮೊದಲಾದ ಹಲವು ಕಡೆಗಳಲ್ಲಿ ಡೊನಾಲ್ಡ್ ಟ್ರಂಪ್ ವಿರುದ್ಧ ಪ್ರದರ್ಶನಗಳು ನಡೆದಿವೆ. ಇವೆಲ್ಲ ಕೆಲವೇ ದಿನಗಳಲ್ಲಿ ತಣ್ಣಗಾಗುವುದು. 'ನಾನು ಎಲ್ಲ ಅಮೆರಿಕನ್ನರ ಅಧ್ಯಕ್ಷ' ಎಂದು ಹೇಳಿಕೊಂಡಿದ್ದಾರೆ ಟ್ರಂಪ್ ಜಯಗಳಿಸಿದ ನಂತರ. ಅಂತೂ ಅಮೆರಿಕದಲ್ಲಿ ಹೊಸ ಆಡಳಿತ ಪ್ರಾರಂಭವಾಗುತ್ತಿದೆ, ಟ್ರಂಪ್ ಯುಗ.

* * *

## ಅಕ್ಟೋಬರ್ ಮಹಾಕ್ರಾಂತಿಗೆ ನೂರು ವರ್ಷ

**ಮ**ನುಕುಲದ ಇತಿಹಾಸದಲ್ಲಿ ಹಲವು ಕ್ರಾಂತಿಗಳು ಜರುಗಿವೆ. ಮನುಷ್ಯನಿಂದ ಮನುಷ್ಯನ ಶೋಷಣೆ ಶುರುವಾದಾಗಿನಿಂದ ಶೋಷಿತ ವರ್ಗ ಅನೇಕ ಹೋರಾಟಗಳನ್ನು ನಡೆಸಿದೆ. ಚರಿತ್ರೆಯಲ್ಲಿ ನಾವು ಇಂದು ಗುರ್ತಿಸುವುದು ಫ್ರಾನ್ಸ್‌ನ ಮಹಾಕ್ರಾಂತಿ ಹಾಗೂ ರಷ್ಯಾದಲ್ಲಿ ಜರುಗಿದ ಅಕ್ಟೋಬರ್ ಮಹಾಕ್ರಾಂತಿ. ೧೮೭೧ರಲ್ಲಿ 'ಪ್ಯಾರಿಸ್ ಕಮ್ಯೂನ್' ಎಂದೇ ಹೆಸರಾಗಿರುವ ಫ್ರೆಂಚ್ ಜನತೆ ನಡೆಸಿದ ಮಹಾಕ್ರಾಂತಿ ಸ್ಥಾಪಿಸಿದ ಸರಕಾರ ಅಸ್ತಿತ್ವದಲ್ಲಿದ್ದುದು ಅಲ್ಪಕಾಲ. ರಷ್ಯಾದಲ್ಲಿ ಸಮಾಜವಾದಿ ಸಮಾಜ ಸ್ಥಾಪನೆಯ ಗುರಿ ಇರಿಸಿಕೊಂಡು ೧೯೧೭ರ ನವೆಂಬರ್ ೭ರಂದು ಮಹಾನ್ ನಾಯಕ ವ್ಲಾದಿಮಿರ್ ಇಲ್ಯಿಚ್ ಲೆನಿನ್ ನಾಯಕತ್ವದಲ್ಲಿ ರೈತರು ಮತ್ತು ಕಾರ್ಮಿಕರು, ಸೈನಿಕರು ತ್ಸಾರ್‌ಶಾಹಿ ಸರ್ವಾಧಿಕಾರದ ವಿರುದ್ಧ ನಡೆಸಿದ ಮಹಾಕ್ರಾಂತಿ ಅಸ್ತಿತ್ವದಲ್ಲಿದ್ದುದು ಎಂಬತ್ತನಾಲ್ಕು ವರ್ಷ. ಮೊದಲನೇ ಮಹಾಯುದ್ಧ ಕೊನೆಯಲ್ಲಿ ಸಂಭವಿಸಿದ ಕ್ರಾಂತಿಯ ನಂತರ ಸ್ಥಾಪನೆಗೊಂಡ ಸರಕಾರ ಎರಡನೇ ಮಹಾಯುದ್ಧದ ಕಾಲದಲ್ಲಿ ಜರ್ಮನಿಯ ಫಾಸಿಸ್ಟ್ ಸೇನೆಯನ್ನು ಹಿಮ್ಮೆಟ್ಟಿಸಿದ ಕೀರ್ತಿ ಸೋವಿಯೆತ್ ಒಕ್ಕೂಟಕ್ಕೆ ಸಂದಿತು. ದೀರ್ಘಕಾಲ ಜಗತ್ತಿನ ಬಲಿಷ್ಠ ರಾಷ್ಟ್ರ ಅಮೆರಿಕದೊಂದಿಗೆ ಶೀತಯುದ್ಧದಲ್ಲಿ ನಿರತವಾಗಿದ್ದ ಈ ಒಕ್ಕೂಟದ ಪತನ ಜಗತ್ತಿನ ಸಮಾಜವಾದಿ ಚಳವಳಿಗೆ ಹಿನ್ನಡೆ ತಂದಿದ್ದು ನಿಜ. ಸೋವಿಯೆತ್ ಒಕ್ಕೂಟದ ವಿಘಟನೆಗೆ ಕಾರಣಗಳೇನೇ ಇರಲಿ, ಅದು ಜಾಗತಿಕ ಸಮಾಜವಾದಿ ಚಳವಳಿಗೆ ಸ್ಫೂರ್ತಿದಾಯಕ ಚೈತನ್ಯವಾಗಿತ್ತು. ಹಾಗಿದ್ದರೂ ಕೂಡ ಸಿದ್ಧಾಂತಕ್ಕೆ ಅಳಿವಿಲ್ಲ ಎಂಬುದನ್ನು ನಂತರದ ವರ್ಷಗಳು ರುಜುವಾತುಪಡಿಸಿವೆ. ಕಾರ್ಲ್ ಮಾರ್ಕ್ಸ್–ಏಂಗೆಲ್ಸ್‌ರ ಸಿದ್ಧಾಂತ, ಅವರು ಸಿದ್ಧಗೊಳಿಸಿದ 'ಕಮ್ಯುನಿಸ್ಟ್ ಪ್ರಣಾಳಿಕೆ' ಇಂದಿಗೂ ಪ್ರಸ್ತುತ.

ಅಕ್ಟೋಬರ್ ಮಹಾಕ್ರಾಂತಿಯ ಕುರಿತು, ಅದರ ನಂತರ ಸ್ಥಾಪನೆಯಾದ ಏಕೈಕ ಕಾರ್ಮಿಕ–ರೈತರ ಕಮ್ಯುನಿಸ್ಟ್ ಸರಕಾರ ಸ್ಥಾಪಿಸಲು ಉದ್ದೇಶಿಸಿದ ವರ್ಗರಹಿತ 'ಕಮ್ಯುನಿಸಂ' ವ್ಯವಸ್ಥೆಯ ಕುರಿತು ಹೇಳುವುದು ಬೇಕಾದಷ್ಟಿದೆ. ಮಹಾನ್ ನಾಯಕ ಲೆನಿನ್‌ರ ಗುರಿ ಸಮಾಜವಾದಿ ಸಮಾಜದ ಸ್ಥಾಪನೆ. ವ್ಯಾವಹಾರಿಕವಾಗಿ ಸೋವಿಯೆತ್ ಒಕ್ಕೂಟವನ್ನು 'ಸಮಾಜವಾದಿ ರಾಷ್ಟ್ರ' ಎಂದು ಗುರ್ತಿಸಿದ್ದಾಗ್ಯೂ ಅದು ಸಮಾಜವಾದಿ ಸಮಾಜವಾಗಿರಲಿಲ್ಲ ನಿಜವಾದ ಅರ್ಥದಲ್ಲಿ. ಹಾಗೆಯೇ ಪೂರ್ವ ಯೂರೋಪಿನಲ್ಲಿ, ವಿಯೆಟ್ನಾಮ್‌ನಲ್ಲಿ, ಚೀಣಾದಲ್ಲಿ ಸ್ಥಾಪನೆಯಾದ್ದು ಕಮ್ಯುನಿಸ್ಟ್ ನೇತೃತ್ವದ ಸರಕಾರವೇ ಹೊರತು ಬೇರೇನಲ್ಲ. ಆದರೂ ರಷ್ಯಾದಲ್ಲಿ ಕ್ರಾಂತಿಯ ನಂತರ ಆದ ಬೆಳವಣಿಗೆಗಳು ಅಗಾಧ. ಒಂದು ಕಾಲದಲ್ಲಿ ತೀರಾ ಹಿಂದುಳಿದಿದ್ದ ರಷ್ಯಾ ಕೈಗಾರಿಕಾ ರಾಷ್ಟ್ರವಾಗಿ ಬೆಳೆದದ್ದು, ಎರಡನೇ ಮಹಾಯುದ್ಧಾನಂತರ ಬಲಿಷ್ಠ ರಾಷ್ಟ್ರವಾಗಿ ಉದ್ಭವಿಸಿದ್ದು ಅದ್ಭುತ. ಅದರ ಹಿನ್ನಡೆಗೆ ಕಾರಣಗಳೇನೇ ಇದ್ದರೂ ಕೂಡ 'ಅಕ್ಟೋಬರ್ ಮಹಾಕ್ರಾಂತಿ' ಇಂದಿಗೂ ಪ್ರಸ್ತುತ, ರೈತ–ಕಾರ್ಮಿಕ ಚಳವಳಿಗೆ, ಶೋಷಿತ ವರ್ಗಕ್ಕೆ ಸ್ಫೂರ್ತಿದಾಯಕ.

**ಸೀಯಾರ್ಕೆ**
'ಚೌಬೀನ', ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು – ೫೬೦ ೦೮೫

ಚರ್ಚ್ ೧೬೩೨ರಲ್ಲೇ ಸಮನ್ಸ್ ಕಳುಹಿಸಿತ್ತು. ಗೆಲಿಲಿಯೊ ರೋಂಗೆ ಹೋಗಿದ್ದು ಜನವರಿ ೧೬೩೩ರಲ್ಲಿ. 'ಕೊಪರ್ನಿಕಸ್ ಸಿದ್ಧಾಂತವನ್ನು ಬೋಧಿಸದಂತೆ, ನಿನ್ನ ಮೇಲೆ ಅಧಿಕೃತ ನಿರ್ಬಂಧವನ್ನು ಮೊದಲೇ ವಿಧಿಸಲಾಗಿತ್ತು ಎಂದು ಒಪ್ಪಿಕೊ' ಎಂದರು ವಿಚಾರಕರು. ಗೆಲಿಲಿಯೊ ಬೆಲಾರ್ಮಿನ್‌ನ ಪತ್ರ ತೋರಿಸಿದ. ಆದರೆ ಆತ ೧೬೨೧ರಲ್ಲೇ ಮೃತನಾಗಿದ್ದ; ರಕ್ಷಿಸಬಹುದಾಗಿದ್ದ ಇನ್ನೊಬ್ಬನೂ ೧೬೩೦ರಲ್ಲಿ ಕಾಲವಾಗಿದ್ದ. ಹಿಂಸೆ ನೀಡುವ ಹೆದರಿಕೆ ಹಾಕಿ ಗೆಲಿಲಿಯೊನನ್ನು ಪ್ರಶ್ನಿಸಲಾಯಿತು. ಉತ್ಕಟ ಸಂಶಯದ ಪಾಷಂಡವಾದ(ಹೆರೆಸಿ)ವನ್ನು ಪರಿತ್ಯಜಿಸುತ್ತೇನೆ ಎಂದು ಹೇಳಿಸಲಾಯಿತು. ಜೀವಾವಧಿ ಕಾರಾಗೃಹ ವಿಧಿಸಿದರು. ಗೆಲಿಲಿಯೊ ತನ್ನ ಬದುಕಿನ ಉಳಿದ ಭಾಗವನ್ನು ತನ್ನ ಅರ್ಸೆಟ್ರಿ ನಿವಾಸದಲ್ಲಿ, ಗೃಹಬಂಧನದಲ್ಲಿ ಸವೆಸಬೇಕಾಯಿತು.

# ನಂಬಿಕೆಯೋ, ಸಂಶೋಧನೆಯೋ?

ಈಚಿನ ದಿನಗಳಲ್ಲಿ ಭಾರತದಲ್ಲಿ ವಿವೇಕ ಮತ್ತು ನಂಬಿಕೆಗಳ ಮಿತಿಗಳ ಬಗೆಗೆ ಚರ್ಚೆಯಾಗುತ್ತಿದೆ. ಪ್ರಶ್ನಿಸಿ, ಅನ್ವೇಷಿಸಿ, ತೀರ್ಮಾನಿಸುವ ವಿಜ್ಞಾನದ ಪ್ರಕ್ರಿಯೆಯನ್ನು ಧರ್ಮ (ರಿಲಿಜನ್)ಕ್ಕೆ ಅನ್ವಯಿಸಬಾರದು ಎಂಬುದು ಕೆಲವರ ಅಭಿಮತ, ವಾದ. ಈ ಚರ್ಚೆ, ವಾಗ್ವಾದಗಳು ಇಂದಿನವಲ್ಲ, ಇವಕ್ಕೆ ಶತಮಾನಗಳ ಇತಿಹಾಸವಿದೆ. ಇದರಲ್ಲಿ ಉಲ್ಲೇಖಾರ್ಹ ಹೆಸರು ಗೆಲಿಲಿಯೊ (೧೫೬೪–೧೬೪೨). ತನ್ನ ವೈಜ್ಞಾನಿಕ ಪ್ರಯೋಗ, ಸಿದ್ಧಾಂತಗಳಿಗೆ ಸುಪ್ರಸಿದ್ಧನಾದ ಈತ ತನ್ನ ಜೀವನದ ಕಡೆಯ ಎಂಟು ವರ್ಷ ಗೃಹಬಂಧನದಲ್ಲಿರಬೇಕಾಯಿತು.

ಸ್ಥೂಲವಾಗಿ ಹೇಳಬೇಕೆಂದರೆ, ಈ ವಿಶ್ವಕ್ಕೆ ಕೇಂದ್ರ ಯಾವುದು ಎಂಬುದರ ಬಗೆಗೆ ಎರಡು ಅಭಿಪ್ರಾಯಗಳಿದ್ದವು. ಜಿಯೋಸೆಂಟ್ರಿಸಂ – ಭೂಮಿಯೇ ಕೇಂದ್ರ ಎಂಬ ವಾದ. ಇದು (ಗ್ರೀಕ್ ತತ್ತ್ವಶಾಸ್ತ್ರಜ್ಞ) ಅರಿಸ್ಟಾಟಲ್‌ನ ಕಾಲದಿಂದ ಪ್ರಾಧಾನ್ಯ ಪಡೆದಿತ್ತು. ಗೆಲಿಲಿಯೊ ಪ್ರತಿಪಾದಿಸಿದ ಹೀಲಿಯೊಸೆಂಟ್ರಿಸಂ – ಸೂರ್ಯಕೇಂದ್ರಕ ವಾದ, ಕೊಪರ್ನಿಕಸ್ ಸಿದ್ಧಾಂತವನ್ನು ('ಭೂಮಿಯನ್ನೂ ಒಳಗೊಂಡಂತೆ ಗ್ರಹಗಳು ಸೂರ್ಯನ ಸುತ್ತ ಪರಿಭ್ರಮಿಸುತ್ತವೆ') ಪುಷ್ಟೀಕರಿಸಿ ಕ್ಯಾಥೋಲಿಕ್ ಚರ್ಚ್‌ನ ವಿರೋಧಕ್ಕೆ ಕಾರಣವಾಯಿತು.



*'ಡಿಸ್ಕೋರ್ಸಸ್ ಅಂಡ್ ಮ್ಯಾಥಮ್ಯಾಟಿಕಲ್ ಡೆಮಾನ್‌ಸ್ಟ್ರೇಶನ್ಸ್ ರಿಲೇಟಿಂಗ್ ಟು ಟೂ ನ್ಯೂ ಸೈನ್ಸಸ್' ಗ್ರಂಥವನ್ನು ಗೆಲಿಲಿಯೊ ಪ್ರಕಾಶಿಸಿದ.*

ಇವೆಲ್ಲ ಇದ್ದಕ್ಕಿದ್ದಂತೆ ಆದುವಲ್ಲ. ಗೆಲಿಲಿಯೊ ತನ್ನ ಪ್ರಸಿದ್ಧ ಪೆಂಡ್ಯುಲಂ ಎಕ್ಸ್‌ಪೆರಿಮೆಂಟ್ಸ್ (ಲೋಲಕ ಪ್ರಯೋಗಗಳು) ನಡೆಸಿದ್ದು ಕ್ರಿ. ಶ. ೧೬೦೪–೧೧ರ ಅವಧಿಯಲ್ಲಿ. ೧೬೧೧ರಲ್ಲಿ ಆತ ರೋಮ್‌ಗೆ ಬಂದಿದ್ದಾಗ ಸಂಭ್ರಮದಿಂದ ಸ್ವಾಗತಿಸಿದವರಲ್ಲಿ ಪಾದ್ರಿಗಳೂ ಇದ್ದರು; ತನ್ನ ಟೆಲಿಸ್ಕೋಪನ್ನು ಪ್ರತಿಷ್ಠಾಪಿಸಿ ಸೌರಕಲೆಗಳು (ಸನ್ ಸ್ಪಾಟ್ಸ್) ಇತ್ಯಾದಿಯನ್ನು ತೋರಿಸಿದ್ದು ಕಾರ್ಡಿನಲ್ ಒಬ್ಬರ ತೋಟದಲ್ಲಿ.

ಅವಲೋಕನ, ಪ್ರಯೋಗ, ಗಣಿತ ಆಧಾರಿತ ತರ್ಕ – ಇದು ಗೆಲಿಲಿಯೊನ ವಿಧಾನವಾಗಿತ್ತು. ಜ್ಯುಪಿಟರ್ (ಗುರು) ಗ್ರಹದ ಉಪಗ್ರಹ (ಮೂನ್)ಗಳ ಆವಿಷ್ಕಾರದ ಬಗೆಗೆ ಆತ ಪ್ರಕಟಿಸಿದ್ದು ೧೬೧೦ರಲ್ಲಿ. ಮುಂದೆ ೧೬೧೩ರಲ್ಲಿ ಗ್ರ್ಯಾಂಡ್ ಡಚೆಸ್ ಕ್ರಿಸ್ಟೀನಾರಿಗೆ ಬರೆದ ಪತ್ರದಲ್ಲಿ 'ಬೈಬಲ್ ಮತ್ತು ಹೀಲಿಯೋಸೆಂಟ್ರಿಕ್ ಸಿದ್ಧಾಂತಗಳ ನಡುವಿನ ಪರಸ್ಪರ ವೈರುಧ್ಯ (ಕಾನ್‌ಫ್ಲಿಕ್ಟ್)'ವನ್ನು ಪ್ರಸ್ತಾಪಿಸಿದ. 'ಬೈಬಲ್ ಸ್ವರ್ಗಕ್ಕೆ ಹೋಗುವುದು ಹೇಗೆಂದು ಬೋಧಿಸುತ್ತದೆ, ಆದರೆ ಆಕಾಶ (ಹೆವೆನ್ಸ್) ಹೇಗೆ ಚಲಿಸುತ್ತದೆಂದಲ್ಲ' ಎಂದಿದ್ದನಂತೆ ! ಇನ್‌ಕ್ವಿಸಿಶನ್ ಪದಕ್ಕೆ ಪಾಷಂಡವಾದ (ಹೆರೆಸಿ)ವನ್ನು ಅಡಗಿಸಲು ನಿಯಮಿಸಿದ್ದ ಮಠೀಯ ನ್ಯಾಯಸ್ಥಾನ (ದ ಹೋಲಿ ಆಫೀಸ್) ಎಂಬ ಅರ್ಥವಿದೆ. ಇದು ಒಂದು ಬಗೆಯ ತನಿಖೆ, ವಿಚಾರಣೆ ಎಂದಿಟ್ಟುಕೊಳ್ಳೋಣ. ಗೆಲಿಲಿಯೊನ ಪತ್ರದ ಬಗೆಗೆ ಅದರ ಪ್ರಕ್ರಿಯೆ ನಡೆದದ್ದು ಫೆಬ್ರವರಿ ೧೬೧೬ರಲ್ಲಿ, ಈ ತೀರ್ಮಾನಕ್ಕೆ ಬಂದು, ಸೂರ್ಯ ವಿಶ್ವದ ಕೇಂದ್ರದಲ್ಲಿದ್ದಾನೆ, ಚಲಿಸುವುದಿಲ್ಲ, ಎಂಬುದು ತತ್ತ್ವಜಿಜ್ಞಾಸೆಯಲ್ಲಿ (ಫಿಲಾಸೊಫಿ) ಅಸಂಬದ್ಧ, ಸ್ಪಷ್ಟವಾಗಿ ಪಾಷಂಡಿ (ಹೆರಿಟಿಕಲ್). ಭೂಮಿಯ ಚಲನೆ ತತ್ತ್ವಶಾಸ್ತ್ರದ ಪ್ರಕಾರ ಅಸಂಗತ, ಕ್ರೈಸ್ತ ಮತಧರ್ಮಶಾಸ್ತ್ರ (ಥಿಯಾಲೊಜಿ)ದ ಅನುಸಾರ ಕನಿಷ್ಠ ಪಕ್ಷ ದೋಷಯುಕ್ತ. ಪೋಪ್‌ನ ಆಜ್ಞೆಯಂತೆ ಗೆಲಿಲಿಯೊನನ್ನು ಕರೆಸಿ 'ಕೊಪರ್ನಿಕಸ್‌ನ ವಾದದ ಪರವಾಗಿ ಬಹಿರಂಗವಾಗಿ ಮಾತನಾಡಬಾರದು' ಎಂಬ ಎಚ್ಚರಿಕೆ ನೀಡಲಾಯಿತು. 'ಸೂರ್ಯಕೇಂದ್ರ'ವಾದ ಬೈಬಲ್‌ನ ಪ್ರತಿಪಾದನೆಗೆ ವಿರುದ್ಧವಾಗಿತ್ತು ಎಂಬ ಅಂಶಕ್ಕಿಂತ, ಗೆಲಿಲಿಯೊ ಆರಂಭಿಸಿದ ವೈಜ್ಞಾನಿಕ ಕ್ರಾಂತಿ ಆಗಿನ ಚರ್ಚ್ ಪ್ರತಿನಿಧಿಸುತ್ತಿದ್ದ ಊಳಿಗಮಾನ್ಯ ಪದ್ಧತಿಯ ಅಸ್ತಿಭಾರವನ್ನೇ ಅಲುಗಿಸಬಹುದು ಎಂಬ ಅಳುಕು ಈ ಕ್ರಮಕ್ಕೆ ಕಾರಣವಾಗಿದ್ದೀತು.

**ಮುಂದೇನಾಯಿತು ?**

೧೬೧೬ ಕೊಪರ್ನಿಕಸ್ ಕಲ್ಪನೆಯ ಭೂಮಿಯ ಬಗೆಗೆ ಕಾರ್ಡಿನಲ್ ಆರ್ಸಿನಿಗೆ ಗೆಲಿಲಿಯೊ 'ಡಿಸ್ಕೋರ್ಸ್ ಆನ್ ದಿ ಟೈಡ್ಸ್ ಕುರಿತು' ಖಾಸಗಿ ಪತ್ರ ಬರೆದ.

**ಎಚ್. ಎಸ್. ಮಂಜುನಾಥ**

೧೬೧೮ರಲ್ಲಿ ಗೆಲಿಲಿಯೊನ ವಿದ್ಯಾರ್ಥಿ ಮಾರಿಯಾ ಗೈಡುಸಿ 'ಡಿಸ್ಕೋರ್ಸ್ ಆನ್ ದಿ ಕಾಮೆಟ್ಸ್' ಎಂಬ ಉಪನ್ಯಾಸ ಪ್ರಕಾಶಿಸಿದ. ಧೂಮಕೇತುಗಳ ಬಗೆಗೆ ಜೆಸುಯಿಸ್ಟರ (ಇಗ್ನೇಶಿಯಸ್ ಲೊಯೊಲಾ ಆರಂಭಿಸಿದ ರೋಮನ್ ಕ್ಯಾಥೋಲಿಕ್ ಆರ್ಡರ್‌ನ ಸದಸ್ಯರು) ವ್ಯಾಖ್ಯೆಯ ವಿರುದ್ಧದ ವಾದ ಅದರಲ್ಲಿತ್ತು (ಅದರ ಹೆಚ್ಚಿನ ಭಾಗ ಗೆಲಿಲಿಯೊ ಬರೆದದ್ದು).

೧೬೨೩ ಗೆಲಿಲಿಯೊನ 'ದ ಅಸೇಯರ್' (= ಪರೀಕ್ಷಕ) ಗ್ರಂಥ ಪ್ರಕಟವಾಗಿ ಯಶಸ್ಸು ಕಂಡಿತು. 'ಗಣಿತದ ಭಾಷೆಯಲ್ಲಿ ಬರೆದಿದೆ – ಅದರ ಅಕ್ಷರಗಳು ತ್ರಿಕೋನ, ವೃತ್ತ ಮತ್ತಿತರ ಜ್ಯಾಮಿತೀಯ ಆಕೃತಿಗಳು. ಈ ಭಾಷೆಯನ್ನು ಗ್ರಹಿಸದೆ, ಅಕ್ಷರಗಳನ್ನು ವ್ಯಾಖ್ಯಾನಿಸದೆ ಏನೇನೂ ಅರ್ಥವಾಗದು' ಎಂದು ಅದರಲ್ಲಿ ಬರೆದಿದ್ದ. ಅರಿಸ್ಟಾಟಲನ ಸಿದ್ಧಾಂತಗಳನ್ನು ಬಲವಾಗಿ ಟೀಕಿಸಿದ್ದ.

೧೬೩೨ರಲ್ಲಿ 'ದ ಡಯಲಾಗ್ ಆನ್ ದ ಟೂ ಚೀಫ್ ವರ್ಲ್ಡ್ ಸಿಸ್ಟಮ್ಸ್' ಪ್ರಕಟವಾಯಿತು. ಇದು ೧೬೨೦ರ ದಶಕದಲ್ಲಿ ಥಿಯಾಲಜಿಸ್ಟರೊಂದಿಗೆ ಇದ್ದ ವಿವಾದದ ಸಂಗ್ರಹ ರೂಪ. ಗೆಲಿಲಿಯೊ ಇದನ್ನು ಗ್ರ್ಯಾಂಡ್ ಡ್ಯೂಕ್ ಆಫ್ ಟಸ್ಕನಿಗೆ ಅರ್ಪಿಸಿದ್ದ. ವಿಶ್ವದ ರಚನೆಯ ಬಗೆಗೆ ಟಾಲೆಮಿ (೨ನೇ ಶತಮಾನದ ಖಗೋಳ ಶಾಸ್ತ್ರಜ್ಞ – ಭೂಮಿ ನಿಶ್ಚಲ/ಸ್ಥಿರ ಎಂದವನು) ಹಾಗೂ ಕೊಪರ್ನಿಕಸ್‌ರ ತತ್ವಗಳನ್ನ ಪ್ರಶಂಸಿಸಿದ್ದ. ಪ್ರಕಟಗೊಂಡ ಆರೇ ತಿಂಗಳೊಳಗೆ ಈ ಗ್ರಂಥದ ಮಾರಾಟವನ್ನು ತಡೆಹಿಡಿಯಲಾಯಿತು.

೧೬೩೮ರಲ್ಲಿ ಇನ್‌ಕ್ವಿಸಿಶನ್‌ನ ಅಧಿಕಾರವ್ಯಾಪ್ತಿಯ ಆಚೆ ಇರುವ ಹಾಲೆಂಡ್‌ನಲ್ಲಿ 'ಡಿಸ್ಕೋರ್ಸಸ್ ಅಂಡ್ ಮ್ಯಾಥಮ್ಯಾಟಿಕಲ್ ಡೆಮಾನ್‌ಸ್ಟ್ರೇಶನ್ಸ್ ರಿಲೇಟಿಂಗ್ ಟು ಟೂ ನ್ಯೂ ಸೈನ್ಸಸ್' ಗ್ರಂಥವನ್ನು ಗೆಲಿಲಿಯೊ ಪ್ರಕಾಶಿಸಿದ. ಇದು 'ದ ಡಯಲಾಗ್...' ಗ್ರಂಥವನ್ನೇ (ರೂಪದಲ್ಲಿ) ಹೋಲುತ್ತಿತ್ತು.

ಚರ್ಚ್ ೧೬೩೨ರಲ್ಲೇ ಸಮನ್ಸ್ ಕಳುಹಿಸಿತ್ತು. ಗೆಲಿಲಿಯೊ ರೋಂಗೆ ಹೋಗಿದ್ದು ಜನವರಿ ೧೬೩೩ರಲ್ಲಿ. 'ಕೊಪರ್ನಿಕಸ್ ಸಿದ್ಧಾಂತವನ್ನು ಬೋಧಿಸದಂತೆ, ನಿನ್ನ ಮೇಲೆ ಅಧಿಕೃತ ನಿರ್ಬಂಧವನ್ನು ಮೊದಲೇ ವಿಧಿಸಲಾಗಿತ್ತು ಎಂದು ಒಪ್ಪಿಕೊ' ಎಂದರು ವಿಚಾರಕರು. ಗೆಲಿಲಿಯೊ ಬೆಲಾರ್ಮಿನ್‌ನ ಪತ್ರ ತೋರಿಸಿದ. ಆದರೆ ಆತ ೧೬೨೧ರಲ್ಲೇ ಮೃತನಾಗಿದ್ದ; ರಕ್ಷಿಸಬಹುದಾಗಿದ್ದ ಇನ್ನೊಬ್ಬನೂ ೧೬೩೦ರಲ್ಲಿ ಕಾಲವಾಗಿದ್ದ. ಹಿಂಸೆ ನೀಡುವ ಹೆದರಿಕೆ ಹಾಕಿ ಗೆಲಿಲಿಯೊನನ್ನು ಪ್ರಶ್ನಿಸಲಾಯಿತು. ಉತ್ಕಟ ಸಂಶಯದ ಪಾಷಂಡವಾದ (ಹೆರೆಸಿ)ವನ್ನು ಪರಿತ್ಯಜಿಸುತ್ತೇನೆ ಎಂದು ಹೇಳಿಸಲಾಯಿತು. ಜೀವಾವಧಿ ಕಾರಾಗೃಹ ವಿಧಿಸಿದರು. ಗೆಲಿಲಿಯೊ ತನ್ನ ಬದುಕಿನ ಉಳಿದ ಭಾಗವನ್ನು ತನ್ನ ಅರ್ಸೆಟ್ರಿ ನಿವಾಸದಲ್ಲಿ, ಗೃಹಬಂಧನದಲ್ಲಿ ಸವೆಸಬೇಕಾಯಿತು. ಮಾಫಿ (ಪಾರ್ಡನ್), ವೈದ್ಯಕೀಯ ಚಿಕಿತ್ಸೆಯ ಮನವಿಗಳನ್ನು ಚರ್ಚ್‌ನವರು ತಿರಸ್ಕರಿಸಿದರು.

೩೫೦ ವರ್ಷಗಳ ನಂತರ ಈ ಪ್ರಕರಣದ ಮರುಪರಿಶೀಲನೆ ನಡೆಯಿತು. ೧೯೯೨ : ಎರಡನೆಯ




*ಇದು 'ದ ಡಯಲಾಗ್...' ಗ್ರಂಥ*

ಪೋಪ್ ಜಾನ್ ಪಾಲ್ 'ಗೆಲಿಲಿಯೊನ ಹೀಲಿಯೊಸೆಂಟ್ರಿಕ್ ವಿಚಾರಗಳನ್ನು ತಿರಸ್ಕರಿಸುವಲ್ಲಿ ಚರ್ಚ್ ತೀವ್ರ ಶೋಚನೀಯ ತಪ್ಪು (ಟ್ರ್ಯಾಜಿಕ್ ಮಿಸ್ಟೇಕ್) ಎಸಗಿತ್ತು.' ಎಂದು ಒಪ್ಪಿಕೊಂಡರು. ತಮಾಷೆಯೆಂದರೆ ಅದರ ಉತ್ತರಾಧಿಕಾರಿ ಹದಿನಾರನೆಯ ಪೋಪ್ ಬೆನೆಡಿಕ್ಟ್ ತಾವು ಕಾರ್ಡಿನಲ್ ಆಗಿದ್ದಾಗ ಗೆಲಿಲಿಯೊ ವಿಚಾರಣೆಯನ್ನು ಸಮರ್ಥಿಸಿಕೊಂಡಿದ್ದರು. ರೋಮ್ ವಿಶ್ವವಿದ್ಯಾಲಯದ ಶಿಕ್ಷಕ, ಸಂಶೋಧಕರು ಆ ಕಾರಣವಾಗಿ ಪ್ರತಿಭಟನೆಗೆ ಅನುವಾದಾಗ ಪೋಪ್ ತಮ್ಮ ಭೇಟಿಯನ್ನೇ ರದ್ದುಪಡಿಸಿದರು (೨೦೦೫).

"ಇದು (ಚರ್ಚ್‌ನ ತಪ್ಪೊಪ್ಪಿಕೆ) ಮುದಿ ವ್ಯಾಘ್ರವೊಂದು ತನ್ನ ಹಿಂದಿನ ಹಿಂಸಾತ್ಮಕ ಬದುಕನ್ನು ಪರಿತ್ಯಜಿಸಿ ಮುಂದೆ ಹಣ್ಣು, ನೀರು ಸೇವಿಸಿ ಬದುಕುತ್ತೇನೆ ಎಂದಂತೆ (ಏಕೆಂದರೆ ಅದರ ಹಲ್ಲೆಲ್ಲಾ ಉದುರಿತ್ತು !)" ಎನ್ನುತ್ತಾರೆ ಡಾ॥ ಆರ್. ವೆಂಕಟೇಶನ್.

'ದ ಡಯಲಾಗ್ ಆನ್ ದ ಟೂ ಚೀಫ್ ವರ್ಲ್ಡ್ ಸಿಸ್ಟಮ್ಸ್' (ಎರಡು ವಿಶ್ವ ವ್ಯವಸ್ಥೆಗಳ ಬಗೆಗೆ ಒಂದು ಸಂವಾದ) ಜಗತ್ತಿನಲ್ಲಿ ಯಾವುದು ಸ್ಥಿರ, ಯಾವ ನೆಲೆಯಿಂದ ಅದನ್ನು ನೋಡಬೇಕು ಎಂಬ ಬಗೆಗೆ ಮೂರು ಜನ, ನಾಲ್ಕು ದಿನ ನಡೆಸುವ ಕಾಲ್ಪನಿಕ ಚರ್ಚೆ. ವೆನಿಸ್‌ನ ಶ್ರೀಮಂತ ಸಾಗ್ರೆಡೊ ಅದೇ ಹೆಸರಿನಲ್ಲಿ ಇದರಲ್ಲಿ ಕಾಣಿಸಿಕೊಳ್ಳುತ್ತಾನೆ. ಆತ ಸತ್ಯವನ್ನು ಅರಸುತ್ತಿದ್ದ; ಸಿಂಪ್ಲಿಶಿಯೋ ಅರಿಸ್ಟಾಟಲ್ ಮಾರ್ಗದ ತತ್ವಶಾಸ್ತ್ರಜ್ಞ; ಮೂರನೆಯ ವ್ಯಕ್ತಿ ಸಾಲ್ವಿಯಾಟಿ ಗೆಲಿಲಿಯೊ ಪರವಾಗಿ ಮಾತಾಡುವವನು. ಈ ವಾದ – ಪ್ರತಿವಾದಗಳ ವಿವರ ಖಗೋಲ, ಖಭೌತ, ಗಣಿತಶಾಸ್ತ್ರ ಬಲ್ಲವರಿಗೆ ಅರ್ಥವಾದೀತು. ವಿಜ್ಞಾನದ ಸಾಮಾನ್ಯ ಜ್ಞಾನ ಇದ್ದವರಿಗೆ ಮೂರನೆಯ ದಿನ ಸಾಲ್ವಿಯಾಟಿ (ಹಿಂದಿನ ತರ್ಕ ಆಧರಿಸಿ ಹೋದರೆ) ಸೂರ್ಯ ನಾಲ್ಕು ಬಗೆಯ ಚಲನೆಯನ್ನು ತೋರಬೇಕಾಗುತ್ತದೆ. ಒಂದು ದಿನದಲ್ಲಿ ತನ್ನ ಒಂದೇ ಮುಖ ಭೂಮಿಯತ್ತಲೇ ಅಭಿಮುಖವಾಗಿರಿಸಲು ತನ್ನ ಅಕ್ಷದಲ್ಲಿ ೨೪ ಗಂಟೆ ಪಶ್ಚಿಮಾಭಿಮುಖ ಮಂದಚಲನೆ (ಪ್ರಿಸೆಷನ್) ತೋರಬೇಕಾಗುತ್ತದೆ. ಇದು ಭೌತಿಕ ನಿಯಮಗಳಿಗೆ ವಿರುದ್ಧವಾದುದು' ಎನ್ನುತ್ತಾನೆ ! ಪೈಥಾಗೊರಸ್ (ಕ್ರಿ. ಪೂ. ೬ನೇ ಶತಮಾನ) 'ಭೂಮಿ ಚಲಿಸುತ್ತದೆ' ಎಂದು ಅಭಿಪ್ರಾಯಪಟ್ಟಿದ್ದ. ಅದನ್ನು ಸುಮ್ಮನಾಗಿಸುವ ಸೊಕ್ಕನ್ನು ಕಂಡು ಗೆಲಿಲಿಯೊಗೆ ಅತೀವ ಯಾತನೆಯಾಗಿತ್ತು. ಸ್ಥಿಮಿತ ಮನಸ್ಸಿನ ಸತ್ಯದ ಸಾಕ್ಷಿಯಾಗಿ ರೋಮನ್ ಕ್ಯಾಥೋಲಿಕ್ ಚರ್ಚ್‌ನ ಸೆನ್ಸಾರ್‌ಶಿಪ್‌ಅನ್ನು ಎದುರಿಸಿದ.

ಈಗ ಮೆಕ್ಯಾನಿಕ್ಸ್, ಸಾಪೇಕ್ಷವಾದ ಎಲ್ಲವನ್ನೂ ವಿಜ್ಞಾನದ ಇತಿಹಾಸವಾಗಿ ಓದುತ್ತೇವೆ. ಅದಕ್ಕಿಂತ ಮುಂಚೆ ಭೌತಿಕ ಜಗತ್ತಿನ ಬಗೆಗೆ ಅರಿಸ್ಟಾಟಲ್ ಮತ್ತು ಕೊಪರ್ನಿಕಸ್ ವಿಚಾರ ಪದ್ಧತಿಗಳ ವಿರೋಧಾತ್ಮಕತೆಯನ್ನು ತೀಕ್ಷ್ಣತೆಯ ಪರಾಕಾಷ್ಠೆಗೆ ಒಯ್ದವನು ಗೆಲಿಲಿಯೊ. ಬೈಬಲ್‌ನ ಬಿಗಿಭಾಷೆಗೆ ವ್ಯತಿರಿಕ್ತವಾಗಿ ತನ್ನ ವಾದವನ್ನು ಸಾಮಾನ್ಯ ಜನರಿಗೂ ಅರ್ಥವಾಗುವಂತೆ ತಿಳಿಯಾಗಿ ವಿವರಿಸುವ ಪ್ರಯತ್ನ ಮಾಡಿದ್ದು ಆತನ ವಿಶೇಷತೆ.

೨೦೦೯ರಲ್ಲಿ ಅಂತಾರಾಷ್ಟ್ರೀಯ ಖಗೋಲಶಾಸ್ತ್ರ ವರ್ಷ ಆಚರಿಸಲಾಯಿತು. ವ್ಯಾಟಿಕನ್ ಗೆಲಿಲಿಯೊ ವಿಚಾರಣೆಯ ದಾಖಲೆಗಳನ್ನು ಪ್ರಕಾಶಿಸುವ, ಆತನನ್ನು ಸೆರೆಯಲ್ಲಿರಿಸಿದ್ದ ತಾಣದ ಹತ್ತಿರ ಅವನ ಪುತ್ಥಳಿ ಸ್ಥಾಪಿಸುವ, ಅಂತಾರಾಷ್ಟ್ರೀಯ ವಿಜ್ಞಾನಿಗಳ ಸಮಾವೇಶ ನಡೆಸುವ ಯೋಜನೆ ಸಿದ್ಧಪಡಿಸಿತು.

ಗೆಲಿಲಿಯೊ ಹುಟ್ಟಿದ್ದು ಪೀಸಾದಲ್ಲಿ. 'ದ ಲೀನಿಂಗ್ ಟವರ್ ಆಫ್ ಪೀಸಾ'ದ ಸಂರಕ್ಷಣಾ ಪ್ರಯತ್ನಗಳ ಬಗೆಗೆ ಓದಿದ್ದೇವೆ, ಆದರೆ ವಿಜ್ಞಾನಿ ಮತ್ತವನ ಸಂಶೋಧನೆ, ವಿಚಾರಗಳನ್ನು ಪುನಃ ಸ್ಥಾಪಿಸುವುದು ಅಷ್ಟು ಸುಲಭವಲ್ಲ. ಕುಲೀನ ವಂಶದಲ್ಲಿ ಹುಟ್ಟಿ, ತಂದೆ ತಾಯಿ ಡಾಕ್ಟರಾಗಲಿ ಎಂದು ಬಯಸಿದ್ದಾಗ, ಗಣಿತ ಹಾಗೂ ಯಂತ್ರಶಾಸ್ತ್ರಗಳ ಬೆನ್ನಟ್ಟಿ, ಹಲವು ಮಹತ್ವಪೂರ್ಣ ಆವಿಷ್ಕಾರಗಳನ್ನು ಆತ ಮಾಡಿದ (ಆಕಾಶ ವೀಕ್ಷಣೆಯ ಟೆಲಿಸ್ಕೋಪ್, ಜಿಯೋಮೆಟ್ರಿಕಲ್ ಮತ್ತು ಮಿಲಿಟರಿ ಕಂಪಾಸ್‌ನ ಬಗೆಗಿನ ಮ್ಯಾನ್ಯುಯಲ್, ಭೂಮಿಯ ಭ್ರಮಣಕ್ಕೆ ಪುರಾವೆ ಒದಗಿಸಲು ಟೈಡಲ್ ಸೈಕಲ್, ಬೃಹಸ್ಪತಿಯ ನಾಲ್ಕು ಉಪಗ್ರಹಗಳು, ಧೂಮಕೇತು ಅಧ್ಯಯನಗಳು).

ಗೆಲಿಲಿಯೊ ಹುಟ್ಟಿದ ವರ್ಷದಲ್ಲೇ ಶೇಕ್ಸ್‌ಪಿಯರ್ ಜನಿಸಿದ್ದು, ಗೆಲಿಲಿಯೊ ತೀರಿಕೊಂಡ ವರ್ಷದಲ್ಲೇ ನ್ಯೂಟನ್ ಹುಟ್ಟಿದ್ದು. ಆದರೆ ಗೆಲಿಲಿಯೊ ಅವರಿಬ್ಬರಷ್ಟು ಯಶಸ್ಸು, ಕೀರ್ತಿ ಕಾಣಲಿಲ್ಲ. ಪ್ರಬಲರನ್ನು ಎದುರುಹಾಕಿಕೊಂಡ ಕಾರಣಕ್ಕಿರಬಹುದು !

*(ಆಧಾರ : 'ಬ್ರೇಕ್ ಥ್ರೂ' ಜರ್ನಲ್ ಜುಲೈ ೨೦೦೯)*

**ಎಚ್. ಎಸ್. ಮಂಜುನಾಥ**
ನಂ. ೫೭೫, ಮೊದಲನೇ ಮಹಡಿ
೧೩ನೇ 'ಎ' ಅಡ್ಡರಸ್ತೆ, ೯ನೇ 'ಎ' ಮುಖ್ಯರಸ್ತೆ
'ಎ' ಸೆಕ್ಟರ್, ಯಲಹಂಕ ಉಪನಗರ
ಬೆಂಗಳೂರು – ೫೬೦ ೦೬೪

ಪರಂಪರೆಗಿಂತಲೂ ಹೆಚ್ಚು ಮಹತ್ವದ್ದೆಂದು ಭಾವಿಸಿದ ಯಾವ ಪ್ರಜ್ಞೆಯ ಕುರಿತು ನಾನು ಹೇಳುತ್ತಿದ್ದೇನೋ, ಅದಕ್ಕೆ ಮಾನವ ವಂಶಶಾಸ್ತ್ರದಲ್ಲಿ ಯೋಗ್ಯವಾದ ಪದವಿಲ್ಲ, ಆ ಭಾವನೆಗೆ ನಾನು 'ವಿಶ್ವದ ಉತ್ತರದಾಯಿತ್ವ' ಎಂಬ ಪದಪ್ರಯೋಗವನ್ನು ಬಳಸುತ್ತೇನೆ. ಯಾವುದೇ ಮರದ ಒಂದು ರೆಂಬೆಯು ಮುರಿದರೂ, ಎಲೆಗಳು ಉದುರಿದರೂ, ಉಳಿದ ಮರ ಮಾತ್ರ ಬೆಳೆಯುತ್ತ ಹೋದಾಗ, ಆ ರೆಂಬೆಯನ್ನು ಸಹಜವಾಗಿ ದೂರ ಸರಿಸಬೇಕೆಂಬ ಇಚ್ಛೆಯೇ ನನ್ನ ಪ್ರಕಾರ ಖಾಸಾ 'ಆದಿವಾಸಿ ಪ್ರೇರಣೆಯಾಗಿದೆ. ಆ ಪ್ರೇರಣೆಯಲ್ಲಿ ಆ ಮರವನ್ನು ಬೆಳೆಸುವ ಹೊಣೆಗಾರಿಕೆಯು ಆ ಕೊಂಬೆಯನ್ನು ದೂರ ಮಾಡುವ ಕೈಯದ್ದಾಗಿದೆ ಎಂಬ ಭಾವನೆಯು ಇರುತ್ತದೆ. ಉಳಿದ ಕಾರಣಗಳಿಂದಾಗಿ ವಿಘ್ನ ಒದಗಿಬಂದರೂ ಸಹ, ಆ ಕ್ಷಣವನ್ನು ಹೊರತುಪಡಿಸಿ ಆದಿವಾಸಿಯು ಸತತ ಈ ಉತ್ತರದಾಯಿತ್ವದ ಭಾವನೆಯಿಂದ ಮೈಮರೆತಿರುತ್ತಾನೆ. ಅವನ ಎಲ್ಲ ಪದ್ಧತಿ ಆಚರಣೆಗಳು ಇದರಿಂದಲೇ ನಿರ್ಮಾಣಗೊಂಡಿರುತ್ತದೆ. ಹೊಲದಲ್ಲಿ ಬೆಳೆದ ಮೊದಲ ತೆನೆಯನ್ನು ಮನೆಗೆ ತಂದು ಪೂಜೆ ಮಾಡಿದರೆ, ಅದರಲ್ಲಿಯ ಬೀಜವು ಭೂಮಿಯ ಬೀಜ ವ್ಯವಹಾರದಲ್ಲಿ ತಾಳಿಕೊಂಡು ಉಳಿಯುತ್ತದೆ. ಪೂರ್ವಜರಿಗೆ, ಪಿತೃಗಳಿಗೆ ಮಾರ್ಗಕ್ರಮಣಕ್ಕಾಗಿ ಕೊನೇ ಪಕ್ಷ ಮಣ್ಣಿನ ಕುದುರೆಯನ್ನು ಅರ್ಪಿಸಿದರೂ, ತಾರೆಗಳ ಲೋಕದಲ್ಲಿ ಅವರ ಪ್ರವಾಸವು ಸುಖಕರವಾಗಿ ಮುಂದುವರಿಯುತ್ತದೆ, ಹೊಲದ ಜಾಗವನ್ನು ಹಲವು ಸಲ ಬದಲಾಯಿಸುತ್ತ ಹೋದರೆ ಭೂಮಿಯ ಯಾತನೆಯು ಕಡಿಮೆಯಾಗುತ್ತದೆ – ಈ ಎಲ್ಲ ಬಗೆಯ ಯೋಚನೆಗಳು ಕೇವಲ ಆದಿವಾಸಿಗಳ ಮನದಲ್ಲಿ ಮಾತ್ರ ಮೂಡುತ್ತಿರುತ್ತದೆ.




# ಪರಂಪರೆಯ ಶೋಧದಲ್ಲಿ

ಕೆಲವು ವರ್ಷಗಳ ಹಿಂದೆ ಹಿಂದಿ ಸಾಹಿತ್ಯದಲ್ಲಿ ಪ್ರೊ॥ ನಾಮವರಸಿಂಹ ಅವರ 'ದುಸರೀ ಪರಂಪರಾಕಿ ಖೋಜ ಮೇ' ಎಂಬ ಕೃತಿಯು ತುಂಬ ಚರ್ಚೆಗೊಳಗಾಗಿತ್ತು. ಅವರಲ್ಲಿ ಉಪೇಕ್ಷೆಗೊಳಗಾದವರ ಸಾಹಿತ್ಯದ ಬಗೆಗೆ ಅತ್ಯಂತ ಸಹಾನುಭೂತಿಯಿಂದ ಬರೆಯಲಾಗಿತ್ತು. ಸುಮಾರು ಇದೇ ಕಾಲದಲ್ಲಿ ತೆಲುಗು, ತಮಿಳು ಮತ್ತು ಮರಾಠಿ ಭಾಷೆಗಳಲ್ಲಿ ದಲಿತ ಸಾಹಿತ್ಯದ ವಿಕಾಸ ಶುರುವಾಗಿತ್ತು. ಅವರಿಗೆ ತಮ್ಮದೇ ಆದ ಮತ್ತು ವಿಶಿಷ್ಟ ಬಗೆಯ ಪರಂಪರೆಯನ್ನು ನಿರ್ಮಿಸಬೇಕಿತ್ತು. ಕಳೆದ ಇಪ್ಪತ್ತೈದು ವರ್ಷಗಳಲ್ಲಿ ಅದು ನಿರ್ಮಾಣಗೊಂಡಿದೆ. ಇದೇ ಸುಮಾರಿಗೆ ಭಾರತೀಯ ಸಂಸ್ಕೃತಿಯ ಬಗ್ಗೆ ಅಧ್ಯಯನ ಕೈಗೊಳ್ಳುವ ಪಾಶ್ಚಾತ್ಯ ವಿಚಾರವಂತರು ಪ್ರಮುಖ ಪರಂಪರೆ ಮತ್ತು 'ಇತರ' ಪರಂಪರೆಯಲ್ಲಿಯ ಕೊಡು–ಕೊಳ್ಳುವಿಕೆಯ ಬಗೆಗೆ ಚರ್ಚೆಯನ್ನು ಆರಂಭಿಸಿದ್ದರು. ಅವರಲ್ಲಿ, ಮಿಲ್ಟನ್ ಸಿಂಗರ್ ಪ್ರಮುಖರು. ಅವರು 'ಗ್ರೇಟ್ ಟ್ರೆಡಿಷನ್' ಮತ್ತು 'ಲಿಟ್ಲ್ ಟ್ರೆಡಿಷನ್' ಎಂಬ ಪದಗಳನ್ನು ಬಳಸಲು ಆರಂಭಿಸಿದರು. ಎರಡು ದಶಕಗಳ ಹಿಂದೆ ಇತಿಹಾಸದ ಪಠ್ಯಕ್ರಮದಲ್ಲಿ ಒಂದು ಹೊಸ ವಿಚಾರದ ಪ್ರಸಾರ ಶುರುವಾಯಿತು. ಅದನ್ನು 'ಸಬಾಲ್ಟರ್ನ್ ಇತಿಹಾಸ–ವಿಚಾರ' ಎಂಬ ಹೆಸರಿನಿಂದ ಗುರುತಿಸಲಾಗುತ್ತದೆ. ಇಟಲಿಯ ಮಾರ್ಕ್ಸ್‌ವಾದಿ ಕಾರ್ಯಕರ್ತ ಗ್ರಾಮ್‌ಷಿಯವರ ಪ್ರಭಾವದಡಿಯಲ್ಲಿ ನಿರ್ಮಾಣಗೊಂಡ ಈ ವಿಚಾರಧಾರೆಯು ತಳವರ್ಗದ ಪ್ರಜೆಗಳ ಆಂದೋಲನದಿಂದ ಉದ್ಭವಿಸುವ ಪರಂಪರೆಗೆ ಮಹತ್ವದ ಸ್ಥಾನ ನೀಡಲಾಗಿದೆ.

ಪರಂಪರೆಯ ಈ ಹೊಸ ವಿಚಾರಧಾರೆಯು ನಿರ್ಮಾಣಗೊಳ್ಳುತ್ತಿರುವಾಗ ಎಲ್ಲೆಡೆ ಸಾಮಾಜಿಕ ವಿಘಟನೆಯ ಪ್ರಮಾಣವು ಬೆಳೆಯುತ್ತ ಸಾಗಿತ್ತು. ಆಧುನಿಕ ಸಮಾಜ ಮತ್ತು ಆಧುನಿಕ ಅರ್ಥವ್ಯವಸ್ಥೆಯು ಪರಂಪರೆಯ ಜೊತೆಗೆ ನಿರ್ಲಿಪ್ತವಾಗಿ ವ್ಯವಹರಿಸುತ್ತ ಇರುತ್ತದೆ. ಅಷ್ಟೇ ಅಲ್ಲ, ಆಧುನಿಕತೆ ಎಂದರೆ ಪರಂಪರೆಯನ್ನು ಮುಂದುವರಿಸುವುದು, ಅದರ ಮೇಲೆ ಆಘಾತ ಮಾಡುವದು ಎಂಬ ಬಗೆಯ ಒಂದು ವಿಶ್ವವ್ಯಾಪಿಯಾದ ವಿಚಾರವೂ ಇದೆ. ಆದ್ದರಿಂದ ಪರಂಪರೆ ಮತ್ತು ಆಧುನಿಕತೆಯು ಮಾನವ ಚರಿತ್ರೆಯಲ್ಲಿನ ಎರಡು ಭಿನ್ನ–ಭಿನ್ನ ಪ್ರೇರಣೆಯ ಸ್ವರೂಪ ಎಂದು ಭಾವಿಸಲಾಗಿದೆ. ಅದೇ ಕಾರಣಕ್ಕಾಗಿ ಪರಂಪರೆಯೊಂದಿಗೆ ನಿಕಟಸಂಬಂಧವನ್ನು ಹೇಳುವ ಸಮಾಜಕ್ಕೆ ಹಿಂದುಳಿದ ಸಮಾಜ ಎಂಬ ದೂಷಣೆಯನ್ನು ಅಂಟಿಸಲಾಗುತ್ತದೆ.

ಆಧುನಿಕತೆಯ ಪ್ರವಾಹದಲ್ಲಿ ಪರಂಪರೆಯು ಶಿಥಿಲಗೊಂಡಾಗ ಚರಿತ್ರೆಕಾರರಿಗೆ ಮತ್ತು ವಿಚಾರವಂತರಿಗೆ ಪರಂಪರೆಯ ಬಗೆಗೆ ಮತ್ತೆ ಮತ್ತೆ ಮನನ ಮಾಡಬೇಕೆಂದೆನಿಸುತ್ತದೆ. ಅದೂ ಅಲ್ಲದೆ ಒಂದೆಡೆ ಪರಂಪರೆಯನ್ನು ಅರ್ಥಮಾಡಿಕೊಳ್ಳುವ ಸಾಂಸ್ಕೃತಿಕ ಕೊಡುಕೊಳೆಗಳು ನಡೆಯುತ್ತಿರುವ ಅದೇ ಕಾಲಘಟ್ಟದಲ್ಲಿ ಪರಂಪರೆಯನ್ನು ಸಂರಕ್ಷಿಸುವ ಸಮಾಜವನ್ನು ಅತ್ಯಂತ ಉತ್ಸಾಹದಿಂದ ಬದಲಾಯಿಸುವ ಅರ್ಥ ಕಾರಣವೂ ನಡೆದಿರುತ್ತದೆ. ವಾಸ್ತವವಾಗಿ ಸುಖೀ ಸಮಾಜವು ನಿರ್ಮಾಣಗೊಳ್ಳಲು ಸಾಂಸ್ಕೃತಿಕ ಸ್ಥಿರತೆ ಮತ್ತು ಆರ್ಥಿಕ ಸಮೃದ್ಧಿ ಇವೆರಡೂ ಅಗತ್ಯದ್ದಾಗಿರುತ್ತವೆ. ಆದರೆ ಆಧುನಿಕತೆ ಮತ್ತು ಪರಂಪರೆಯ ದ್ವಂದ್ವದಿಂದ ನಿರ್ಮಾಣಗೊಳ್ಳುವ ಸಂಸ್ಕೃತಿ ಮತ್ತು ಅರ್ಥ ಕಾರಣದ ವಿರೋಧದಿಂದಾಗಿ ಅಪೂರ್ಣ ಸಮಾಜವು ಸಿದ್ಧಗೊಳ್ಳುತ್ತದೆ. ಒಂದೋ ಅವರಿಗೆ ಆರ್ಥಿಕ ಸಮೃದ್ಧಿಯಿರುತ್ತದೆ, ಆದರೆ ಸಾಂಸ್ಕೃತಿಕ ಆಳವಿರುವದಿಲ್ಲ ಇಲ್ಲವೇ ಸಾಂಸ್ಕೃತಿಕ ಶ್ರೀಮಂತಿಕೆಯಿರುತ್ತದೆ, ಆದರೆ ಆರ್ಥಿಕ ಸಾಮರ್ಥ್ಯವಿರುವದಿಲ್ಲ. ಈ ಐತಿಹಾಸಿಕ ಇಕ್ಕಟ್ಟಿನಲ್ಲಿ ಸಿಲುಕಿದ ಸಮಾಜದಲ್ಲಿ ಮೂರು ಬಗೆಯ ವಿಚಾರಗಳು ನಿರ್ಮಾಣಗೊಳ್ಳುತ್ತವೆ. ಮೊದಲನೇ ಪ್ರಕಾರದಲ್ಲಿ ಪ್ರತಿಯೊಂದು ಪರಂಪರೆಗೆ ಕುರುಡುತನದಿಂದ ಶರಣುಹೋಗಲಾಗುತ್ತದೆ, ಎರಡನೇ ಪ್ರಕಾರದ ವಿಚಾರವು ಪರಂಪರೆಯನ್ನು ನಿರಾಕರಿಸುತ್ತಲೇ ಇರುತ್ತದೆ. ಮತ್ತು ಕೊನೆಯ ವಿಚಾರ ಪ್ರಕಾರವು ಪರಂಪರೆ ಮತ್ತು ಆಧುನಿಕತೆಯನ್ನು ಹೇಗಾದರೂ

ಮರಾಠಿ ಮೂಲ : **ಗಣೇಶ್ ದೇವಿ**
ಕನ್ನಡಕ್ಕೆ : **ಚಂದ್ರಕಾಂತ ಪೋಕಳೆ**

ಮೇಳೈಸುವ ಕೆಲಸ ಮಾಡುತ್ತಿರುತ್ತದೆ. ಆದರೆ ಈ ಮೂರೂ ಪ್ರಕಾರಗಳಲ್ಲಿ ಬೇರೆ–ಬೇರೆ ರೀತಿಯ ಅಪಾಯವಿದೆ. ಪರಂಪರೆಯ ಬಗೆಗಿನ ಕುರುಡು ಭಕ್ತಿಯಿಂದಾಗಿ ಯೋಚಿಸುವ, ಪ್ರಶ್ನಿಸುವ ತಾಕತ್ತನ್ನೇ ಕಳೆದುಕೊಳ್ಳಬೇಕಾಗುತ್ತದೆ. ಆಧುನಿಕತೆಯ ಅತೀ ಉತ್ಸಾಹದಲ್ಲಿ ಭಾವನೆಗೆ ಅನಾಯಾಸವಾಗಿ ಬಲಿಯಾಗಬೇಕಾಗುತ್ತದೆ ಮತ್ತು ಪರಂಪರೆ ಹಾಗೂ ಆಧುನಿಕತೆಯನ್ನು ಮಿಶ್ರಣ ಮಾಡುವ ಹಠದಿಂದಾಗಿ ಸಾಂಸ್ಕೃತಿಕ ಸ್ಮೃತಿ ಮತ್ತು ಕಲ್ಪನಾ ಶಕ್ತಿ ಇವೆರಡೂ ಭಗ್ನಗೊಳ್ಳುತ್ತಿರುತ್ತವೆ. ಈ ಮೂರೂ ವಿಚಾರ ಪದ್ಧತಿಯ ಹೊರತಾಗಿ ಪರಂಪರೆಯನ್ನು ಬೇರೆ ರೀತಿಯಿಂದ ನೋಡುವ ಪದ್ಧತಿಯಿಲ್ಲವೇ ? ಈ ಪ್ರಶ್ನೆಗೆ ಉತ್ತರ ನೀಡಲು ಆದಿವಾಸಿ ಪರಂಪರೆ ಹಾಗೂ ಪರಂಪರೆಯನ್ನು ನೋಡುವ ಆದಿವಾಸಿ ದೃಷ್ಟಿಕೋನವನ್ನು ಅರಿತುಕೊಳ್ಳುವದರಿಂದ ಉಪಯೋಗವಾಗುತ್ತದೆ.

'ಸಂಸ್ಕೃತಿ' ಎಂದರೇನು ಎಂಬ ವಿಷಯದ ಬಗೆಗೆ ಹಲವು ಅಭಿಪ್ರಾಯಗಳಿದ್ದರೂ ಮಾನವ ವಂಶಶಾಸ್ತ್ರವು ಇದರ ಬಗೆಗೆ ಯಾವುದೇ ಊಹೆಯನ್ನೂ ಮಾಡಲಿಲ್ಲ. ಅದೇ ರೀತಿ 'ಚರಿತ್ರೆ' ಮತ್ತು 'ಪರಂಪರೆ'ಯ ಪರಿಕಲ್ಪನೆಯ ಕುರಿತು ಹಲವು ವ್ಯಾಖ್ಯೆಗಳನ್ನು ನಿರ್ಮಿಸಿ ಸ್ಥಿರಗೊಳಿಸಲಾಗಿದೆ. ಆದಾಗ್ಯೂ ಇಂದಿನವರೆಗೆ ಉಪಲಬ್ಧವಿರುವ ಭಾರತದ (ಏಶಿಯಾ ಖಂಡದ) ಚರಿತ್ರೆಯಲ್ಲಿ ಆದಿವಾಸಿಗಳ ಚರಿತ್ರೆಯನ್ನು ಸರಿಯಾಗಿ ಮಂಡಿಸಿದ್ದು ಕಂಡುಬರುವದಿಲ್ಲ. ಅದೂ ಅಲ್ಲದೆ, ಉಳಿದ ಸಮಾಜದ ಪರಂಪರೆಯ ವ್ಯವಹಾರದಿಂದ ಆದಿವಾಸಿ ಪರಂಪರೆಯ ಕುರಿತು ನಿಷ್ಕರ್ಷೆಗೆ ಬರುವದು ನ್ಯಾಯಯುತವಾಗಲಾರದು. ಆದ್ದರಿಂದ ಆದಿವಾಸಿ ಪರಂಪರೆಯ ಬಗೆಗೆ ಯೋಚಿಸುವಾಗ ಮಾತ್ರ ಮಾನವ ವಂಶಶಾಸ್ತ್ರದ ಸಿದ್ಧಾಂತ ಮತ್ತು ಪ್ರಯೋಗ ಪದ್ಧತಿಯ ಸಹಾಯದಿಂದ ಮಾರ್ಗವನ್ನು ಕ್ರಮಿಸಬೇಕಾಗುತ್ತದೆ. ಆದಿವಾಸಿ ಸಂಸ್ಕೃತಿಯ ಅಧ್ಯಯನಕಾರರು ಈವರೆಗೆ ಇದೇ ಮಾರ್ಗವನ್ನು ಸ್ವೀಕರಿಸಿದ್ದಾರೆ. ಅದರಲ್ಲೂ ಪ್ರತ್ಯಕ್ಷ ಆದಿವಾಸಿ ಕ್ಷೇತ್ರಗಳಿಗೆ ತೆರಳಿ, ಅಲ್ಲಿ ಪಡೆದ ಕೆಲ ವರ್ಷಗಳ ಅನುಭವದ ದಾಖಲೆಗಳ ಆಧಾರಿತ ನಿಷ್ಕರ್ಷೆಯನ್ನು ತೆಗೆದುಕೊಳ್ಳುವ ಸದೃಢ ಅಧ್ಯಯನ ಪದ್ಧತಿಯೂ ಈಗ ಕುಸಿಯುತ್ತ ಹೊರಟಿದೆ. ಇದರ ಪರಿಣಾಮವೇನಾಯಿತೆಂದರೆ ಆದಿವಾಸಿ 'ಸಂಸ್ಕೃತಿ' ವಿಷಯದ ಬಗೆಗಿನ ನಮ್ಮ ಅಜ್ಞಾನ ಮತ್ತು ಅಮಾಯಕತೆಯು ಬೆಳೆಯುತ್ತ ಹೊರಟಿವೆ. ಅವರ ಪರಂಪರೆ ಅವರ ಇತಿಹಾಸ ಮತ್ತು ಅವರ ಸಂಸ್ಕೃತಿ ಈ ಎಲ್ಲದರ ಬಗೆಗೆ ಸ್ವತಂತ್ರ ಮತ್ತು ಯೋಗ್ಯವಾದ ಉದಾಹರಣೆಯನ್ನು ನೀಡುವದೂ ಸಹ ಸಾಕಷ್ಟು ದುಸ್ತರವಾಗಿದೆ. ಈ ಗೊಂದಲದಲ್ಲಿಂದ ಏನಾದರೂ ಹೊಸ ಹಾದಿಯನ್ನು ಹುಡುಕಬಹುದೇ ಎಂಬುದನ್ನು ಕಂಡುಕೊಳ್ಳಲು ಕಳೆದ ಕೆಲವು ವರ್ಷಗಳಿಂದ ನಾನು ಆದಿವಾಸಿಗಳ ಸಹವಾಸದಲ್ಲಿ ವಾಸಿಸಿದ್ದೇನೆ. ಇಂದಿಗೂ ಆ ಸಂಸ್ಕೃತಿಯ ಗೋಜಲು ಗೋಜಲಾದ ನಿರ್ಮಾಣದ ಎಲ್ಲ ಸಂಬಂಧಗಳು ಕೈಗೆ ಸಿಗಲಿಲ್ಲ. ಹೀಗಾಗಿ ಇನ್ನೂ ಸಾಕಷ್ಟು ಕಾರ್ಯ ಮಾಡಬೇಕಾಗಿದೆ. ಆದರೂ ಸದ್ಯಕ್ಕೆ ಕನಿಷ್ಠ ಕೆಲವು ಪ್ರಶ್ನೆಗಳನ್ನು ಸರಿಯಾಗಿ ಎದುರಿಗಿಡಬಹುದು ಎಂಬ ನಂಬಿಕೆಯು ನಿರ್ಮಾಣವಾಗಿದೆ.

ಸಾತಾರಾ ಎಂಬಲ್ಲಿ ಜ್ಯೋತಿಭಟರ ಸಂಗ್ರಹದಲ್ಲಿರುವ ಪಿಠೋರಾ ಚಿತ್ರಗಳ ಛಾಯಾಚಿತ್ರ ನೋಡಲು ಸಿಕ್ಕಿತ್ತು. ಅಲ್ಲಿಯ ಆಕರ್ಷಕ ಕುದುರೆಗಳು ಮತ್ತು ಅವುಗಳ ಐತಿಹಾಸಿಕ ಕಾಲಘಟ್ಟದ ವಿಷಯದ ಬಗೆಗೆ ಯಾವುದೇ ಊಹೆ ಮಾಡುವಂತಿರದ ಆ ಕುದುರೆಗಳ ಸವಾರ ಸ್ವಾಮಿಯ ಬಗೆಗೆ ತುಂಬ ಕುತೂಹಲ ಕೆರಳಿತು. ಈ ಹಿಂದೆ ನಾನು ವಾದಲಿ ಚಿತ್ರಗಳನ್ನು ಕಂಡಿದ್ದೆ. ಅದರಲ್ಲಿಯ ಕುಣಿತದ ವರ್ತುಳ ಮನದೊಳಗೆ ಸಂಗ್ರಹಗೊಂಡಿತ್ತು. ತೇಜಗಡ ಅಕಾಡೆಮಿಯ ಬಳಿ ಒಂದು ದೊಡ್ಡ ಬಂಡೆಗಲ್ಲಿದೆ. ಅದರ ಮೇಲೆ ಎಂದಾದರೂ ಇಂಥ ಚಿತ್ರವನ್ನು ಬಿಡಿಸುವಂತೆ ಮಾಡಬೇಕೆಂಬ ಅವಿಚಾರ ಯೋಚನೆಯು ನನ್ನ ಮನದೊಳಗೆ ಸುಳಿಯಿತು.

ಛೋಟಾಉದೇಪುರ 'ಹಾಟ್'ದಲ್ಲಿ ಕಣ್ಣು ಕುಕ್ಕುವ ದಟ್ಟಬಣ್ಣದ ಬಟ್ಟೆಗಳನ್ನು ಧರಿಸಿದ ಆದಿವಾಸಿಗಳನ್ನು ಕಂಡಾಗ, ಅವರ ಬಣ್ಣದ ಆಕರ್ಷಣೆಯ ಬಗೆಗೆ ನನಗೆ ಬೆರಗಾಗುತ್ತಿತ್ತು. ಸಂತೆಯಲ್ಲಿ ಮಾರುವ ವಸ್ತುಗಳನ್ನು ಸಹ ಪೂಜೆ ಸಂದರ್ಭದಲ್ಲಿ ನಡೆಸುವಂತೆ ಅಚ್ಚುಕಟ್ಟಾಗಿ ಇಡಲಾಗಿತ್ತು. ನಗರಕ್ಕೆ ಬಂದ ಬಳಿಕ ಅವರ ನಡಿಗೆಯಲ್ಲಿ ಒಂದು ಶಿಸ್ತು ಇರುತ್ತದೆ. ಒಬ್ಬರ ಹಿಂದೆ ಒಬ್ಬರಂತೆ, ಸೈನಿಕರಂತೆ ಅಥವಾ ಚಳಿಗಾಲದಲ್ಲಿ ವಲಸೆ ಹೋಗುವ ಹಕ್ಕಿಗಳಂತೆ ಅತ್ಯಂತ ನಿಶ್ಶಬ್ದವಾಗಿ ಮತ್ತು ವೇಗದಿಂದ ಅವರು ನಡೆಯುತ್ತ ಇರುತ್ತಾರೆ. ಆದಿವಾಸಿಗಳು ಚಕ್ಕಡಿಯನ್ನು ಓಡಿಸುವಾಗ ಎತ್ತುಗಳ ಮೇಲೆ ಮುನಿಯುವದಿಲ್ಲ, ಭಾರವನ್ನು ಹೊರುವಾಗ 'ಹೈಶಾ', 'ಹೈಯೋ' ಎಂದೆಲ್ಲ ಕೂಗುವದಿಲ್ಲ. ಬೇರೆಯವರ ಮನೆಯನ್ನು ಪ್ರವೇಶಿಸುವಾಗ ತಮ್ಮ ಆಗಮನದ ಸೂಚನೆ ನೀಡಲು ಸದ್ದು ಮಾಡುವದಿಲ್ಲ. ಆದಿವಾಸಿಗಳು ಶಾಂತರಾಗಿರುತ್ತಾರೆ. ಏಕೆಂದರೆ ಅವರ ಅಂತರಂಗದಲ್ಲಿ ಕ್ರೋಧವಿರುತ್ತದೆ. ಇಂಥ ಶಾಂತಿ ಮತ್ತು ಹಿಂಸೆಯ ಮಿಲಾಪವು ಕೇವಲ ಕಲೆಯ ನಿರ್ಮಿತಿಯಲ್ಲಿ ಮಾತ್ರ ಕಾಣಲು ಸಿಗುತ್ತದೆ. ಅದು ಆದಿವಾಸಿಗಳ ಪ್ರತಿಯೊಂದು ಕೃತಿಯಲ್ಲಿ, ಪ್ರತಿ ವ್ಯವಹಾರದಲ್ಲಿ ತುಂಬಿಕೊಂಡಿದೆ.

ಭಿಲ್ಲ ಆದಿವಾಸಿಗಳು ತಮ್ಮ ಪೂರ್ವಜರನ್ನು ನೆನಪಿಸಿಕೊಳ್ಳಲು ಪ್ರತೀ ವರ್ಷ ದೇವತೆಗಳ ಎದುರಿಗೆ ಮಣ್ಣಿನ ಕುದುರೆಯನ್ನು ಅರ್ಪಿಸುತ್ತಾರೆ. ಈ ಕುದುರೆಗಳನ್ನು ಊರ ಸನಿಹದಲ್ಲಿರುವ ಕುಂಬಾರರು ನಿರ್ಮಿಸುತ್ತಾರೆ. ತೇಜಗಡದಲ್ಲಿ ಒಂದು ಕುಂಬಾರಗಲ್ಲಿ ಇದೆ. ಅಲ್ಲಿ ಕೇದಾರಭಾಯಿ ಎಂಬ ವ್ಯಕ್ತಿಯೊಬ್ಬನು ಕಳೆದ ಐವತ್ತು ವರ್ಷಗಳಿಂದ ಮಣ್ಣಿನ ಕುದುರೆ ಮತ್ತು ಹೆಂಡದ ಮಡಕೆಗಳನ್ನು ತಯಾರಿಸುವ ಕೆಲಸ ಮಾಡುತ್ತಿದ್ದಾರೆ. ನಾನು ತೇಜಗಡಕ್ಕೆ ಹೋದ ಆರಂಭದ ಕಾಲದಲ್ಲಿ ಕೇದಾರಭಾಯಿ ಎಂಬುವ ವ್ಯಕ್ತಿ ನನ್ನನ್ನು ತಪ್ಪದೆ ತನ್ನ ಮನೆಗೆ ಕರೆದೊಯ್ಯುತ್ತಿದ್ದ. ಪ್ರತೀ ಸಲ ನಾನು ಅವನು ತಯಾರಿಸಿದ ಕುದುರೆಗಳನ್ನು ನನ್ನ ಕಣ್ಣಲ್ಲಿ ತುಂಬಿಕೊಳ್ಳುತ್ತಿದ್ದೆ. ಎಷ್ಟೋ ಸಲ ಅವುಗಳಲ್ಲಿ ಕೆಲವನ್ನು ಬರೋಡೆಗೆ ಒಯ್ಯುತ್ತಿದ್ದೆ. ಕೇದಾರಭಾಯಿ ಆ ಕುದುರೆಗಳಿಗೆ ಆದಿವಾಸಿಗಳಿಗೆ ಪ್ರಿಯವಾದ ಬಣ್ಣವನ್ನು ನೀಡುತ್ತಿದ್ದ. ಕೆಲ ವರ್ಷಗಳ ಹಿಂದೆ ನಾನು ಸ್ಪೇನ್‌ನ ಬಾಸಿರ್‌ಲೋನಾ ಎಂಬ ನಗರಕ್ಕೆ ಹೋದಾಗ ಅಲ್ಲಿಯ ಪಿಕಾಸೋನ ತಾರುಣ್ಯದಲ್ಲಿ ವಾಸಿಸುವ ಕಟ್ಟಡದಲ್ಲಿಯ ಚಿತ್ರ ಸಂಗ್ರಹಾಲಯದಿಂದ ಒಂದು ಪ್ರಿಂಟ್ ತಂದಿದ್ದೆ. ಅದರಲ್ಲಿರುವ ವ್ಯಕ್ತಿಯು ಮಹಿಳೆಯೋ–ಪುರುಷನೋ ಎಂದು ಹೇಳುವದು ಕಷ್ಟವಾಗಿತ್ತು. ಆ ವ್ಯಕ್ತಿಯು ಅರ್ಧ ಅಳುತ್ತಲಿದೆ, ಅರ್ಧ ನಗುತ್ತಲಿದೆ.

ಆಕಸ್ಮಿಕವಾಗಿ ಕೇದಾರಭಾಯಿಯು ನೀಡಿದ ಎರಡು ಬಣ್ಣದ ಕುದುರೆಗಳನ್ನು ನನ್ನ ಮನೆಯಲ್ಲಿ ಈ ಚಿತ್ರ ತೂಗುಹಾಕಿದ ಜಾಗದ ಕೆಳಗೆ ಇಡಲಾಯಿತು. ಕೆಲ ದಿನಗಳ ಹಿಂದೆ ರಿಸರ್ವ್ ಬ್ಯಾಂಕಿನ ನಿವೃತ್ತ ಗವರ್ನರ್ ಡಾ॥ ಐ. ಜಾ. ಪಟೇಲರು ತಮ್ಮ ಪತ್ನಿಯೊಂದಿಗೆ ನಮ್ಮ ಮನೆಗೆ ಆಗಮಿಸಿದರು. ಪಿಕಾಸೋ ಮತ್ತು ಕೇದಾರಭಾಯಿಯವರ ಬಣ್ಣದಲ್ಲಿರುವ ಸಾಮ್ಯ ಅವರ ಗಮನಕ್ಕೆ ಬಂತು. ಅವರದನ್ನು ನನಗೆ ತೋರಿಸಿದಾಗ ನಾನೆಂದೆ, "ನಮ್ಮ ಆದಿವಾಸಿಯು ಪಿಕಾಸೋಗಿಂತಲೂ ಕಡಿಮೆಯೇನಲ್ಲ." ಆಗ ಡಾ॥ ಪಟೇಲರು ಹಾಸ್ಯದಿಂದ ಹೇಳಿದರು, 'ಆದಿವಾಸಿಯನ್ನು ಏಕೆ ಅಪಮಾನ ಮಾಡುತ್ತೀರಿ' ಎಂದು. ಆದಿವಾಸಿಗಳ ಈ ನಿಗೂಢ ಬಣ್ಣದ ಬಗೆಗಿನ ಒಗಟನ್ನು ಬಿಡಿಸುವದು ಅಗತ್ಯವಾಗಿತ್ತು.

ತೇಜಗಡದ ಒಂದು ಆದಿವಾಸಿಯ ಮನೆಯಲ್ಲಿ ಪಿಠೋರಾ ಚಿತ್ರ ನೋಡಲು ಸಿಗುತ್ತದೆ ಎಂದು ಒಬ್ಬರು ನನಗೆ ಹೇಳಿದರು. ಆ ದಿನ ನನ್ನ ಜೊತೆಯಲ್ಲಿ ಫ್ರಾನ್ಸಿನಿಂದ ಆಗಮಿಸಿದ ಶ್ರೀ ಭೂಪೆನ್ ಖಖ್ಖರನ ಕೆಲವು ಮಿತ್ರರು ಇದ್ದರು. ನಾವು ಆ ಮನೆಯೊಳಗೆ ಕಾಲಿರಿಸಿದಾಗ ಅಲಿಬಾಬಾನ ಗುಹೆಯೊಳಗೆ ಹೋದಂತಾಯಿತು. ಒಳಗೆ ಗೋಡೆಗಳ ಮೇಲೆಲ್ಲ ಅದ್ಭುತ ಕಲೆಗಾರಿಕೆಯಿಂದ ಚಿತ್ರಿಸಿದ ಅನಂತ ಚಿತ್ರಗಳಿದ್ದವು. ನನ್ನ ಫ್ರೆಂಚ್ ಗೆಳೆಯರು ಅರಿವಿಲ್ಲದೆಯೇ ಕ್ಯಾಮೆರಾ ಬಳಸಲು ಶುರು ಮಾಡಿದರು. ಎರಡು–ಮೂರು ನಿಮಿಷದಲ್ಲೇ ಒಬ್ಬ ಆದಿವಾಸಿ ಆಸಾಮಿ ನಮ್ಮ ಮೇಲೆ ಏರಿಬಂದ. ಅವನು ಶೆರೆಯ ನಶೆಯಲ್ಲಿದ್ದ. "ಮುಂಬೈ ಲೀ ಜಾವಾ ಮಾಟೆ ಆಯಿವ್ಯಾ ಸೋ. ನಿ. ಚಾಂಸೇ..." ಎಂದು ಅವನು ಕಣಜದ ಬಳಿಯಲ್ಲಿರಿಸಿದ ಬಿಲ್ಲು–ಬಾಣವನ್ನು ಎತ್ತಿಕೊಂಡ. ಮನೆಯಲ್ಲಿಯ ಹೆಂಗಸರು ಹೇಳಿದರು, "ನೀವು ಗಮನ ಕೊಡಬೇಡಿ". ಆದರೆ ಅವರು ಆ ಆಸಾಮಿಯನ್ನು ಅಡ್ಡಗಟ್ಟಲೂ ಇಲ್ಲ. ನನ್ನ ಜೊತೆಗಿನ ಹುಡುಗ ಹೇಳಿದ; "ಈಗ ನಾವು ಹೊರಬೀಳೋಣ. ಬೇರೊಂದು ಮನೆಯಲ್ಲಿ ಪಿಠೋರಾ ಇದೆ. ಅಲ್ಲಿಗೆ ಕರೆದೊಯ್ಯುತ್ತೇನೆ."

ನಾನಿಲ್ಲಿ ಕಲಿತ ಪಾಠ ಮೂರು : ಒಂದು, ಆದಿವಾಸಿ ಕೇವಲ ನಶೆಯಲ್ಲಿದ್ದಾಗಲೇ ಸತ್ಯ ಮಾತಾಡುತ್ತಾನೆ. ಎರಡು, ಅವನು ನಗರವಾಸಿಗಳನ್ನು ದ್ವೇಷಿಸುತ್ತಾನೆ. ಮತ್ತು ಮೂರು, ಆದಿವಾಸಿಗಳು ನಶೆಯಲ್ಲಿದ್ದ ವ್ಯಕ್ತಿಯ ಅಪಮಾನ ಮಾಡುವದಿಲ್ಲ. ಈ ಮೂರೂ ಪಾಠಗಳು ನನ್ನ ಅನಂತರದ ಹಲವು ಅನುಭವದಿಂದಾಗಿ ನನ್ನ ಮನದ ಮೇಲೆ ಆಳವಾಗಿ ಮುದ್ರೆಯೊತ್ತಿದವು. ನಂತರದ ದಿನಗಳಲ್ಲಿ ನನ್ನ ಕೆಲಸ ಕಾರ್ಯಗಳಿಗೆ ಅದು ತುಂಬ ಉಪಯೋಗಕ್ಕೆ ಬಂತು.

ಒಂದು ದಿನ ಸಂಜೆ ನಾನು ತೇಜಗಡಕ್ಕೆ ಹೊರಟೆ. ಮರಳುವಾಗ

ದೂರದಲ್ಲೆಲ್ಲೋ ಢೋಲು ಬಾರಿಸುವದು ಕೇಳಿ ಬಂತು. ವಿಚಾರಿಸಿದಾಗ ರಾತ್ರಿ ಯಾವುದೋ ಮೆರವಣಿಗೆ ಹೊರಡಲಿದೆ ಎನ್ನುವದು ಗೊತ್ತಾಯಿತು. ನಾನದನ್ನು ನೋಡಲು ನಿಂತೆ. ಕತ್ತಲೆ ಆವರಿಸಿತ್ತು. ನನ್ನ ಮೂರ್‍ನಾಲ್ಕು ಆದಿವಾಸಿ ಗೆಳೆಯರು ಮತ್ತು ನಾನು ಹೊಂಚು ಹಾಕಿ ಕೂತ ಪ್ರಾಣಿಗಳಂತೆ ತೇಜಗಡದ ಹೈಸ್ಕೂಲಿನ ಆವರಣದಲ್ಲಿ ಹಾದಿ ಕಾಯಲಾರಂಭಿಸಿದೆವು. ಆ ಕತ್ತಲೆಯಲ್ಲಿ ಆಚೆಈಚೆಯ ಗಿಡಮರಗಳಿಂದ ಕೇಳಿಬರುವ ರಾತ್ರಿ ಕೀಟಗಳ ಸದ್ದು... ವಿರಳವಾಗಿ ಹಾವುಗಳಿಗೆ ಹೆದರಿ ಹಾರುವ ಹಕ್ಕಿಗಳ ರೆಕ್ಕೆಗಳ ಫಡಫಡಿಕೆ... ಎಲ್ಲ ಸ್ತಬ್ಧ... ಮಧ್ಯರಾತ್ರಿಯ ಸುಮಾರಿಗೆ ಢೋಲಿನ ಸದ್ದು ಕೇಳಿಬರಲಾರಂಭಿಸಿತು... ನನ್ನ ಆದಿವಾಸಿ ಗೆಳೆಯರು ಹೇಳಿದರು, "ಜನರೆಲ್ಲ ಸೇರಿದ್ದಾರೆ." ಢೋಲಿನ ಸದ್ದಿನ ಲಯ ಬದಲಾಯಿತು. ಅವರೆಂದರು, "ಜನರು ಹೊರಟರು." ಲಯದ ಪ್ರತಿಯೊಂದು ಬದಲಾವಣೆಯ ನಂತರ ಅವರು ನನಗೆ ಮೆರವಣಿಗೆಯ ಚಲನೆಯನ್ನು ತಿಳಿಸುತ್ತಿದ್ದರು. ಮೆರವಣಿಗೆಯ ಜೊತೆಗೆ ಬೆಳಕಿನ ಯಾವ ಗುರುತೂ ಇರಲಿಲ್ಲ. ಅನಂತರ ಅಚಾನಕ್ ಆಗಿ ಕಣ್ಣೆದುರಿಗೆ ಜನರ ಸಾಲು ಕಾಣಲಾರಂಭಿಸಿತು. ಕುಣಿಯುತ್ತ – ಕುಣಿಯುತ್ತ ಹೊರಟ ಆದಿವಾಸಿಗಳು ಹೈಸ್ಕೂಲ್ ಬಳಿಯ ಒಂದು ಕೆತ್ತಿದ ಬಂಡೆಯ ಹತ್ತಿರ ಬಂದು ನಿಂತರು. ನಾವು ಅವರ ಬಳಿಗೆ ಹೋದೆವು. ನನ್ನ ಆದಿವಾಸಿ ಗೆಳೆಯರ ಮತ್ತು ಮೆರವಣಿಗೆಯಲ್ಲಿಯ ಅರ್ಚಕರ ನಡುವೆ ಪಿಸುಮಾತು ನಡೆಯಿತು. ಅರ್ಚಕರು ನನ್ನ ಹಾಜರಾತಿಗೆ ಅನುಮತಿ ನೀಡಿರಬೇಕು. ಬಳಿಕ ಆಕಸ್ಮಿಕವಾಗಿ ಮೂರು ನಾಲ್ಕು ಜನರ ಮೈಯಲ್ಲಿ ದೇವರ ಸಂಚಾರವಾಯಿತು. ಅವರಲ್ಲಿಯ ಪ್ರತಿಯೊಬ್ಬರೂ ದೇವರ ಆವಾಹನೆಯನ್ನು ಸಂಭಾಳಿಸುತ್ತ ಆ ಕೆತ್ತಿದ ಬಂಡೆಯವರೆಗೆ ಹೋಗಲಾರಂಭಿಸಿದರು.

ಆ ಬಂಡೆಯ ಹತ್ತಿರ ಸುಮಾರು ಏಳೆಂಟು ವರುಷದ ಪೋರಿಯೊಬ್ಬಳು ಕಂಗಳನ್ನು ಅರಳಿಸಿ ಈ ದೃಶ್ಯವನ್ನೆಲ್ಲ ನೋಡುತ್ತಿದ್ದಳು. ಅವಳ ಹೆಸರು ಊರ್ಮಿಲೆ ಎಂದು. ಆನಂತರ ನನಗೆ ಗೊತ್ತಾಯಿತು. ಅವಳ ಕೈಯಲ್ಲಿ ಹೂವಿನ ಮಾಲೆಯಿತ್ತು. ಪ್ರತಿಯೊಂದು ಆವಾಹನೆಯ ದೇವರುಗಳಿಗೆ ಅವಳು ಮಾಲೆಯನ್ನು ಹಾಕುತ್ತಿದ್ದಳು. ಕೊರಳಿಗೆ ಮಾಲೆ ಬಿದ್ದಾಕ್ಷಣ ಆ ಮನುಷ್ಯರಲ್ಲಿನ ದೇವರ ಆವಾಹನೆಯು ನಿಂತುಹೋಗುತ್ತಿತ್ತು. ಹೀಗೆ ಎಷ್ಟೋ ಹೊತ್ತು ನಡೆಯಿತು. ಢೋಲಿನ ಸದ್ದು ಮುಂದುವರಿಯಿತು. ಈ ಕಾರ್ಯವೆಲ್ಲ ಮುಗಿದ ಬಳಿಕ ನಾನು ಅವಳ ತಾಯಿ ತಂದೆಯರ ಜೊತೆಗೆ ಮಾತಾಡಿದೆ. ಅವರು ಹೇಳಿದರು. "ಕೆಲವು ದಿನಗಳ ಹಿಂದೆ ನಾವು ಕೆಲಸ ಮಾಡಲು ಹೊಲಕ್ಕೆ ಹೋಗಿದ್ದೆವು. ಆಗ ಊರ್ಮಿಲೆ ಮನೆಯಲ್ಲಿ ಒಂಟಿಯಾಗಿದ್ದಳು. ಅವಳು ಮಲಗಿದ್ದಳು. ನಾವು ಮರಳಿ ಬಂದಾಗ ಅವಳ ಮೈಮೇಲೆ ನಾಗದೇವತೆ ಹೆಡೆ ಎತ್ತಿ ನಿಂತಿತ್ತು. ಅವಳಿಗೆ ಕಚ್ಚದೆ ಸ್ವಲ್ಪ ಸಮಯದ ಬಳಿಕ ಅದು ಹೊರಟು ಹೋಯಿತು." ಆ ದೇವತೆಯು ಅವಳಿಗೆ ಜೀವದಾನ ನೀಡಿದ್ದರಿಂದ ಅದರ ಋಣ ತೀರಿಸಲೆಂದು ಈ

ಕಾವ್ಯಲೋಕ

# ಕನ್ನಡಕ



ನನ್ನವ್ವ ನನಗೆ
ಕನ್ನಡಕ
ಲೋಕದಾ ಶಬುದ
ಅವಳ ಕಣ್ಣಲ್ಲಿ ಕಾಣುತ್ತಿದೆ

ದುಡಿದು ದಣಿದು
ಮೈಯ ಕಸರತ್ತಿನಿಂದ
ತೊಟ್ಟಿಕ್ಕುವ ಬೆವರ ಒಂದೊಂದು ಹನಿಗಳು
ಒಂದೊಂದು ವಚನ ಹೇಳುತ್ತವೆ
ನನ್ನವ್ವ ನನಗೆ
ಕನ್ನಡಕ

ಒಣಗಿದ ಮರದ ತುಂಡುಗಳಿಗೆ
ಮಡಿಕೆಯ ಅಂಡು ಸುಟ್ಟು
ಬೆಂದು ಮಿಂದ ಅನ್ನದ ಅಗುಳುಗಳಲ್ಲಿ
ಅಲ್ಲಮ
ಬಸವ
ಮಾದಾರ
ಕಾಣುತ್ತಾರೆ
ನನ್ನವ್ವ ನನಗೆ
ಕನ್ನಡಕ

ಬ್ಯಾಗ ಕೊಟ್ಟು ಸ್ಲೇಟನಿಟ್ಟು
ಹೋಗಲೊಲ್ಲದವನಿಗೆ
ಚಡಿ ಏಟು ಕೊಟ್ಟು
ಅಕ್ಷರದರ ಮನೆಗೆ
ಎಳೆದೊಯ್ದ ಕೈಗಳು
ಸಾವಿತ್ರಿ ಬಾ ಫುಲೆಯ ಸ್ಪರ್ಶ
ಉಸಿರಾಡುತ್ತಿತ್ತು
ನನ್ನವ್ವ ನನಗೆ
ಕನ್ನಡಕ

ಅವ ದೊಡ್ಡವ
ಇವ ಚಿಕ್ಕವ
ಅವ ಮೇಲು
ಇವ ಕೀಳೆನ್ನದೆ
ಎಲ್ಲರಿಗೂ ಬೆಚ್ಚನೆಯ
ಕಂಬಳಿ ಕೊಟ್ಟ ಒಲವು
ಶಾಹು, ನಾಲ್ವಡಿಯ ನಿಲುವಿನ
ಸಾಮಾಜಿಕ ನ್ಯಾಯ ಹರಿದಾಡುತ್ತಿತ್ತು
ನನ್ನವ್ವ ನನಗೆ
ಕನ್ನಡಕ

ರಗುತಕ್ಕಂಟಿದ
ಮರಿ ರಗುತಗಳಿಗೆ
ಸಂಪತ್ತೇಕೆ ? ಎನ್ನುವವರ ನಡುವೆ
ಸಮನಾಗಿ ತೆವರಿ ಹಾಕಿ
ತೋರುಬೆರಳಲ್ಲಿ ಕಲ್ಲು ನೆಡಿಸಿ
ಒಡೆತನ ನೀಡಿದವಳ ಕಣ್ಣಲ್ಲಿ
ಅಂಬೇಡ್ಕರ್ ಒಡಮೂಡಿದ್ದಾರೆ
ನನ್ನವ್ವ ನನಗೆ
ಕನ್ನಡಕ

ವರುಷದಲ್ಲಿ ಹರುಷ ಬೇಡ
ಕಹಿಯೂ ಇರಲಿ
ಸಿಹಿಯೂ ಇರಲಿ
ಹೊನ್ನೇರು ಕಟ್ಟಿ
ಶಕೆಯಾರಂಭಿಸುವ
ಪ್ರಕೃತಿಯನ್ನು ಕೈ ಎತ್ತಿ ಮುಗಿದು
ಮನ ತುಂಬಿಕೊಳ್ಳುವ ಹೃದಯದಲ್ಲಿ
ಬುದ್ಧ ನೆಲೆಯಾಗಿದ್ದಾನೆ
ನನ್ನವ್ವ ನನಗೆ
ಕನ್ನಡಕ

**ಹಾರೋಹಳ್ಳಿ ರವೀಂದ್ರ**
ನಂ. ೫೬೮, ೩ನೇ ತಿರುವು, ೪ನೇ ಮುಖ್ಯರಸ್ತೆ, ೨ನೇ ಹಂತ
ಇ ಅಂಡ್ ಎಫ್ ಬ್ಲಾಕ್, ರಾಮಕೃಷ್ಣನಗರ, ಮೈಸೂರು – ೫೭೦ ೦೨೨

ವಿಧಿಯನ್ನು ಆಚರಿಸಲಾಗಿತ್ತು. ಊರ್ಮಿಲೆಯು ಪ್ರತಿಯೊಂದು ದೇವತೆಯ ಆವಾಹನೆಯನ್ನು ಮಾನವ ಸ್ವರೂಪದಲ್ಲಿ ಅನುಭವಿಸಿದಳು ಮತ್ತು ಆ ದೇವತೆಗೆ ಮಾಲೆ ತೊಡಿಸಿ ಸ್ಮರಣೆ ಮಾಡಿದಳು. ಮುಂದೆ ರಾತ್ರಿಯ ಕೆಲವೇ ಸಮಯ ಉಳಿದಿತ್ತು.

ಭಗವಾನದಾಸ ಪಟೇಲರ ಆದಿವಾಸಿ ಸಹಕಾರಗಳಿಂದ ರಾಜಸ್ಥಾನ ಮತ್ತು ಗುಜರಾತ ಸೀಮೆಯಲ್ಲಿ ಹಾಡುವ ಗುಡ್ಡಗಾಡಿನ ಭಿಲ್ಲರ ಮಹಾಭಾರತದ ಪಠಣವನ್ನು ಹಲವು ಸಲ ಅನುಭವಿಸಲು ಅವಕಾಶ ದೊರಕಿತು. ಪ್ರತಿ ಪಠಣದ ಕಾಲಕ್ಕೆ ಅವರು ವಿಧಿಪೂರ್ವಕ ಪದ್ಧತಿಯನ್ನು ಆಚರಿಸುತ್ತಾರೆ. ಅಂದರೆ ಬಿಳಿಯ ಬಟ್ಟೆಯ ಮೇಲೆ ಅಕ್ಕಿ ಮತ್ತು ಕುಂಕುಮ ಅಥವಾ ಗುಲಾಲನ್ನು ಬಳಸಿ ತಾಂತ್ರಿಕ ಚಿತ್ರದಂತೆ ಚಿತ್ರ ಬಿಡಿಸುತ್ತಾರೆ. ಅದರೊಳಗೆ ಸೂರ್ಯ–ಚಂದ್ರ, ವೃಶ್ಚಿಕ ಮತ್ತು ಉಳಿದ ನಕ್ಷತ್ರಗಳನ್ನು, ಹಾಗೆಯೇ ಮಹಾಭಾರತದಲ್ಲಿಯ ವಾಸುಕಿ, ಅರ್ಜುನರಂತಹ ಪಾತ್ರಗಳನ್ನು ಚಿತ್ರಿಸುತ್ತಾರೆ. ಬಳಿಕ ಪಠಣ ಶುರುವಾಗುತ್ತದೆ. ಅದರಲ್ಲಿ ಕೀರ್ತನೆ, ಗಾಯನ, ವಾದ್ಯ ಇರುತ್ತದೆ. ಬಳಿಕ ಮೆಲ್ಲಗೆ ಕುಣಿತ ಆರಂಭವಾಗುತ್ತದೆ. ಆಕಸ್ಮಿಕವಾಗಿ ಅವರಲ್ಲಿಯ ಒಬ್ಬ ಸಹಕಾರಿ ಮಹಾಭಾರತದ ಪಾತ್ರಗಳ ಒಂದು ಸೋಗನ್ನು ಹಾಕಿಕೊಂಡು ಬರುತ್ತಾನೆ. ಅವರ ದೃಷ್ಟಿಯಲ್ಲಿ ಇದೆಲ್ಲವೂ ಒಂದು ಪೂಜೆಯೋ, ಪ್ರಾರ್ಥನೆಯೋ ಆಗುತ್ತದೆ. ಶ್ರೋತೃಗಳು ಅದರಲ್ಲಿ ತಲ್ಲೀನರಾಗಿ ಪಾಲ್ಗೊಳ್ಳುತ್ತಾರೆ. ಚಿತ್ರಕಲೆ, ನಾಟ್ಯ, ನೃತ್ಯ, ಸಂಗೀತ, ಕಾವ್ಯ, ವಾದ್ಯ, ಪ್ರಾರ್ಥನೆ ಮತ್ತು ಸಮಾರಂಭ – ಇವೆಲ್ಲದರ ಅಪೂರ್ವ ರಸಾಯನವು ಆದಿವಾಸಿಗಳ ಪರಂಪರೆಯಲ್ಲಿ ಕಾಣಲು ಸಿಗುತ್ತದೆ.

ಆದಿವಾಸಿಗಳಲ್ಲಿ ಮಹತ್ವದ ಪರಂಪರೆ ಮತ್ತು ಗೌಣ ಪರಂಪರೆ ಎಂದು ಭೇದವನ್ನು ಮಾಡುವದಿಲ್ಲ. ಒಮ್ಮೆ ಧಡಗಾವ ಹತ್ತಿರದ ಹೊಳೆಯಲ್ಲಿ ಮೀನು ಹಿಡಿಯುತ್ತಿರುವ ಒಬ್ಬ ಆದಿವಾಸಿಯನ್ನು ಸುಭಾಷ ಪಾವರಾ ಗುರೂಜಿಯವರು ತೋರಿಸಿದರು. ಪ್ರತಿಯೊಬ್ಬರ ಬಳಿ ಸ್ವಂತದ ಬಲೆ. ಬಿದಿರಿನ ಕಮಾನಿನ ಸಹಾಯದಿಂದ ಕಟ್ಟಲಾಗಿತ್ತು. ಪ್ರತಿಯೊಂದರ ಮುಖ ಬೇರೆ ಬೇರೆ ದಿಕ್ಕಿಗೆ. ಎಲ್ಲರೂ ನಿಶ್ಶಬ್ದರಾಗಿ ನಿಂತಿದ್ದರು. ಮೀನು ಹಿಡಿದಾದ ಬಳಿಕ ಎಲ್ಲರ ಮೀನುಗಳನ್ನು ಒಂದೇ ಕಡೆ ರಾಶಿ ಹಾಕುತ್ತಾರೆ. ಬಳಿಕ ಪ್ರತಿಯೊಬ್ಬರ ಪಾಲನ್ನು ಬೇರೆ ಬೇರೆ ಮಾಡಲಾಗುತ್ತದೆ. ಯವತಮಾಳ ಹತ್ತಿರ ನಾನೊಂದು ಹೋಳಿಹಬ್ಬವನ್ನು ನೋಡಲು ಬಂಜಾರಾ ತಾಂಡೆಗೆ ಹೋಗಿದ್ದೆ. ಅಲ್ಲಿ ಎಲ್ಲರೂ ವಂತಿಗೆಯನ್ನು ಸಂಗ್ರಹಿಸಿ ಕುರಿಯನ್ನು ಖರೀದಿ ಮಾಡಿದ್ದರು. ಅದರ ರುಂಡವನ್ನು ಕತ್ತರಿಸಿ ಸುಡಲಾಗಿತ್ತು. ವಿಶೇಷವಾಗಿ ಅದರ ಕಿವಿಯ ಬಳಿಯ ಮಾಂಸಕ್ಕಾಗಿ ಮಕ್ಕಳ ನಡುವೆ ಎಳೆದಾಟ ನಡೆದಿತ್ತು. ಪ್ರತಿಯೊಬ್ಬರೂ ತಮ್ಮ ಶಕ್ತಿಗೆ ಅನುಗುಣವಾಗಿ ವಂತಿಗೆಯನ್ನು ನೀಡಿದರೂ ಎಲ್ಲರಿಗೂ ಸಮಾನ ಪಾಲು ಸಿಗುತ್ತಿತ್ತು. ಆದಿವಾಸಿಯು ಹೀಗೆ ನಿರ್ಲೋಭಿಯಾಗಿರುತ್ತಾನೆ.

ಯಾವುದೇ ಸೈದ್ಧಾಂತಿಕ ನಿಲುವಿಗೆ ಹೊಂದಿಕೆಯಾಗದ ಈ ಉದಾಹರಣೆಯನ್ನು ನೀಡಿದೆ. ಏಕೆಂದರೆ ಪರಂಪರೆಯ ಬಗೆಗೆ ಸ್ವತಃ ಆದಿವಾಸಿಯ ಮನೋವೃತ್ತಿಯನ್ನು ಅರಿಯುವದು ಮಹತ್ವದ್ದು. ಪರಂಪರೆಯನ್ನು ನೋಡುವ ಅವರ ದೃಷ್ಟಿಯು ಪ್ರಜ್ಞೆ ಅಥವಾ ಅಪ್ರಜ್ಞೆಯಿಂದಾಗಲಿ ಕೂಡಿರುವದಿಲ್ಲ, ಪೂರ್ವಜರಿಂದಲೂ ನಡೆದುಬಂದಿರುವದನ್ನು ಅವನು ಪಾಲಿಸುತ್ತಾನೆ, ಆದರೆ ಆ ಪದ್ಧತಿಯ ಗುಲಾಮನಾಗಿರುವದು ತೀರ ವಿರಳ. ಹೀಗಾಗಿ ಚರಿತ್ರೆ ಮತ್ತು ಆದಿವಾಸಿಗಳ ಸಂಬಂಧವು ದೌರ್ಜನ್ಯದ್ದಾಗಲಿ ಬಲವಂತದ್ದಾಗಲಿ ಅಥವಾ ಭೀತಿಯದ್ದಾಗಲಿ ಅಲ್ಲ.

ಪರಂಪರೆಗಿಂತಲೂ ಹೆಚ್ಚು ಮಹತ್ವದ್ದೇನೋ ಇದೆ. ಅದನ್ನು ಸಂರಕ್ಷಣೆ ಮಾಡುವದು ತಮ್ಮ ಪವಿತ್ರ ಕರ್ತವ್ಯವಾಗಿದೆ ಎಂದು ಆದಿವಾಸಿಗಳು ಪ್ರಾಚೀನ ಕಾಲದಿಂದಲೂ ಒಪ್ಪಿಕೊಂಡಂತೆ ಕಾಣುತ್ತದೆ. ಆ ಕರ್ತವ್ಯವನ್ನು ಆಚರಿಸುತ್ತಿರುವಾಗ ಪರಂಪರೆಗೆ ಬಾಧೆ ಬಂದಲ್ಲಿ, ಅದರ ಬಗೆಗೆ ಆದಿವಾಸಿ ಅಷ್ಟೊಂದು ಖೇದ ಪಡುವಂತೆ ಕಾಣುವದಿಲ್ಲ. ಪ್ರಾಯಃ ಈ ಕಾರಣದಿಂದಾಗಿಯೇ ಅವರಲ್ಲಿ ಬ್ರಾಹ್ಮಣ ವರ್ಗದ ನಿರ್ಮಿತಿಗೆ ಹೆಚ್ಚು ಚಾಲನೆ ಸಿಕ್ಕಂತಿಲ್ಲ. ಯಾರಲ್ಲಿ ಅರ್ಚಕ, ಗುರು, ದೇವಋಷಿ, ಬ್ರಾಹ್ಮಣ ವರ್ಗದವರ ಅಂಶ ಗೋಚರಿಸುತ್ತದೆಯೋ, ಅವರಿಗೆ ಗರಿಷ್ಠ ಸಾಂಸ್ಕೃತಿಕ ಸ್ಥಿತಿಸ್ಥಾಪಕತೆಯನ್ನು ನೀಡಿರಬೇಕು.

ಪರಂಪರೆಗಿಂತಲೂ ಹೆಚ್ಚು ಮಹತ್ವದ್ದೆಂದು ಭಾವಿಸಿದ ಯಾವ ಪ್ರಜ್ಞೆಯ ಕುರಿತು ನಾನು ಹೇಳುತ್ತಿದ್ದೇನೋ, ಅದಕ್ಕೆ ಮಾನವ ವಂಶಶಾಸ್ತ್ರದಲ್ಲಿ ಯೋಗ್ಯವಾದ ಪದವಿಲ್ಲ, ಆ ಭಾವನೆಗೆ ನಾನು 'ವಿಶ್ವದ ಉತ್ತರದಾಯಿತ್ವ' ಎಂಬ ಪದಪ್ರಯೋಗವನ್ನು ಬಳಸುತ್ತೇನೆ. 'ಯಾವುದೇ ಮರದ ಒಂದು ರೆಂಬೆಯು ಮುರಿದರೂ, ಎಲೆಗಳು ಉದುರಿದರೂ, ಉಳಿದ ಮರ ಮಾತ್ರ ಬೆಳೆಯುತ್ತ ಹೋದಾಗ, ಆ ರೆಂಬೆಯನ್ನು ಸಹಜವಾಗಿ ದೂರ ಸರಿಸಬೇಕೆಂಬ ಇಚ್ಛೆಯೇ ನನ್ನ ಪ್ರಕಾರ ಖಾಸಾ ಆದಿವಾಸಿ ಪ್ರೇರಣೆಯಾಗಿದೆ. ಆ ಪ್ರೇರಣೆಯಲ್ಲಿ ಆ ಮರವನ್ನು ಬೆಳೆಸುವ ಹೊಣೆಗಾರಿಕೆಯು ಆ ಕೊಂಬೆಯನ್ನು ದೂರ ಮಾಡುವ ಕೈಯದ್ದಾಗಿದೆ ಎಂಬ ಭಾವನೆಯು ಇರುತ್ತದೆ. ಉಳಿದ ಕಾರಣಗಳಿಂದಾಗಿ ವಿಘ್ನ ಒದಗಿಬಂದರೂ ಸಹ, ಆ ಕ್ಷಣವನ್ನು ಹೊರತುಪಡಿಸಿ ಆದಿವಾಸಿಯು ಸತತ ಈ ಉತ್ತರದಾಯಿತ್ವದ ಭಾವನೆಯಿಂದ ಮೈಮರೆತಿರುತ್ತಾನೆ. ಅವನ ಎಲ್ಲ ಪದ್ಧತಿ ಆಚರಣೆಗಳು ಇದರಿಂದಲೇ ನಿರ್ಮಾಣಗೊಂಡಿರುತ್ತದೆ. ಹೊಲದಲ್ಲಿ ಬೆಳೆದ ಮೊದಲ ತೆನೆಯನ್ನು ಮನೆಗೆ ತಂದು ಪೂಜೆ ಮಾಡಿದರೆ, ಅದರಲ್ಲಿಯ ಬೀಜವು ಭೂಮಿಯ ಬೀಜ ವ್ಯವಹಾರದಲ್ಲಿ ತಾಳಿಕೊಂಡು ಉಳಿಯುತ್ತದೆ. ಪೂರ್ವಜರಿಗೆ, ಪಿತೃಗಳಿಗೆ ಮಾರ್ಗಕ್ರಮಣಕ್ಕಾಗಿ ಕೊನೆಯ ಪಕ್ಷ ಮಣ್ಣಿನ ಕುದುರೆಯನ್ನು ಅರ್ಪಿಸಿದರೂ, ತಾರೆಗಳ ಲೋಕದಲ್ಲಿ ಅವರ ಪ್ರವಾಸವು ಸುಖಕರವಾಗಿ ಮುಂದುವರಿಯುತ್ತದೆ, ಹೊಲದ ಜಾಗವನ್ನು ಹಲವು ಸಲ ಬದಲಾಯಿಸುತ್ತ ಹೋದರೆ ಭೂಮಿಯ ಯಾತನೆಯು ಕಡಿಮೆಯಾಗುತ್ತದೆ – ಈ ಎಲ್ಲ ಬಗೆಯ ಯೋಚನೆಗಳು ಕೇವಲ ಆದಿವಾಸಿಗಳ ಮನದಲ್ಲಿ ಮಾತ್ರ ಮೂಡುತ್ತಿರುತ್ತದೆ.'

ನಗರವಾಸಿಗಳಿಗೆ ಆದಿವಾಸಿಗಳೊಂದಿಗೆ ಮಾತನಾಡುವಾಗ ಒಂದು ಅನುಭವ ಸದಾ ಬರುತ್ತ ಇರುತ್ತದೆ. ಅವರು ತಾವಾಗಿಯೇ ಹೆಚ್ಚು ಪ್ರಶ್ನೆಗಳನ್ನು ಕೇಳುವದಿಲ್ಲ. ಸಂಭಾಷಣೆ ಮುಗಿದ ಬಳಿಕ ಅವರು ಈ ಸಂಭಾಷಣೆಯ ಆವರ್ತನದಿಂದ ಅವರು ಕ್ಷಣಾರ್ಧದೊಳಗೆ ನಿರ್ಲಿಪ್ತರಾಗುತ್ತಾರೆ. ಅವರ ಸ್ಮೃತಿಯು ಶಾಶ್ವತವಾಗಿರುತ್ತದೆ. ಹಲವು ದಶಕಗಳ ನಂತರವೂ ಸಹ ಅವರು ಈ ಘಟನಾ ಕ್ರಮವನ್ನು ಸರಿಯಾಗಿ ನಿವೇದನೆ ಮಾಡುತ್ತಾರೆ. ಆದರೂ ಆ ಘಟನೆಯು ಅವರ ಸ್ಮೃತಿಪಟಲದಲ್ಲಿ ಸ್ಥಿರವಾಗಿ ಉಳಿದಂತೆ ಕಾಣುವದಿಲ್ಲ.

ನನಗೆ ಅನಿಸುವದೇನೆಂದರೆ, ಆದಿವಾಸಿಗಳು ತಮ್ಮ ಚರಿತ್ರೆಯ ನಿರ್ಮಾಪಕರು ಎಂದು ಭಾವಿಸಿದಂತಿಲ್ಲ. ಅವರ ದೃಷ್ಟಿಯಲ್ಲಿ 'ಚರಿತ್ರೆ'ಯು ಬೇರೆ ಯಾವುದೋ ಶಕ್ತಿಯಿಂದ ನಡೆಯುವ ಕ್ರಮವಾಗಿರಬೇಕು. ಹೀಗಾಗಿ ಚಾರಿತ್ರಿಕ ದ್ವೇಷದಿಂದ ಆದಿವಾಸಿಯು ಹೊತ್ತಿ ಉರಿಯುವದನ್ನು ಕಾಣಲಾರೆವು. ಆದರೆ ಆ 'ಬೇರೊಂದು ಶಕ್ತಿಯೊಂದಿಗೆ ಅವರು ನಿಕಟ ಸಂಬಂಧವನ್ನು ಹೊಂದಿರುತ್ತಾರೆ. ಆ ಶಕ್ತಿಯು ನಿರ್ಮಿಸಿದ ಪ್ರತಿಯೊಂದು ನಿರ್ಮಿತಿಯ ಸಂರಕ್ಷಣೆ ಮಾಡುವ ಹೊಣೆಗಾರಿಕೆಯನ್ನು ಪ್ರತಿಯೊಬ್ಬ ಆದಿವಾಸಿಯು ಹೊತ್ತಿರುತ್ತಾನೆ.'

ಆದಿವಾಸಿಯು ಸ್ವಂತದ ಭೂತಕಾಲದ ಬಗ್ಗೆ ಅಷ್ಟೊಂದು ಮಾತನಾಡುವದಿಲ್ಲ, ಸ್ವಂತ ಕ್ರಿಯಾಶಕ್ತಿಯ ಬಗೆಗೂ ಜಂಭ ಕೊಚ್ಚಿಕೊಳ್ಳುವದಿಲ್ಲ. ಅವನಿಗೆ ಕುಲದ ಬಗೆಗೆ ಗೌರವ ಇರುತ್ತದೆ. ಆದರೆ ಈ 'ಕುಲಾಭಿಮಾನ'ವು ಉಗ್ರ ಸ್ವರೂಪದಲ್ಲಿದ್ದಂತೆ ಕಾಣುವದಿಲ್ಲ. ಅವರ ಆದಿವಾಸಿಗಳ ಎಲ್ಲ ಇಂದ್ರಿಯಗಳು, ಇಂದ್ರಿಯಗಳಿಂದ ಸಿಗುವ ಜ್ಞಾನ ಮತ್ತು ಚಿತ್ತದಲ್ಲಿಯ ಎಲ್ಲ ಪ್ರೇರಣೆ ಮತ್ತು ಇಂಧನವು ಆ ಅನಾಮಿಕ 'ಬೇರೊಂದು ಶಕ್ತಿ'ಯ ನಿರ್ಮಿತಿ ಪ್ರಕ್ರಿಯೆಯ ಸೇವೆಯಲ್ಲಿ ಲಭಿಸಿರುತ್ತದೆ. ಆ ಪ್ರಕ್ರಿಯೆಯನ್ನು ಮುಂದುವರಿಸುವ ಪ್ರಯತ್ನ ಅವರದ್ದಾಗಿರುತ್ತದೆ. ಅವರ ಜೀವನವು ಉದ್ದೇಶಪೂರ್ವಕವಾಗಿ ಸಾಗುವದಿಲ್ಲ. ಹಾಗೆ ಬದುಕುವದೂ ಇಲ್ಲ. ಏಕೆಂದರೆ ಅವರು ಉತ್ತರದಾಯಿತ್ವದ ಪ್ರೇರಣೆಯನ್ನು ಸಂಭಾಳಿಸುತ್ತಾರೆ. ರಿವಾಜಿನ ಗೋಜಲಿನಿಂದ ಆದಿವಾಸಿಗಳ ಪರಂಪರೆಯ ಪರಿಕಲ್ಪನೆಯನ್ನು ಮಂಡಿಸುವದಾದರೆ, ಚರಿತ್ರೆಯ ಆಚೆಗಿರುವ ಅಪಾರ ಶಕ್ತಿಯೊಂದಿಗೆ ಸಮರಸವಾಗುವದೇ ಅವರ ನಿಜವಾದ ಪರಂಪರೆ ಎಂದು ಹೇಳಬೇಕಾಗುತ್ತದೆ.

*(ಇದು ಗಣೇಶ್ ದೇವಿಯವರ 'ವಾನಪ್ರಸ್ಥ' ಕೃತಿಯ ಮೂರನೆಯ ಅಧ್ಯಾಯ. ಈ ಕೃತಿಯ ಪೂರ್ತಿ ಕನ್ನಡಾನುವಾದ ಸದ್ಯದಲ್ಲೇ ನವಕರ್ನಾಟಕ ಪ್ರಕಾಶನದಿಂದ ಪ್ರಕಟವಾಗಲಿದೆ.)*

ಮರಾಠಿ ಮೂಲ : **ಗಣೇಶ್ ದೇವಿ**
ಕನ್ನಡಕ್ಕೆ : **ಚಂದ್ರಕಾಂತ ಪೋಕಳೆ**
ನಂ. ೩೫೯, ಸ್ಕೀಮ್ ನಂ.೪೦, ೩ನೇ ಹಂತ, ೪ನೇ ಅಡ್ಡರಸ್ತೆ
ಹನುಮಾನ್ ನಗರ, ಬೆಳಗಾವಿ







# ಜಾನಪದರಲ್ಲಿ ವಿನೋದಪ್ರಜ್ಞೆ

**ಜಾ**ನಪದ ಎಂಬ ಸಾಗರದಲ್ಲಿ ಕಣ್ಣಾಡಿಸಿದಾಗ ಮುತ್ತು-ರತ್ನಗಳಿಂದ ತುಂಬಿದ್ದ ದೇಶಿ ಇತಿಹಾಸದ ನೌಕೆಗಳು ಬಹಳಷ್ಟು ಮುಳುಗಿಹೋಗುತ್ತಲಿವೆ. ಈ ಮೊದಲು ಶಿಷ್ಟಕ್ಕೆ ಸೀಮಿತವಾಗಿದ್ದ ನಾವು ಈಗ ಕಣ್ತೆರೆದು ಅರೆಶಿಷ್ಟ ಜಾನಪದ ಶೋಧಗಳತ್ತ ಗಮನ ಹರಿಸಿದ್ದರ ಫಲವಾಗಿ ಅನೇಕಾನೇಕ ವೈಶಿಷ್ಟ್ಯಗಳು ತೇಲಿ ಬಂದು ಜಾನಪದ ಸಂಸ್ಕೃತಿಯ ಶೋಧ ಅಸೀಮವಾದುದು ಎಂಬುದಕ್ಕೆ ಸಾಕ್ಷಿಯಾಗುತ್ತಲಿವೆ. ಕಥೆ, ಒಡಪು, ಒಗಟು, ಒಡಬು, ಆಚರಣೆ, ಉತ್ಸವ, ಜಾತ್ರೆ, ನಂಬಿಕೆ, ಗಾದೆ, ವಿನೋದ ಎಲ್ಲೆಂದರಲ್ಲಿ ಜಾನಪದ ತನ್ನ ಬಾಹುಗಳನ್ನು ಚಾಚಿದೆ. "ಜನಪದರಲ್ಲಿ ವಿನೋದ ಪ್ರಜ್ಞೆ"ಯನ್ನು ಅವರ ಬದುಕಿನ ಪ್ರತಿ ಸಂದರ್ಭಗಳಲ್ಲಿ ಗುರ್ತಿಸಬಹುದಾಗಿದೆ.

ದಿನನಿತ್ಯದ ಬದುಕಿನಲ್ಲಿ ಗಾದೆ ಊಟದಲ್ಲಿ ಉಪ್ಪಿನಕಾಯಿಯಂತೆ ಸಹಜವಾಗಿ ಬಳಸಲ್ಪಟ್ಟಿದೆ. ಅವುಗಳಲ್ಲಿಯ ಶಬ್ದಗಳ ಬಳಕೆ, ಸಂದರ್ಭಾನುಸಾರ ಹೇಳಿದ ಮಾತುಗಳನ್ನು ನಾವು ಇಲ್ಲಿ ಗಮನಿಸಬಹುದು. 'ನೆಚ್ಚಿದ ಎಮ್ಮಿ ಕ್ವಾಣ ಇತ್ತು', 'ಗೋಧಿದು ರೊಟ್ಟಿ ಹೆರತಿದ್ದು ತುಪ್ಪಾ', 'ಅಮ್ಮಗ ಮೊಮ್ಮಗಳು ಕೆಮ್ಮುದು ಕಲಸ್ತಿದ್ದಳಂತ', 'ನೆನಸೋಟಲೆ ತೊನಶ್ಯಾಳಗೌಡ ಬಂದ', 'ಶಿವಪೂಜಾದಾಗ ಕರಡಿ ಬಿಟ್ಟಂಗ' ಹೀಗೆ ಇವುಗಳ ಸಾಲು ಮುಂದುವರಿಯುತ್ತಲೇ ಇದೆ. ಇಂತಹ ಗಾದೆಗಳಿಗೆ ಕೊನೆಯೆಂಬುದೇ ಇಲ್ಲ. ಇವುಗಳನ್ನು ಗಮನಿಸಿದಾಗ ಹಾಸ್ಯ ತನ್ನಿಂದ ತಾನೇ ಉದ್ಭವವಾಗುತ್ತದೆ. ಆದರೆ ಇಂತಹ ಕೆಲ ಗಾದೆಗಳ ಅಂತರಂಗವೇ ಬೇರೆ. ಆ ಮಾತು ಇಲ್ಲಿ ಬೇಡ. ಕಾರಣ ಅವುಗಳನ್ನು ಸಹಜ ಸಂದರ್ಭಾನುಸಾರವಾಗಿ ನುಡಿದಾಗ ಹಾಸ್ಯಪ್ರಜ್ಞೆ ಜಾಗೃತವಾಗುತ್ತಿದೆ. ಅವರ ಬದುಕಿನ ಬಹುಮುಖ್ಯ ಕಾಯಕ ಕೃಷಿ. ಕೃಷಿಯ ಬಗ್ಗೆ ಅಲಕ್ಷ್ಯ ಮಾಡುವಂತಿಲ್ಲ. 'ಗುದ್ಲಿ ಜೋಡಿ ಗುದ್ಯಾಡ್ವಂಗ ಊರ ತುಂಬ ದೌಳತನ' ಈ ಗುದ್ಲಿ ರೈತನಿಗೆ, ಕೂಲಿಕಾರನಿಗೆ ಬಹಳ ಮುಖ್ಯವಾದ ಕೃಷಿಯ ಪರಿಕರ. ಮೇಲೆ ನೋಡಲು ಇದೊಂದು ಗಾದೆ ಎನಿಸಿದರೂ ಇಲ್ಲಿ ಅಪಾರವಾದ ಜಾನಪದ ಪ್ರಜ್ಞೆ ಇದೆ ಮತ್ತು ಕಾಯಕದ ಬಗ್ಗೆ ಜನಪದರು ಇಟ್ಟುಕೊಂಡ ಗೌರವ ಮೆಚ್ಚುವಂಥದ್ದು. 'ಆದ್ರ ಉತ್ರಿ ಆಗದಿದ್ರ ಅತ್ರಿ' 'ಆದ್ರ ಹಸ್ತ ಆಗದಿದ್ರ ಹಲ್ಲ ಕಿಸ್ತ', 'ಸಾತಿ ಮಳಿ ಹೇತೆನಂದ್ರ ಬಿಡಾಂಗಿಲ್ಲ', 'ವಿಶಾಖಾ ಮಳಿ ಹತ್ತಿದ್ರ ಪೀಸಾಚಿ ಹಿಡಿದಂಗ' – ಮಳೆ ಕುರಿತಾದ ಇಂತಹ ಹಲವು ಜಾನಪದ ಗಾದೆಗಳಲ್ಲಿ ನಾವೂ ಜಾನಪದರ ವಿನೋದಪ್ರಜ್ಞೆಯನ್ನು ಗಮನಿಸಬಹುದಾಗಿದೆ.

ಮಕ್ಕಳ ಹಾಡುಗಳಲ್ಲಿ ಜಾನಪದರು ಅನೇಕ ತರಹದ ಹಾಸ್ಯಭರಿತ ನುಡಿಗಟ್ಟುಗಳನ್ನು ಕಟ್ಟಿಕೊಟ್ಟಿದ್ದಾರೆ. ಅವರು ಅವುಗಳನ್ನು ಹಾಸ್ಯಭರಿತವಾಗಿ ಹೇಳಬೇಕೆಂದೇನೂ ಹೇಳಲಿಲ್ಲ. ಅವು ಮಕ್ಕಳು ಆಡುವಾಗ, ಹಾಡುವಾಗ, ಕಲಿಯುವಾಗ, ನಲಿಯುವಾಗ ಸಹಜವಾಗಿ ಜನ್ಮತಳೆದವುಗಳಾಗಿವೆ ಮತ್ತು ಅವುಗಳಲ್ಲಿ ಒಂದೊಂದು ಉದ್ದೇಶ ಅಡಗಿದ್ದನ್ನು ಈ ಕೆಳಗಿನವುಗಳಲ್ಲಿ ಕಾಣಬಹುದು :

*ಸುಸಲಿಯ ಗಂಡ ಕರಿಲಾಕ ಬಂದ*
*ಫೇಫೇ ಅಂದ್ಮ ಪೇಢೆ ತಂದಾ.*
*ಝುಂ ಝುಂ ಅಂದ್ಮ ಝುಮಕಿ ತಂದಾ*
*ಒಲ್ಲೆ ಒಲ್ಲೆ ಅಂದ್ಮ ಒಣಕಿ ತಂದಾ...*

– ಮಕ್ಕಳಿಗೆ ಈ ಹಾಡು ರಂಜನೆಯನ್ನು ನೀಡಿದರೂ ಇದರ ಒಳ ಉದ್ದೇಶ ಮದುವೆಯಾಗಿ ಮೈನೆರೆದ ಹೆಣ್ಣುಮಗಳು ಗಂಡನ ಮನೆಯಲ್ಲೇ ಇರಬೇಕು, ರಸ್ತೆಯಲ್ಲಿ ಮಕ್ಕಳಂತೆ ಆಡಿಕೊಂಡಿರಬಾರದು ಎಂಬುದು. ಹೀಗೆಯೇ :

*ಎವ್ವಾ ಎವ್ವಾ ಗೆಣಸ*
*ಕುಳ್ಯಾಗ ಹಾಕಿ ಕುದುಸ...*
*ಯವ್ವಾ ಕರಿಯಾಕ ಬರತಾರ*
*ಇಲ್ಲಾ ಕಳಸಲ್ಲ ಅನ್ನವ್ವ ...*

– ಮುಂತಾದವು ಜನಪದರಲ್ಲಿ ಸಾಮಾನ್ಯ.

ಗಂಡ-ಹೆಂಡತಿಯರು ಹೆಸರುಗಳನ್ನು ಪರಸ್ಪರರು ಒಡಪು ಹಾಕಿ ಹೇಳುವಾಗ ಜಾನಪದರ ವಿನೋದಪ್ರಜ್ಞೆ ಅಪಾರವಾಗಿ ಎದ್ದು ಕಾಣುತ್ತದೆ. ಅದು ಅವರ ಬದುಕಿನ ಹತ್ತು ಹಲವು ವಿಚಾರಗಳನ್ನು ಪ್ರಚುರಪಡಿಸುತ್ತದೆ. 'ಬೆಕ್ಕಬತ್ತ ಉಷಾ ಗಂಡನ ಹೆಸರ ಬಸ್ಯಾ', 'ನಾ ಕುತ್ತಿನಿ ರೊಟ್ಟಿಗಿ ಐನೂರ ಬಂದಾರ ಹಿಟ್ಟಿಗಿ ಸಿದ್ದಪ್ಪ ಬಂದಾನ ಸಿಟ್ಟಿಗಿ', 'ನತ್ತ ಬಿತ್ತು ಲಟಕ್ಕ ಮುದ್ದು ಕೊಟ್ಟ ಪಟಕ್ಕ', 'ಹಗ್ಗಲೆ ಹೊಡದ್ರ ಮಗ್ಗಲ ಬರತಾಳ ಬಸಿ', 'ಅಮಾಸಿ ಕತ್ತಲಿ ಗೋಧಿ ಬಿತ್ತಲಿ ನನ್ನ ಗಂಡನ ಹೆಸರ ಕೇಳುವ್ರ ಹೆಣಾ ಎತ್ತಲಿ' – ಬಾಲಂಗೋಚಿಯಂತೆ ಇಂತಹ ನಗೆ ಬರಿಸುವ ಒಡಪುಗಳು ಇಲ್ಲಿ ಹಿಡಿಹಿಡಿಗೆಯಾಗಿ ಸಿಗುತ್ತವೆ. ಇವುಗಳನ್ನು ಹೇಳಿದಾಗ ಹೇಳಿದವರು ನಗುವುದಿಲ್ಲ. ಅಲ್ಲಿರುವ ಜನಸಮೂಹ ಒಡಪಿನ ಅಂತರಾಳವನ್ನು ಅರಿತು ಗಂಡ-ಹೆಂಡಿರ ಸಂಬಂಧ ನೆನಸಿಕೊಂಡು ತುಟಿಯಂಚಿನಲ್ಲಿ ಮತ್ತೆ ಮತ್ತೆ ಹಾಸ್ಯಪ್ರಜ್ಞೆಯನ್ನು ಅನುಭವಿಸುತ್ತಾರೆ.

'ಆಸತ್ತು ಬ್ಯಾಸತ್ತು ಅಕ್ಕನ ಮನಿಗಿ ಬಂದ್ರ ಅಕ್ಕನ ಗಂಡ ಅವುಂಕ ಅಂದ್ನಂತ', 'ಸುಭನುಡಿಯ ಸುಬ್ಬಕ್ಕ ಅಂದ್ರ ಕೈ ಬಿಡ ಮಾಮಾ ಹೊಯಕೋತಿನಿ ಅಂದ್ಳಂತ', 'ಇಜಾಪೂರದಾಗ ಇಜಾರದವರು ಹಜಾರ ಮಂದಿ ಸೋಲ್ಲಾಪುರದಾಗ ಶೆಲ್ಲೇದವರು ಸಾವಿರ ಮಂದಿ', 'ಕದ್ದು ಹೋಳಿಗಿ ಕೊಟ್ರ ಹೊಯಕೊಂಡು ತಿಂದ್ರಂತ'. 'ಪುಗಶೆಟ್ಟೆ ಪುತಾಣಿ ಅಂದ್ರ ಇನ್ನೊಬ್ಬ ಅದಾನ' ಹೀಗೆ ಶಬ್ದಗಳನ್ನು ಸನ್ನಿವೇಶಗಳನ್ನು ಸಂದರ್ಭಗಳನ್ನು ಜನಪದರು ಅಗಾಧವಾಗಿ ಬಳಸಿಕೊಂಡರು. ಮತ್ತು ಬದುಕನ್ನು ಬಹಳ ಸುಮಧುರವಾಗಿ ಅನುಭವಿಸಿದರು. ಅವರ ಅಪಾರವಾದ ಅನುಭವದ ಖಜಾನೆಯಿಂದ ಬಂದಂತ ಸಾಂದರ್ಭಿಕ ಉಕ್ತಿಗಳು ಇವು.

'ಕಿತ್ತೂರ ಕಿಲ್ಲೇದ ಮ್ಯಾಗ ಹತ್ತರಕಿ ಪಲ್ಲೆ ಹುಟ್ಟೇದ ಕಿತ್ತರೂ ಬರಂಗಿಲ್ಲ ಸತ್ತರೂ ಬರಂಗಿಲ್ಲ', 'ನೀ ಏಟು ನಿನ್ನ ಬಂದೂಕೇಟು ನಿನ್ನ ಬಂದ್ಕೂಲೇ ಹೊಡದ್ರ ನನ್ನ ಬಬ್ಬಾಟ

**ಶಂಕರ ಬೈಚಬಾಳ**







ಏಟು', 'ಗಂಟ ಮಾರಿಯಾಕಿ ಎಂಟ ಮಲಿಯಾಕಿ ಎಮ್ಮಿಗನೂರ ಸಂತ್ಯಾಗ ಒದರಕೋತ ಬಂದ್ರ ಕುಂತ ಮಂದಿ ಎದ್ದನಿಂತ ಸರದ ಗೌರವ ಕೊಡತಾರ', 'ಹಸರ ಹಸರಾಣಿ ತುಂಬಿದ ತತ್ರಾಣಿ ಹೆಸರ ಹೇಳದಿದ್ರ ನಿಮ್ಮಪ್ಪರಾಣಿ' – ಈ ಒಗಟುಗಳ ಅರ್ಥ ಕ್ರಮವಾಗಿ ಹಚ್ಚೆ, ಚೇಳು, ಹಂದಿ ತತ್ರಾಣಿ ಎಂಬುದಾಗಿದೆ. ಆದರೆ ಈಗಿನ ಜನರಿಗೆ ಇವು ಸ್ವಲ್ಪಮಟ್ಟಿನ ಕಬ್ಬಿಣದ ಕಡಲೆ ಇದ್ದ ಹಾಗೆ. ಇವುಗಳಲ್ಲಿರುವ ವಿನೋದಪ್ರಜ್ಞೆಯನ್ನು ನಾವು ಹುಡುಕಬೇಕಾಗಿಲ್ಲ. ಇವುಗಳಿಗೆ ಒಳ ಅರ್ಥ ಕಲ್ಪಿಸಿ ಶಬ್ದಗಳನ್ನು ಅವರು ಹೆಣೆದು ಅಲ್ಲಿ ಹಾಸ್ಯಪ್ರಜ್ಞೆಯನ್ನು ಮೆರೆದವರು. ಹಾಸ್ಯಪ್ರಧಾನವಾದ ಇಂತಹ ಒಡಪುಗಳದ್ದೆ ಒಂದು ಪರಂಪರೆ ಜನಪದರ ಬದುಕಿನಲ್ಲಿತ್ತು. ಒಳ ಅರ್ಥ ಒಡೆದು ಹೇಳುವ ಗಂಡಸು ಯಾರು, ಎಂದು ಆಗಾಗ ಸವಾಲು-ಜವಾಬಿನ ಹಾಗೆ ಹಳ್ಳಿಕಟ್ಟೆಯಲ್ಲಿ ಒಡಪಿನ ಕಾರ್ಯಕ್ರಮಗಳು ನಡೆಯುತ್ತಿದ್ದವು.

✶ *ಸುವ್ವಿ ಬಾ ಚನ್ನಯ್ಯ ಸುವ್ವಿ ಬಾ ಲಿಂಗಯ್ಯ*
*ಸುವ್ವಿ ಬಾ ಚನ್ನ ಬಸವಯ್ಯ ಸುವ್ವಿ* (ಸುವ್ವಿ ವಚನ)

✶ *ಭತ್ತಕಿ ನೆರಳಾಗ ಎತ್ತೆಮ್ಮಿ ಮಾರ್‍ಯಾವು ಕೇಳಿರಣ್ಣ ।*

✶ *ಅತ್ತಿಗಿ ಸೊಸಿ ಬಂದು ಕಾಲಿಲೆ ಒದ್ದಾಳು ನೋಡಿರಣ್ಣ ॥*

✶ *ಲೋಡಿಗಿ ಕುಳಿತವರು ಗ್ವಾಡಿಗೆ ಕುಳಿತಾರು ಕಾಣಿರಣ್ಣ* (ಸಾರುವ ಅಯ್ಯಗಳು)

"ಮೂರು ಹೊತ್ತಿದ ಹೋಳಿಗಿ ಮೂರುವರೆ ಚಮಚೆ ತುಪ್ಪಾ ಮೂರುವರೆ ಸಂವುಟ ಅನ್ನಾ ಉಂಡಹೋಗ್ಯಾನ" ಸಿದ್ದಪ್ಪ, ಅಲ್ಲೇನ ಹೇಳ್ರಿss ಮತ್ತಿನ್ನಾರ ಕೇಳ್ರಿ ? (ಸಾರುವ ಅಯ್ಯಗಳು)

– ಹೀಗೆ ಬದುಕಿನ ಪ್ರತಿ ಹಂತದಲ್ಲೂ ನಗೆಯ ಹರವು ಗೋಚರಿಸುತ್ತದೆ. ಪೂಜೆ-ಪುನಸ್ಕಾರ, ಭವಿಷ್ಯದ ಹೇಳಿಕೆ... ಹೀಗೆ ಎಲ್ಲೆಂದರಲ್ಲಿ ವಿನೋದಪ್ರಜ್ಞೆ ಥಾಳಾಗಿ ಕಾಣಸಿಗುತ್ತದೆ. ಮೇಲಿನ ಉಕ್ತಿಗಳು ಸಾರುವ ಅಯ್ಯಗಳ ಕಾಯಕದಲ್ಲಿ ಬರುವ ಮಾತುಗಳಾಗಿದ್ದರೂ ಅಲ್ಲಿ ಭವಿಷ್ಯದ ಬಗ್ಗೆ ಜನಪದರಿಗೆ ಮುಂಚಿತವಾಗಿ ಎಚ್ಚರಿಕೆಗಳನ್ನು ಕೊಡುವುದು ಕೂಡ ಅವರಿಗೆ ಅಷ್ಟೇ ಪ್ರಮುಖವಾಗಿತ್ತು.

ತ್ರಿಪದಿಗಳಲ್ಲಿ ಲಂಬಾಣಿ ಹಾಡುಗಳಲ್ಲಿ, ಗೊಂದಲಿಗರ ಗೊಂದಲದಲ್ಲಿ, ತೊಗಲು ಬೊಂಬೆಯಾಟ, ಸಣ್ಣಾಟ, ದೊಡ್ಡಾಟ, ಎಲ್ಲೆಂದರಲ್ಲಿ ಈ ವಿನೋದಪ್ರಜ್ಞೆ ಜಗಜ್ಜಾಹೀರಾಗಿದೆ. ಕೃಷ್ಣಪಾರಿಜಾತದಲ್ಲಂತೂ ಅದರದ್ದೇ ಒಂದು ಪಾತ್ರ ಇರುತ್ತದೆ. ಇಲ್ಲಿ ಬರುವ ದೂತ ಪಾತ್ರವೇ ಹಾಸ್ಯಪ್ರಜ್ಞೆಯದ್ದು. ದೂತ ಬಂದರೆ ಏನಾದರೂ ಒಂದು ನಗೆಚಟಾಕಿಯನ್ನು ತರುತ್ತಾನೆ ಎಂದು ಪ್ರೇಕ್ಷಕರು ಕಾದು ಕುಳಿತಿರುತ್ತಿದ್ದರು. ದೂತ ಪಾತ್ರದಿಂದಲೇ ಎಷ್ಟೋ ಆಟಗಳ ಕಂಪನಿಗಳು ಜನಾನುರಾಗಿಯಾಗಿದ್ದುದನ್ನು ನಾವು ಇತಿಹಾಸಗಳಲ್ಲಿ ಗಮನಿಸಬಹುದಾಗಿದೆ. ಆ ಜನಪದರ ಹಾಸ್ಯಪ್ರಜ್ಞೆಯಲ್ಲಿ ಅಶ್ಲೀಲ ಪದಗಳ ಬಳಕೆಯಾಗಿದ್ದು ಬಹಳ ಕಡಿಮೆ. ಅಂತಹ ಪದಗಳ ಬಳಕೆ ಇಲ್ಲದೆ ಅದರೊಳಗೊಂದು ಸಂದೇಶವನ್ನು ಕೊಟ್ಟು ಅಲ್ಲಿದ್ದ ಸಮೂಹವನ್ನು ಹಾಸ್ಯದ ರಸಗಳಿಗೆಯಲ್ಲಿ ತೇಲಾಡಿಸುವ ರಸಿಕ ಗುಣ ಅವರದ್ದು.



*ಹಗಲೆಲ್ಲಾ ಹಾಡಿದರ ನುಚ್ಚಿನ ಪದಗೋಳು ॥*
*ಮಚ್ಚೀಲೆ ಒಗದೇನ ಮನಿಗೋಗು ॥ ನಿಮ್ಮಾಯಿ ॥*
*ನುಚ್ಚ ತೊಡ್ಯಾಳ ತಿನ್ನೊಗು ॥*

*ನಿಮ್ಮೂರ ಸವಕಾರ ದೊಡ್ಡ ಸರದಾರ ॥*
*ಗಾಡಿಯ ಮೇಲೆಲ್ಲಾ ಹತ್ತಿಯ ಗಂಟಂತೆ ॥ ಹೆಂಡತಿಯ ॥*
*ಮೈಮೇಲೆ ಬರಿ ಲಂಗೋಟಿಯಂತೆ ॥*

*ಮುದುಕ ಮುದುಕಿ ಕೂಡಿ ಮಸಿಮಾಳ ಜಾತ್ರಗೋಗಿ ॥*
*ಮುದುಕಿ ಬೇಡ್ಯಾಳ ಕುಲಾಯಿ ॥ ಆ ಮುದುಕ ॥*
*ಕಟಬಗರಿ ಕಂಡು ಅಳತಾನ ॥*

*ಚಿಕ್ಕಡು ಗುಂಗಾಡು ತಿಗಣಿ ನಿಬ್ಬಣಕೂಗಿ ॥*
*ಕೂರೇವ್ವ ಕಳಸ ಹಿಡಿದಾಳ ॥ ಇಣಚೆವ್ವ ॥*
*ಹಾರಾಡಿ ಡೊಳ್ಳ ಬಡಿತಾಳ ॥*

– ವಿನೋದಪ್ರಜ್ಞೆಯನ್ನಿಟ್ಟುಕೊಂಡೆ ಜನಪದರು ಇಂತಹ ಅನೇಕ ತ್ರಿಪದಿಗಳನ್ನು ಉಸಿರಿದ್ದರೇನೋ ? ಅವು ಸಂದರ್ಭಕ್ಕನುಸಾರವಾಗಿ ಒಬ್ಬರ ಬಾಯಿಂದ ಒಬ್ಬರಿಗೆ ಉಳಿದುಬಂದಿವೆ. ಪ್ರದೇಶಗಳಿಗನುಗುಣವಾಗಿ ಕೆಲ ಸಣ್ಣಪುಟ್ಟ ಪದಗಳನ್ನು ಅಲ್ಲಿ ಅವರು ಬದಲಾಯಿಸಿಕೊಂಡರು. ಅವು ಅವರು ನಂಬಿಕೊಂಡ ಸ್ಥಳ, ದೇವರು, ದೈವಗಳನ್ನು ಅವಲಂಬಿಸಿ ಬದಲಾದದ್ದು ಕಂಡುಬಂದಿದೆ. 'ಮಂಗಳ ಕಾರ್ಯಕ್ಕೆ ಗೊಂಗಡಿ ಈಜಾಕಬೇಕು ಸಿಂಗಡಿ ದಿನಸೀಗೆ ಬೇಕು ಅಂಗಡಿ', 'ವಸ್ತ ಅಲ್ಲ ಬುಗುಡಿ ಜಡ್ಡ ಅಲ್ಲ ನೆಗಡಿ ಹೆಂಗ್ಸ ಅಲ್ಲ ಸುಗಡಿ' – ಇಂಥವುಗಳು ಆಧುನಿಕ ಜನಪದರ ಹಾಸ್ಯಪ್ರಜ್ಞೆಗೆ ಉದಾಹರಣೆಗಳು. ಆಧುನಿಕತೆ ಬೆಳೆದಂತೆ ಜನಪದರ ಹಾಸ್ಯಪ್ರಜ್ಞೆಯಲ್ಲೂ ಸ್ವಲ್ಪಮಟ್ಟಿನ ಬದಲಾವಣೆಯನ್ನು ಗಮನಿಸಬಹುದು.

ಕೃಷಿಯೇ ಜನಪದರಿಗೊಂದು ಸಂಸ್ಕೃತಿಯಾಗಿತ್ತು. ಈ ಕೃಷಿ ಈಗ 'ಅಗ್ರಿಕಲ್ಚರ್' ಎಂದು ಇಂಗ್ಲಿಷ್‌ಮಯವಾಗಿದೆ. ಇದರಲ್ಲಿ ಒಂದು ಪದ 'ಅಗ್ರಿ' ಮತ್ತೊಂದು ಪದ 'ಕಲ್ಚರ್'. 'ಅಗ್ರಿ ಅಂದರೆ ಕೃಷಿ, ಕಲ್ಚರ್ ಎಂದರೆ ಸಂಸ್ಕೃತಿ' ಅದಕ್ಕಾಗಿ ಅಗ್ರಿಯೇ ಬೇರೆ, ಸಂಸ್ಕೃತಿಯೇ ಬೇರೆ ಎರಡೂ ವಿಮುಖವಾಗಿ ಹಾಸ್ಯಪ್ರಜ್ಞೆಗೆ ಸ್ವಲ್ಪ ಅಡೆತಡೆಯಾಗಿದೆ. ಆದರೆ...! ಕೃಷಿಯ ನಂಬಿದ ಜನಪದರ ವಿನೋದಪ್ರಜ್ಞೆ ಅವರ ಬದುಕಿನ ಪ್ರತೀ ಕ್ಷಣ ಕ್ಷಣದಲ್ಲೂ ಗೋಚರವಾಗಿ ಸಂಬಂಧಗಳನ್ನು ಮನಸ್ಸುಗಳನ್ನು ಕಟ್ಟುತ್ತಾ ಬಾಂಧವ್ಯ ಬೆಸೆದದ್ದು ಜನಪದರ ಹೆಚ್ಚುಗಾರಿಕೆಯಾಗಿದೆ.

**ಶಂಕರ ಬೈಚಬಾಳ**
'ವಚನ', ರಾಜಾಜಿನಗರ
ವಿಜಯಪುರ – ೫೮೬ ೧೦೯

# ಜಾತಿ ಸಮಾಜ; ಒಳ ಮೀಸಲಾತಿಯ ಪ್ರಶ್ನೆಗಳು

**ಜಾ**ತಿ-ಮೀಸಲಾತಿಯ ಪ್ರಶ್ನೆ ಬಂದಾಗಲೆಲ್ಲಾ ಜೋರುದನಿಯಲ್ಲಿ ವಿರೋಧವೂ ವ್ಯಕ್ತವಾಗುತ್ತಿರುವ ಈ ಹೊತ್ತಿನಲ್ಲಿ ಮೀಸಲಾತಿ ಇಲ್ಲದೇ ಹೋಗಿದ್ದರೆ ಸಂಸತ್ತಿನಲ್ಲಿ ಅನೇಕ ಜಾತಿಗಳನ್ನು ಪ್ರತಿನಿಧಿಸುವ ವ್ಯಕ್ತಿಗಳು ಇರಲು ಸಾಧ್ಯವಾಗುತ್ತಿರಲಿಲ್ಲ. ಅಲ್ಲದೆ, ಶಾಲಾ ಕಾಲೇಜುಗಳಲ್ಲಿ ಎಲ್ಲಾ ಜಾತಿಯ ಮೇಷ್ಟ್ರುಗಳು ಮತ್ತು ವಿದ್ಯಾರ್ಥಿಗಳು ಇರಲು ಸಾಧ್ಯವಾಗುತ್ತಿರಲಿಲ್ಲ. ಹೀಗೆ ಇರೋದರಿಂದ ಏನಾಗುತ್ತಿದೆ ಅಂದ್ರೆ ಎಲ್ಲ ಜಾತಿಗಳು ತಮ್ಮ ತಮ್ಮ ಪಾಲನ್ನು ಕೇಳಲು, ಪಡೆಯಲು ಮತ್ತು ಸಬಲೀಕರಣಗೊಳ್ಳಲು ಸಾಧ್ಯವಾಗುತ್ತದೆ. ಆದ್ದರಿಂದ ಮೀಸಲಾತಿ ಯಾಕೆ ಅತ್ಯಗತ್ಯ ಅಂದ್ರೆ ಎಲ್ಲರೂ ಬಾಳ ನಿರ್ಣಾಯಕ ಸ್ಥಾನದಲ್ಲಿ, ಕಾನೂನನ್ನು ಜಾರಿಗೆ ತರುವ, ನಿರ್ಣಯಿಸುವ, ಅದನ್ನು ಅನುಭವಿಸುವ ಜಾಗಗಳನ್ನು ಪ್ರತಿನಿಧಿಸುವಂತಾಗುತ್ತದೆ. ಇದೇ ಮೀಸಲಾತಿಯ ಬಹಳ ಮುಖ್ಯ ಉದ್ದೇಶ ಅಂತ ನಾನು ನಂಬಿದ್ದೇನೆ. ಈವರೆಗೆ ಭಾರತದಲ್ಲಿ ಅತಿ ಹೆಚ್ಚು ಚರ್ಚೆಯಾಗುತ್ತಿರುವ ವಿಷಯಗಳಲ್ಲಿ ಮೀಸಲಾತಿಯೂ ಒಂದು. ಮೀಸಲಾತಿಯನ್ನು ಸಾಮಾನ್ಯವಾಗಿ ಇಂತಹ ಸಭೆಗಳಲ್ಲಿ, ಉದಾಹರಣೆಗೆ ಇವತ್ತು ನಾವು ಅಂಬೇಡ್ಕರ್ ಜಯಂತಿ ಮಾಡುವಾಗಲೂ ಅಥವಾ ಪ್ರೊ॥ ಬಿ. ಕೃಷ್ಣಪ್ಪನವರ ಜನ್ಮದಿನವನ್ನು ಮಾಡುತ್ತಿದ್ದೇವೆ. ಇಂತಹ ಸಂದರ್ಭದಲ್ಲಿ ಎಲ್ಲಾ ಜಾತಿಗಳು ಇದ್ದಾಗಲೂ ಎಸ್ಸಿ/ಎಸ್ಟಿಗಳಿಗೆ ಯಾಕಿಷ್ಟು ಮೀಸಲಾತಿ ಅಂತಲೋ, ಇನ್ಯಾವದೇ ಸಭೆ ಸಮಾರಂಭ, ಮದುವೆ ಮುಂತಾದ ಕಡೆ ಸೇರಿಕೊಂಡಾಗಲೂ ಬಹಳ ಎಚ್ಚರದ ಪ್ರಜ್ಞೆ ಇರುವವರಿಂದಲೇ ಮೀಸಲಾತಿಯ ಬಗ್ಗೆ ಬಹಳಷ್ಟು ಚರ್ಚೆಗಳು ನಡೆಯುತ್ತವಲ್ಲ, ಯಾಕೆ? ಸಾಮಾನ್ಯವಾಗಿ ಈ ತರಹದ ಚರ್ಚೆಗಳನ್ನು ನಾವು ಗ್ರಹಿಸುವಾಗ ಅದು ಬಿಡಿಸಲಾಗದ ಒಗಟೋ ಅಥವಾ ಅಣುವಿನ ರಚನೆಯಲ್ಲಿರುವ ಪ್ರೋಟಾನ್-ನ್ಯೂಟ್ರಾನ್ ಮುಂತಾದವುಗಳನ್ನು ಹೇಗೆ ಬಿಡಿಸಿ ಬಿಡಿಸಿ, ಮೈಕ್ರೋ ಮಾಡಿ ನೋಡ್ತೇವೊ ಹಾಗೆ ಜಾತಿಯ ಒಳ ರಚನೆಯನ್ನು ಬಿಡಿಸಿ ಬಿಡಿಸಿ, ನೋಡಬೇಕಾಗಿದೆ.

ಬ್ರಿಟಿಷ್ ಸರ್ಕಾರವು ಇಲ್ಲಿ ಜಾತಿ ಜನಗಣತಿಯನ್ನು ಮೊದಲ ಬಾರಿಗೆ ಮಾಡಿದಾಗ ಪಂಜಾಬ್ ಒಂದರಲ್ಲೇ ೧೦,೮೦೦ ಜಾತಿಗಳನ್ನು ನೋಡಿ ಬ್ರಿಟಿಷ್ ಜನಗಣತಿಕಾರರು ಆಘಾತಕ್ಕೊಳಗಾದರು. ಪಂಜಾಬ್‌ನಂತಹ ಒಂದು ಸಣ್ಣ ಪ್ರಾಂತ್ಯದಲ್ಲಿ ಇಷ್ಟು ಪ್ರಮಾಣದ ಜಾತಿ ಒಳರಚನೆಗಳು ಇರುವುದು ಹೇಗೆ ಸಾಧ್ಯ ಅಂತ ಅವರೆಲ್ಲ ದಂಗಾಗಿ ಹೋಗುತ್ತಾರೆ. ಅಂದರೆ ಜಾತಿಗಳು ಯಾಕಿಷ್ಟು ವಿಭಜನೆಗೊಂಡಿವೆ, ಸಾವಿರ ಸಾವಿರ ಸಂಖ್ಯೆಗಳಲ್ಲಿ ತುಂಡು ತುಂಡಾಗಿವೆ, ಅಂತ ಹೇಳುವುದಕ್ಕೆ ಬೇರೆ ಬೇರೆ ಊಹಾಪೋಹ ಸಿದ್ಧಾಂತಗಳು ಈಗಾಗಲೇ ಭಾರತದಲ್ಲಿ ಮಂಡಿತಗೊಂಡಿದ್ದರೂ ಸಹ ಒಂದು ಒಪ್ಪಿತವಾಗುವ, ಒಪ್ಪಿತವಾಗಬಹುದಾದ ಜಾತಿ ಕುರಿತ ಸಿದ್ಧಾಂತವೊಂದು ಇನ್ನೂ ಮಂಡಿತವಾಗಿಲ್ಲ. ಆಮೇಲೆ ಜಾತಿಯನ್ನು ವಿವರಿಸಿಕೊಳ್ಳುವಾಗ ಬೇರೆ ಬೇರೆ ಥರ ವಿವರಿಸಿಕೊಳ್ಳಲಾಗಿದೆ.

ಜಾತಿ ಅಂದ್ರೇನು ? ಅದು ಒಂದು ಒಳಬಾಂಧವ್ಯದ ವ್ಯವಸ್ಥೆ, ಅವರವರ ಜಾತಿಯೊಡನೆ ಮದುವೆಯಾಗುವ ಸರಳತೆ ಅಂತ ಕೆಲವು ಸಿದ್ಧಾಂತಗಳಿದ್ದರೆ ಮತ್ತೊಂದು ಒಬ್ಬ ವ್ಯಕ್ತಿ ಸ್ವಚ್ಛಂದವಾಗಿ ಬೇರೆ ಕಡೆ ಚಲಿಸಲಾಗದಂತೆ, ಆತನ ಸ್ಥಾನಮಾನವನ್ನು ಯಾವತ್ತೂ ಬದಲಾಯಿಸಿಕೊಳ್ಳದಂತೆ ಆತನನ್ನು ಫಿಕ್ಸ್ ಮಾಡಿರುವ ಒಂದು ಬಿಗಿಯಾದ ವ್ಯವಸ್ಥೆಯೇ ಜಾತಿವ್ಯವಸ್ಥೆ ಅಂತಲೂ ಅಥವಾ ವ್ಯಕ್ತಿಯೊಬ್ಬನ ಹುಟ್ಟಿನಿಂದಲೇ ಸ್ಥಾನಮಾನಗಳನ್ನು ನಿರ್ಧರಿಸುವಂತಹ ವ್ಯವಸ್ಥೆಯೂ ಆಗಿದೆ ಅಂತ ಹೇಳ್ತಾರೆ. ಆದರೆ ಇವೆಲ್ಲವೂ ತುಂಬ ಟ್ರೆಡಿಷನಲ್ ಆದ ಡೆಫಿನಿಷನ್‌ಗಳು. ಅಂದ್ರೆ ಸಾಂಪ್ರದಾಯಿಕವಾಗಿ ಹೇಳಿಕೊಂಡು ಬಂದಿರುವ ಮಾದರಿ ಸಿದ್ಧಾಂತಗಳು. ಇವುಗಳಲ್ಲಿ ಕೆಲವು ಕೆಲವು ಕಡೆ ಅಪ್ಲೈ ಆಗಲೂಬಹುದು ಅಥವಾ ಆಗದೆಯೂ ಇರಬಹುದು. ಯಾಕಂದ್ರೆ ಅದರ ಅಪ್ಲಿಕೇಶನ್ ಆಫ್ ಕಾಂಟ್ರಾಸ್ಟ್ ಬಹಳ ಮುಖ್ಯ. ಅಂದ್ರೆ ಸಮಯ, ಸಂದರ್ಭ, ಸಾಮಾಜಿಕ ಹಿನ್ನೆಲೆ ಅಥವಾ ಅದನ್ನು ನಿರ್ವಹಿಸಬೇಕಾದ ಕ್ರಮ ಎಲ್ಲವೂ ಒಂದೇ ಆಗಿರಲ್ಲ. ಆದ್ದರಿಂದ ಜಾತಿ ಅಂದ್ರೆ ಏನು ಅಂತ ಒಂದು ವಾಕ್ಯದಲ್ಲಿ ನಿರ್ಧಾರಿತ ಅರ್ಥದಲ್ಲಿ ಹೇಳದೆ, ಅದನ್ನು ಕಾಲಕಾಲಕ್ಕೆ ವಿವರಿಸಿಕೊಳ್ಳಬೇಕಾಗಿರುವುದರಿಂದ ಅದನ್ನು ಡಿಸ್ಕೋರ್ಸ್ ಅಂತಲೇ ಹೇಳಬೇಕಾಗುತ್ತದೆ, ವಿವರಿಸಿಕೊಳ್ಳಬೇಕಾಗುತ್ತೆ. ಯಾಕಂದ್ರೆ ಕಾಲಕಾಲಕ್ಕೆ ಜಾತಿಯ ಅವತಾರಗಳು ಬದಲಾಗುತ್ತವೆ, ಅರ್ಥವೂ ಬದಲಾಗುತ್ತೆ. ಸಾಮಾಜಿಕ, ಆರ್ಥಿಕ ಸ್ಥಿತಿಗಳು ಬದಲಾದಂತೆ ಜಾತಿಗಳು ತಮ್ಮ ಗುಣಲಕ್ಷಣಗಳನ್ನು ಬದಲಾಯಿಸಿಕೊಳ್ಳುವುದರಿಂದ ಮತ್ತು ಜಾತಿಗಳ ಆಚರಣೆಯ ಸ್ವರೂಪವೂ ಬದಲಾಗುತ್ತದೆ. ಉದಾಹರಣೆಗೆ ಈಗ ಯಾರಾದರೂ ಹಿಂದುಳಿದವರನ್ನೋ, ದಲಿತರನ್ನೋ ಟಿ.ವಿ.ಯಲ್ಲಿ ಬೈತಾ ಇದ್ದಾರೆ ಅಂತಿಟ್ಕೊಳ್ಳಿ. ಈಗ ಜಾತಿ ಉದ್ದೇಶಿಸಿ ಬೈಯಕ್ಕಾಗಲ್ಲ, ಮೊದಲಾದ್ರೆ, ನೇರವಾಗಿ ಬೈತಿದ್ರು. ಆದ್ರೆ ಈಗ ಏನ್ ಮಾಡ್ತಾರೆ, ಮೀಸಲಾತಿಯನ್ನು ಬೈತಾರೆ, ಈಗ ಇಲ್ಲಿರುವ ಮುಸ್ಲಿಂರನ್ನು ಬೈಯಕ್ಕಾಗಲ್ಲ. ಆಗ ನೇರವಾಗಿ ಪಾಕಿಸ್ತಾನವನ್ನು ಗುರಿ ಮಾಡ್ತಾರೆ, ಪಾಕಿಸ್ತಾನವನ್ನು ರಾಜಕಾರಣದ ನೆಪದಲ್ಲಿ ಎಷ್ಟಾದ್ರೂ ಬೈಯಬಹುದಲ್ಲಾ; ಅದಕ್ಕೆ ಅವರು ಆ ಸಂಚು ಹೂಡ್ತಾರೆ, ಆದ್ರೆ ಅವರು ಬೈತಿರೋದು ಯಾರನ್ನ ? ನಮ್ಮ ಮುಸಲ್ಮಾರನ್ನ. ಇದು ಜಾತಿಗಳ, ಭ್ರಷ್ಟ ರಾಜಕಾರಣ. ಇನ್ನು, ದಲಿತರನ್ನ ಬೈಯಬೇಕಾದಾಗ ಮೆರಿಟ್ ವಿಚಾರವನ್ನು ಎತ್ಕೋತಾರೆ, ಅಂದ್ರೆ ಇಲ್ಲಿ ಜಾತಿಯನ್ನು ಅವರು ಎಲ್ಲರೆದ್ರು ಆಚರಿಸ್ತಾ ಇರ್ತಾರೆ. ಹಿಂದುಳಿದವರನ್ನ, ದಲಿತರನ್ನ, ಮುಸ್ಲಿಂರನ್ನ ಗುರಿಮಾಡಿಕೊಂಡು ಈ ಜಾತಿಗಳನ್ನು ಬೈತಾರೆ. ಆದರೆ ಅವರ ಬೈಗುಳದ ಭಾಷೆ ಬೇರೆಯೇ ಆಗಿರುತ್ತದೆ. ಆದ್ದರಿಂದ, ಈ ಜಾತಿವ್ಯವಸ್ಥೆ ಎನ್ನುವುದು ಕಣ್ಣಿಗೆ ಕಂಡೂ ಕಾಣದಂತೆ ಮುಸುಕಿನೊಳಗಿನ ಗುದ್ದಿನಂತೆ. ನಮ್ಮೆಲ್ಲರೊಡನೆ ಇದ್ದು ಜಾತಿ ಮೀರಿದವರಂತೆ ಕಂಡರೂ ಅದರ ಆಚರಣೆಯನ್ನು, ಭಾಷೆಯನ್ನು ನಿರಂತರವಾಗಿಟ್ಟು ಕೊಂಡಿರುತ್ತಾರೆ. ನಾವು ಶ-ಸ ಗಳನ್ನು ಸರಿಯಾಗಿ ಬಳಸುತ್ತಿಲ್ಲವೆಂದು ಹೇಳುವಾಗಲೂ ಅವರು ನೇರವಾಗಿ ಜಾತಿಯನ್ನ ಬೈತಿದಾರೆ ಅಂತ್ಲೇ ಅರ್ಥ. ಅಂದ್ರೆ ಅವರು ಜಾತಿ ಹಂಗಿನಲ್ಲೇ ನಿಂತಿದ್ದಾರೆ ಅಥವಾ ಬೇರೆಯವರಿಗೆ ಜಾತಿಯ ಕೀಳರಿಮೆ ಉಂಟಾಗುವಂತೆ ನಡೆದುಕೊಂಡರೂ ಅದು ಆಚರಣೆಯೇ ಆಗುತ್ತದೆ. ಸಿಗ್ಮಂಡ್ ಫ್ರಾಯ್ಡ್ ಹೇಳುವಂತೆ, ಮೌನ ತಾಳುವುದು ಕೂಡ ಅದೇ ಆಗಿದೆ. ಉದಾಹರಣೆಗೆ, ನಾನು ಸಮಾಜಶಾಸ್ತ್ರದ ವಿದ್ಯಾರ್ಥಿ. ಬಾಬಾ ಸಾಹೇಬ್ ಅಂಬೇಡ್ಕರ್ ಜಗತ್ತು ಕಂಡ ಒಬ್ಬ ಅಪರೂಪದ ಸಮಾಜಶಾಸ್ತ್ರಜ್ಞ. ಆದರೆ ೨೦೧೪ರವರೆಗೂ ಅವರೊಬ್ಬ ಸಮಾಜಶಾಸ್ತ್ರಜ್ಞ ಅಂತ ಯಾಕೆ ನೋಡಲಾಗಿಲ್ಲ, ಮಾತಾಡಲಾಗಿಲ್ಲ ಅಂದ್ರೆ ನಮ್ಮಂತಹ ಮೇಷ್ಟ್ರುಗಳು, ಆಕ್ಟಿವಿಸ್ಟ್‌ಗಳು ಆ ವಿಷಯವನ್ನು ಮತ್ತೆ ಮತ್ತೆ ಹೇಳಿ ಈಗ ಬಾಬಾಸಾಹೇಬರನ್ನ ಸಮಾಜಶಾಸ್ತ್ರಜ್ಞ ಅಂತ ಸಣ್ಣಗೆ ಓದಲಾಗುತ್ತಿದೆ. ಅಂದ್ರೆ ನಾವು ಯಾವುದನ್ನ ಹೇಳಬೇಕೋ, ಯಾರನ್ನ ಕುರಿತು ಮಾತನಾಡಬೇಕೋ ಆ ಬಗ್ಗೆ ಮೌನ ವಹಿಸುವುದು ಕೂಡ ಜಾತಿಯ ಆಚರಣೆಯೇ ಆಗುತ್ತದೆ. ಅಂದ್ರೆ ಜಾತಿ ಅನ್ನುವುದು ಒಂದು ಅಭಿವ್ಯಕ್ತಿ ಕ್ರಮ. ಜಾತಿ ಅನ್ನುವುದು ಒಂದು ಮೌನವಾಗಿದೆ. ಜಾತಿ ಅನ್ನುವುದು ಬೇರೆ ಬೇರೆ ಪದಗಳ ಮೂಲಕ ಜನರನ್ನು ಬೈಯುವ, ನಿಂದಿಸುವ ವಿಧಾನವಾಗಿದೆ. ಅದು ದೇಹ ಭಾಷೆಯಾಗಿದೆ, ಆಹಾರವಾಗಿದೆ. ಆದ್ದರಿಂದ ಜಾತಿಯ ಸ್ವರೂಪವನ್ನು ಅದರ ಮಾಯೆಯನ್ನು ನಮ್ಮ ಮೇಲೆ ಅದು ತಬ್ಬಿದ ಬಗೆಯನ್ನು ಅಷ್ಟು ಸುಲಭದಲ್ಲಿ ನಿರ್ವಹಿಸಿಕೊಳ್ಳಲು ಸಾಧ್ಯವಿಲ್ಲ. ಅದು ದಬ್ಬಾಳಿಕೆ, ಹತೋಟಿ ಕೂಡ ಮಾಡುತ್ತೆ. ಅದನ್ನು ಕೆಲವರು ಒಪ್ಪಬಹುದು ಅಥವಾ ಬಿಡಬಹುದು.

ಇತ್ತೀಚೆಗೆ, ಈ ಜಾತಿ ಎಷ್ಟೊಂದು ವಿಜೃಂಭಿಸುತ್ತದೆ ನೋಡಿ. ಆಟೋಗಳ ಮೇಲೆ, ಕಾರುಗಳ ಮೇಲೆ ಜಾತಿ ಸ್ಟಿಕರ್‍ಸ್ ಇರುತ್ತವೆ. ಬ್ರಾಹ್ಮಣರ ಉಪಾಹಾರ ಮಂದಿರ, ಲಿಂಗಾಯಿತರ ಖಾನಾವಳಿ ಎನ್ನುವ ಇಷ್ಟು

**ಡಾ॥ ಕುಂಸಿ ಉಮೇಶ್**

ಸ್ಪಷ್ಟವಾಗಿ ! ಬಹುಶಃ ಬ್ರಿಟನ್‌ನಲ್ಲಿ ಬ್ಲಾಕ್ ಬಗ್ಗೆ ಕೂಡ ಬ್ಲಾಕ್ ಆರ್ ಪ್ರೋಹಿಬಿಟೆಡ್ ಅಂತ ಪಬ್ಲಿಕ್‌ನಲ್ಲಿ ಇತ್ತೋ ಇಲ್ವೋ ನಂಗೊತ್ತಿಲ್ಲ. ಆದರೆ ಈ ದೇಶದಲ್ಲಿ ಇಷ್ಟು ನಿರ್ಲಜ್ಜವಾಗಿ ಜಾತಿ ಪ್ರಕಟಗೊಳ್ಳುತ್ತಿರುವುದನ್ನು ನಾವು ನೋಡಿದ್ದೇವೆ, ಅನುಭವಿಸುತ್ತಿದ್ದೇವೆ. ಅದಕ್ಕೆ ನಾನು ಜಾತಿ ಎಂಬುದನ್ನು ಅರ್ಥೈಸಲು ಅದನ್ನು ಅಭಿವ್ಯಕ್ತಿ ಕ್ರಮ ಅನ್ನದೆ ವಿಧಿ ಇಲ್ಲ. ಯಾಕಂದ್ರೆ ಯಾರು ಯಾವಾಗ ಜಾತಿಯನ್ನು ಆಚರಿಸ್ತಾರೆ, ಯಾವಾಗ ಬಿಟ್ಟಿರುತ್ತಾರೆ, ಗೊತ್ತಿಲ್ಲ. ವಸಾಹತು ನಂತರ 'ಜಾತಿ' ಇಲ್ಲಿ ಹುಟ್ಟಿದೆ ಅಂತ ಕೆಲವರು ಪ್ರಕಾಂಡ ಸಿದ್ಧಾಂತವನ್ನು ಮಂಡಿಸುತ್ತಿದ್ದಾರೆ. ಆದರೆ ನನಗನಿಸುತ್ತೆ ಜಾತಿಯೇ ನಮ್ಮ ಮಿದುಳನ್ನು ವಸಾಹತುಗೊಳಿಸಿದೆ ಅಂತ. ಯಾಕೆ ವಸಾಹತುಕರಣಗೊಳಿಸುತ್ತೆ ಅಂದ್ರೆ ಮಗುವಿನ ಬೆಳವಣಿಗೆಯ ಹಂತದಿಂದಲೇ ಅದರ ಆಂತರ್ಯಕ್ಕೆ ಜಾತಿಯ ಮುದ್ರೆಯನ್ನು ಆತನ ಮೆದುಳಿನ ಮೇಲೆ ಹೇರುತ್ತಲೇ ಸಾಗುತ್ತದೆ. ಅವನಿಗೆ ಹೆಸರಿಡುವಾಗಿಂದ ಹಿಡಿದು ಅವನು ಏನನ್ನು ತಿನ್ನಬೇಕು, ಏನನ್ನು ತಿನ್ನಬಾರದು, ಹೇಗೆ ತಿನ್ನಬೇಕು, ಹೇಗೆ ತಿನ್ನಬಾರದು, ಯಾವ ದೇವರಿಗೆ ಕೈ ಮುಗಿಯಬೇಕು, ಯಾವುದಕ್ಕೆ ಮುಗಿಯಬಾರದು ಮತ್ತು ಆತ ಯಾರ ಜೊತೆ ಮಾತನಾಡಬೇಕು, ಮಾತನಾಡಬಾರದು, ಅವನ ಸ್ಥಾನಮಾನ ಏನು, ಅವನ ಉಡುಗೆ-ತೊಡುಗೆಗಳೇನು? - ಇವೆಲ್ಲವೂ ಒಬ್ಬ ವ್ಯಕ್ತಿಯಲ್ಲಿ ಅಗೋಚರವಾಗಿ ಜಾತಿಯ ಮೂಲಕವೇ ನಡೆಯುತ್ತದೆ. ಇಲ್ಲಿರುವ ನಾವು ಕೂಡ ಅದಕ್ಕೆ ಹೊರತಲ್ಲ. ಆದ್ದರಿಂದ ನಮ್ಮ ಮೈಂಡ್ ಕಾಲನೈಸ್ ಆಗುತ್ತೆ. ಆಯಾ ಜಾತಿಯ ವಿವೇಕ, ಪೂರ್ವಗ್ರಹ, ಕೀಳರಿಮೆ, ಮೇಲರಿಮೆ, ಲಕ್ಷಣ, ಮಾತು, ಆಚರಣೆ, ಊಟ, ಮದುವೆ, ಪ್ರಜ್ಞೆ ಮರಣದವರೆಗೂ ಅದರ ನಡೆ ಇರುವುದರಿಂದ ಇದನ್ನು 'ಮಿದುಳ ವಸಾಹತೀಕರಣ' ಅಂತ ಹೇಳಿದ್ದು. ಆದ್ದರಿಂದ ಜಾತಿಯನ್ನು ಕುರಿತು ಅಧ್ಯಯನ ಮಾಡುವುದು ಸಮಾಜಶಾಸ್ತ್ರಜ್ಞರಿಗೆ ಸವಾಲಿನ ಕೆಲಸ. ಏಕೆಂದರೆ ಭಾರತದ ಜನರನ್ನು ಅಧ್ಯಯನ ಮಾಡುವುದು ತುಂಬ ಕಷ್ಟ. ಅಲ್ಲದೆ, ಜಾತಿ ಹುಟ್ಟಿನಿಂದಲೇ ವ್ಯಕ್ತಿಯ ಪ್ರಜ್ಞೆಯನ್ನು ರೂಪಿಸುವುದರಿಂದ. ಇದರಿಂದ ಹೊರತಾಗಿ ವ್ಯಕ್ತಿಯನ್ನು ಸಮಾಜವನ್ನು ಅಧ್ಯಯನ ಮಾಡುವುದು ಅಷ್ಟೊಂದು ಸುಲಭದ ಕೆಲಸವಲ್ಲ. ಅವರ ನಿಲುವುಗಳಲ್ಲಿ ಕನಿಷ್ಠವೇ ಕಾಣಲ್ಲ. ಫೀಲ್ಡ್‌ಗೆ ಹೋದಾಗ ಜನರು ಉತ್ತರಿಸಿದ್ದನ್ನು ನಾವು ನೋಡಿದ್ದೇವೆ. ಉದಾಹರಣೆಗೆ, ಜಾತಿ ಅಧ್ಯಯನಕ್ಕಾಗಿ ನಾನು ಕನಕಪುರದ ದೊಡ್ಡಜಾಲಹಳ್ಳಿಗೆ ಹೋಗಿದ್ದಾಗ ಸರಳವಾದ ಪ್ರಶ್ನೆ ಕೇಳಿದೆ : ನೀವು ಯಾವ ಪಕ್ಷಕ್ಕೆ ಬೆಂಬಲಿಸುತ್ತೀರಾ ಅಂತ, ಎಲ್ಲೂ ಒಕ್ಕೊರಲಿನಿಂದ ಜೆ.ಡಿ.ಎಸ್. ಅಂದ್ರು, ಕುರುಬ್ರು, ಕುಂಬಾರ್ರು, ಗೌಡ್ರು, ಉಪ್ಪಾರ್ರು ಯಾರ ಮನೆಗ್ಹೋದ್ರು ಜೆ.ಡಿ.ಎಸ್. ಅಂತ್ಲೆ ಉತ್ರ ಬರ್ತಿತ್ತು. ನಾನು ಇದೇನಪ್ಪ ಇದು ಅಂತ ಆಶ್ಚರ್ಯ ಪಟ್ಟೆ . ಇಲ್ಲಿ ನನ್ನ ಫೀಲ್ಡ್‌ವರ್ಕ್‌ನಲ್ಲಿ ಏನೋ ದೋಷ ಇದೆ, ತೊಂದ್ರೆ ಇದೆ ಅನ್ಕೊಂಡು ಫೀಲ್ಡ್‌ವರ್ಕ್ ನಿಲ್ಲಿಸಿದೆ (ಆದ್ರೆ ಅದರ ಒಳಮರ್ಮ ಬೇರೇನೆ ಆಗಿತ್ತು). ಏನಂದ್ರೆ ನನ್ನ ಜೊತೆಗೆ ಇರ್ದೋನು ಫೀಲ್ಡ್‌ವರ್ಕ್‌ನಲ್ಲಿ 'ಗೌಡ್ರು' ಹುಡ್ಗ. ನಾನು ಕೇಳಿದ ಪ್ರಶ್ನೆಗೆ ನಿರ್ಭೀತಿಯಿಂದ ಉತ್ತರಿಸಿ ನಾವ್ಯಾಕೆ ಗೌಡ್ರ ಮನೇನ ಎದ್ರು ಹಾಕ್ಕೊಬೇಕು ಅಂತ. ಅಂದ್ರೆ ಒಂದು ಸಣ್ಣ ಉತ್ರ ನೀಡೋದಕ್ಕೂ ಜಾತಿ ಹೇಗೆ ಅಡ್ಡ ಬರುತ್ತೆ ಅಂತ. ಆದ್ದರಿಂದಲೆ ನಮ್ಮಲ್ಲಿರುವ ಜಾತಿಗಳನ್ನು ಅಧ್ಯಯನ ಮಾಡೋದು ಅಷ್ಟು ಸುಲಭದ ಕೆಲಸ ಅಲ್ಲ. ಈವರೆಗೆ ಭಾರತದಲ್ಲಿ ಆಗಿರುವ ಜಾತಿ ಅಧ್ಯಯನಗಳೆಲ್ಲ ಕೇವಲ ಎತ್ನೋಗ್ರಾಫ್ ತರಹ. ಅಂದ್ರೆ ಜಾತಿಗಳ ಆಚರಣೆ, ಉಡುಪು, ದೇವರು, ಮದುವೆ ಇಂಥದ್ದು ಹೀಗಿಗೇ ಅಂತ. ಇದು ಜಾತಿಯನ್ನು ನಿರ್ಧರಿಸಲು ಇರುವ ಸುಲಭ ಅಧ್ಯಯನ ಮಾದರಿ ಮಾಡಿಕೊಂಡು ಇವರು ಕಾಡುಗೊಲ್ಲು, ಇವರು ಕುರುಬ್ರು, ಉಪ್ಪಾರರು... ಹೀಗೆ.

ಒಂದು ರಾಷ್ಟ್ರ ಅಂತ, ಹಾಗಾಗಿ ನಾವು ಈ ರಾಷ್ಟ್ರವನ್ನು ಅಧ್ಯಯನ ಮಾಡೋದು ಅಂದ್ರೆ ಅಣುವಿನಂತೆ ರಚನೆಯ ಒಳಪದರದಿಂದ ಅಧ್ಯಯನ ಮಾಡಬೇಕಾಗಿದೆ. ಇಷ್ಟೆಲ್ಲ ಪೀಠಿಕೆಯನ್ನು ನಾನು ಯಾಕೆ ಸುದೀರ್ಘವಾಗಿ ಹಾಕಬೇಕಾಗಿದೆ ಅಂದ್ರೆ ನಾನು ಮುಂದೆ ಮಾತಾಡೋ ಮಾತುಗಳು ಇನ್ನೂ ಡೇಂಜರಸ್ ಆಗಿರ್ತಾವೆ. ಅದಕ್ಕೆ ನಾನು ಮೊದಲೇ ಈ ಅಫಿಡವಿಟ್ ಅನ್ನು ಹಾಕ್ತಾ ಇದ್ದೀನಿ.

ಈಗ ಸಾಮಾನ್ಯವಾಗಿ ಒಂದು ವಿಚಾರ ಏನೆಂದರೆ, ಸಮಾಜ ವಿಜ್ಞಾನಿಗಳು, ಪತ್ರಕರ್ತರು ಇಂತಹ ಸಾಮಾಜಿಕ ವಿಷಯಗಳ ಬಗ್ಗೆ ನಿಗಾ ವಹಿಸಬೇಕಿತ್ತು. ಆದ್ರೆ ನಮ್ಮಲ್ಲಿ ಈ ವಿಚಾರ ಕುರಿತ ವಿಮರ್ಶೆ-ಚರ್ಚೆಯನ್ನು ಮಾಡ್ತಾ ಇರೋರು ಭಾಷೆ ಮತ್ತು ಸಾಹಿತ್ಯದಲ್ಲಿ ಪರಿಣತರಾದವರು ಕರ್ನಾಟಕದಲ್ಲಿ ಸಾಂಸ್ಕೃತಿಕ ಭೂಮಿಕೆಯಲ್ಲಿದ್ದಾರೆ. ಬೇರೆ ಬೇರೆ ಡಿಸಿಪ್ಲಿನ್‌ನವರು ಇಲ್ಲಿ ಗೈರು ಹಾಜರಾಗಿರುವುದರಿಂದ ಸಾಹಿತ್ಯ ಓದಿರೋರೆ ವಿಮರ್ಶೆ, ಮೀಮಾಂಸೆ, ರಾಷ್ಟ್ರ, ಸಮಾಜ, ಜಾಗತೀಕರಣ, ಇಂಪೀರಿಯಾಲಿಸಂ, ಫ್ಯಾಸಿಸಂ ಎಲ್ಲದರ ಬಗ್ಗೆ ಬರೆಯಬೇಕು, ಮಾತಾಡಬೇಕು. ಪಾಪ ಅದು ಅವರ ತಪ್ಪಲ್ಲ. ಅದು ಅವರಿಗೆ ಇತರೆ ಶಾಸ್ತ್ರದ ಪಂಡಿತರು ನೀಡಿರೋ ಶಿಕ್ಷೆಯೇ ಆಗಿದೆ. ಮುಖ್ಯವಾಗಿ, ಜಾತಿ ವಿಷಯಕ್ಕೆ ಬಂದರೆ ಅವರೆಲ್ಲರ ತಿಳುವಳಿಕೆ ದೊಡ್ಡದೇ. ಆದರೆ ಒಳ ಮೀಸಲಾತಿ ವಿಚಾರಕ್ಕೆ ಬಂದರೆ ಸಮಾಜ ವಿಜ್ಞಾನಿಗಳು ಖಚಿತವಾಗಿ ಮಾತನಾಡಬೇಕು. ನಾನು ಕ್ಲಾಸ್‌ಗೆ ಹೋಗುವ ಮೊದಲು ಜೊತೆಗಾರರಿಗೆ ಕೇಳ್ತಿರ್ತೀನಿ "ಏನ್ರಪ್ಪ, ಇವತ್ತು ಕ್ಲಾಸು? ಅಂತ. "ಅದೇ ಸಾರ್ ಜಾತಿ-ಸಮಾಜ" ಅಂತ ಸರಳವಾಗಿ ಹೇಳ್ತಾರೆ. ಎಸ್.ಸಿ. ಅಂದ್ರೇನು ಅಂದ್ರೆ, ಅದೇ ಸಾರ್. ಷೆಡ್ಯೂಲ್ಡ್ ಕ್ಯಾಸ್ಟ್, ಹೊಲೇರು, ಮಾದ್ರು, 'ಮಿದುಳಿನ ವಸಾಹತೀಕರಣ' 'ಎಸ್.ಟಿ. ಅಂದ್ರೆ' ಅದೇ ಷೆಡ್ಯೂಲ್ಡ್ ಟ್ರೈಬು. ಅದೇ ಅವರು ನಾಯಕ್ರು. ಇಷ್ಟೇ ಅವರು ಹೇಳೋದು. "ಅಲ್ರಪ್ಪ, ಷೆಡ್ಯೂಲ್ಡ್ ಕ್ಯಾಸ್ಟ್ ಸಂವಿಧಾನದ ಅನುಸೂಚಿತ ಜಾತಿಗಳ, ಸಮುದಾಯಗಳ ಪಟ್ಟಿ ಇದೆ. ಆ ಪಟ್ಟಿಯಲ್ಲಿ ೧೦೧ ಜಾತಿಗಳಿವೆ. ಆ ಜಾತಿಗಳಿಗೆ ಇಂತಿಂಥ ಸವಲತ್ತು ಕೊಡಬೇಕು. ಅನೇಕ ಬುಡಕಟ್ಟುಗಳನ್ನು ಸೇರಿಸಿ ಪರಿಶಿಷ್ಟ ಪಂಗಡ ಅಂತ ಮಾಡಿ ಅವರಿಗೂ ಸವಲತ್ತು ನೀಡುವ ವಿಶೇಷತೆ ಅದು ಅಂತ ವಿವರಿಸಿಕೊಡಬೇಕು. ಇದು ಬೇರೆಯವರಿಗಲ್ಲ ನಮ್ಮ ಸೋಷಿಯಾಲಜಿ ಮೇಸ್ಟ್ರಿಗೆ. ಇನ್ನು ಕೆಲವು ಮೂರ್ಖರಿದ್ದಾರೆ. ಎಸ್.ಸಿ. ಅಂದ್ರೆ ಅದೇ ಒಂದು ಜಾತಿ ಅಂತ ತಿಳ್ಕೊಂಡಿದಾರೆ. ಎಸ್.ಟಿ. ಅನ್ನದೇ ಕ್ಯಾಸ್ಟ್ ಅಂತ. ಥೂ ! ಅವರಿಗೆ ಸಂವಿಧಾನಾತ್ಮಕವಾಗಿ ಅನೇಕ ಅಲಕ್ಷಿತ ಸಮುದಾಯಗಳನ್ನು ಗುರುತಿಸಿದ ಒಂದು ವ್ಯವಸ್ಥೆ ಅನ್ನೋದೆ ಗೊತ್ತಿರಲ್ಲ. ಅದೊಂದು ಆದ್ದರಿಂದಲೇ ಎಸ್.ಸಿ. ಅನ್ನೋದು ಒಂದೇ ಅಲ್ಲ ಬೆಳಿಗ್ಗೆ ಪ್ರಶ್ನೆ ಬಂತಲ್ಲ ಎಸ್.ಸಿ.ಗಳೆಲ್ಲ ಒಂದಾಗಬೇಕು ಅಂತ. ಅದು ಸಾಧ್ಯವಿಲ್ಲದ ಮಾತು. ಅದೊಂದು ಆಶಯ, ಅಷ್ಟೆ. ಯಾಕಂದ್ರೆ ಇದನ್ನು ಸೋಷಿಯಲಾಜಿಕಲ್ ಆಗಿ ನೋಡಬೇಕು. ಲಿಂಗಾಯ್ತ್ರು, ಬ್ರಾಹ್ಮಣರು, ಬೆಸ್ತರು, ಕುರುಬ್ರು, ಉಪ್ಪಾರ್ರು, ಗೌಡ್ರು ಎಲ್ಲರೂ ಹೇಗೆ ಬೇರೆ ಬೇರೆನೋ ಹಾಗೆ ಹೊಲೇರು, ಮಾದ್ರು, ಕೊರಚರು, ಕೊರಮರು, ದೊಂಬ್ರು, ದಕ್ಲೇರು ಬೇರೆ ಬೇರೆನೇ. ಎಂದೂ ಕೂಡ ಇವರೆಲ್ಲ ಒಂದಾಗುವಂತೆ ನಮ್ಮ ಜಾತಿ ಚಹರೆಗಳಿಲ್ಲ. ಆದ್ರೆ ಹೊಲೇರು-ಮಾದ್ರು ಒಂದು ಇಶ್ಯೂ ಕಾರಣಕ್ಕೆ ಒಂದಾಗಿ ನಿಂತು, ಒಂದು ಕಲ್ಚರಲ್ ಪಾಲಿಟಿಕ್ಸ್ ಕಂಡೀಷನ್‌ನಲ್ಲಿ ನಿಂತು ಮೇಲ್ಜಾತಿಯ ದೌರ್ಜನ್ಯವನ್ನು ವಿರೋಧಿಸಲು ಮೊದ್ಲು ಮೊದಲು ನಿಂತ್ರು, ಹೊಲೇರು ಸಾಪೇಕ್ಷವಾಗಿದ್ದು ಹೋರಾಡಿ ತಮ್ಮ ಮೇಲಿನ ದೌರ್ಜನ್ಯವನ್ನು ವಿರೋಧಿಸಬಹುದೇ ಹೊರತು ಇನ್ನೆಂದೂ ಒಂದಾಗುವ ಸಾಧ್ಯತೆಯೇ ಇಲ್ಲ. ಯಾಕಂದ್ರೆ ಈ ನೂರೊಂದು ಜಾತಿಗಳಲ್ಲಿ ಅಸ್ಪೃಶ್ಯ ಮತ್ತು ಸ್ಪೃಶ್ಯ (ಟಚಬಲ್ ಆ್ಯಂಡ್ ಅನ್‌ಟಚಬಲ್) ಇವೆ ಅಲ್ಲಾ, ಮಾದಿಗರಿಗೆ, ಹೊಲೇರಿಗೆ ಹೊಡೆದ್ರೆ, ಲಂಬಾಣಿಗಳಿಗೆ (ಸ್ಪೃಶ್ಯ) ಏನಾಗಬೇಕಾಗಿದೆ? ಅವರೇಕೆ ದೌರ್ಜನ್ಯದ ವಿರುದ್ಧ ತಡೆಗೋಡೆಯಾಗಿ ನಿಲ್ತಾರೆ ?

ಹೊಲೇರು ಮತ್ತು ಮಾದಿಗ್ರ ವಿಚಾರಕ್ಕೆ ಬರೋಣ. ಅವರು ಎಸ್.ಸಿ.ಗಳಾಗಿರ ಬಹುದು ಆದರೆ ಸಂಪೂರ್ಣವಾಗಿ ಅವ್ರು ಭಿನ್ನ ಭಿನ್ನ ಜಾತಿಗಳೇ ಆಗಿರಬಹುದು. ಅವರ ಆಚರಣೆಗಳು ಹೇಗಿವೆ? ನನ್ನ ತಿಳಿವಳಿಕೆಯಲ್ಲಿ ಹೇಳುವುದಾದರೆ, ಮದುವೆಯ ವಿಚಾರವನ್ನೇ ಗಮನಿಸಿದರೆ ಹೊಲೇರು-ಮಾದಿಗ್ರ ಹುಡುಗರು, ಲಿಂಗಾಯಿತರ, ಒಕ್ಕಲಿಗರ, ಬ್ರಾಹ್ಮಣರ ಹುಡಿಗೇರನ್ನ ಮದುವೆ ಆಗಿದ್ದಾರೆ. ಶೇ.೯೯.೯೯ರಷ್ಟು ಹೊಲೇರು ಮತ್ತು ಮಾದಿಗ್ರ ನಡುವೆ ವಿವಾಹವಾಗಿರೋದು ಕಡಿಮೆ. ಇದು ನೀವು ಸಮೀಕ್ಷೆ ನಡೆಸಿದರೂ ಸರಿ ಇರಬೇಕು. ಅಚಾನಕ್ಕಾಗಿ ನಾವು ನೋಡುತ್ತೇವೆ. ಇದನ್ನು ಬಹಳ ಗುಪ್ತವಾಗಿಡಲಾಗುತ್ತದೆ. ಯಾಕಂದ್ರೆ ಹೊಲೇರು, ಮಾದಿಗ್ರು ಅಂತ ಪದ ಬಳಸಿ ಮಾತಾಡುವಂತಿಲ್ಲ. ಅದು ಅವಮಾನದ ಪ್ರಶ್ನೆಯೂ ಹೌದು. "ಇಲ್ಲಪ್ಪ ಅವ್ರೆಲ್ಲ ಒಂದೇ ಅಲ್ಲ, ಒಟ್ಟಿಗೆ ನೋಡಬೇಡಿ" ಅಂತ ನಮ್ಮಂತ ಪ್ರಗತಿಪರರು ಸಾರ್ವಜನಿಕವಾಗಿ ಹೇಳುವಂತಿಲ್ಲ. ಯಾಕಂದ್ರೆ ಹಿಂದೂತ್ವವಾದಿಗಳು, ಮೀಸಲಾತಿ ವಿರೋಧಿಗಳು, ಈ ಕಳ್ರೆಲ್ಲ ನಮ್ಮ ಮಾತನ್ನು ದುರುಪಯೋಗ ಪಡಿಸ್ಕೊಂಡುಬಿಡ್ತಾರೋ ಅಂತ ಭಯ ಬೇರೆ ನಮಗೆ. ಇದೊಂತರ ಮಡಿಲಲ್ಲಿ ಕೆಂಡ ಕಟ್ಟಿಕಂಡಂಗೆ ಬಿಸಿ ತುಪ್ಪದಂತೆ ಉಗಳಂಗಿಲ್ಲ ನುಂಗಂಗಿಲ್ಲ. ಈ ಸಾಂಸ್ಕೃತಿಕ ಹೈರಾರ್ಕಿಯೊಳಗೆ, ಲಿಂಗಾಯ್ತರಿಗಿಂತ ಬ್ರಾಹ್ಮಣರು ಹೇಗೆ ಮೇಲಿದಾರೋ ಹಾಗೆ

ಮಾದಿಗರಿಗಿಂತ ಹೊಲೇರು ಉನ್ನತ ಜಾತಿ, ದಕ್ಲೇರು ಮಾದಿಗರಿಗಿಂತ ಕೆಳಜಾತಿ. ಈ ದಕ್ಲೇರನ್ನ ಮಾದಿಗ್ರು ಹೇಗೆ ಮನೆ ಒಳಗೆ ಸೇರಿಸ್ಕಳ್ಳಲ್ವೋ ಹಾಗೆ ಹೊಲೇರು ಮಾದಿಗರನ್ನ ಮನೆಗೆ ಸೇರಿಸ್ಕಳ್ಳಲ್ಲ. ವಿವಾಹ ಸಂಬಂಧಗಳು ಕೂಡ ಹಾಗೆ ಮುಂದುವರಿಯುತ್ವೆ. ಹೇಗೆ ಲಿಂಗಾಯ್ತರು-ಕುರುಬರು ಸಂಬಂಧ ಮಾಡಲ್ವೋ ಹಾಗೇನೇ ಮಾದಿಗರು, ಹೊಲೇರು ರಕ್ತ ಸಂಬಂಧ ಮಾಡುವುದಿಲ್ಲ. 'ದೇ ಆರ್ ಎಂಟೈರ್ಲಿ' ಬೇರೆ ಬೇರೆನೇ. ಯಾಕಂದ್ರೆ ಹೊಲೇರ ಜಾತಿ ಕೃಷಿ ಸಮಾಜವಾಗಿದೆ. ಒಂದು ಹೊಲೆಯರ ಕುರಿತ ಅಧ್ಯಯನದಲ್ಲಿ ಈ ಬಗ್ಗೆ ನಿಖರ ಮಾಹಿತಿ ಇದೆ. ಇದು ಒಕ್ಕಲಿಗರ ಕುಲದಂತೆ ಸಾಂಸ್ಕೃತಿಕ ಆಚರಣೆಗಳನ್ನು ಹೊಂದಿರುವುದು ತಿಳಿದುಬರುತ್ತದೆ. ಅಂದರೆ 'ಹೊಲೆಯ-ಒಕ್ಕಲಿಗ' ಸಮುದಾಯಗಳ ನಡುವೆ ಸಾಂಸ್ಕೃತಿಕ ಸಾಮ್ಯತೆ ಇದೆಯೇ ಹೊರತು ಮಾದಿಗರು-ಹೊಲೆಯರ ನಡುವೆ ಅಲ್ಲ. ತುಮಕೂರು ಜಿಲ್ಲೆಯ ಮಧುಗಿರಿ ಕಡೆ ಕುಂಚಿಟಿಗ ಗೌಡರಿದ್ದಾರೆ. ಅವರಲ್ಲಿ ಮದುವೆ ಹಬ್ಬದ ಸಂದರ್ಭದಲ್ಲಿ ಹೊಲೆಯ ಹೆಣ್ಣುಮಕ್ಕಳಿಗೆ ಕರೆದು ಮನೆಮಗಳಂತೆ ಉಡಿ ತುಂಬಿಸುತ್ತಾರೆ. ಇದು ಒಂದು ಬಗೆಯ ಸಾಂಸ್ಕೃತಿಕ ಆಚರಣೆ. ಅವರ ದೈವ, ನಂಬಿಕೆ, ಆಚರಣೆಗಳಲ್ಲಿ ಒಕ್ಕಲಿಗರಿಗೂ ಹೊಲೇರಿಗೂ ಸಾಂಸ್ಕೃತಿಕ ಸಂಬಂಧಗಳಿವೆಯೇ ಹೊರತು ಹೊಲೆಯ, ಮಾದಿಗರ ನಡುವೆ ಇಲ್ಲ. ಈ ತಿಳುವಳಿಕೆ ಇಲ್ಲದೆ ಎಲ್ಲರೂ ಹೊಲೇರು-ಮಾದಿಗರು ಒಂದೇ ಅಂತ ಬರೀತಾರೆ. ಆ ದೇವನೂರ ಮಹದೇವರೂ ಹಾಗೆ ಬರೀತಾರೆ. ಅದೇನು ರಾಜಕಾರಣದ ಒಳ ಸಂಬಂಧದ ನೆಲೆಯಿಂದ ಬರೀತಾರೋ ಗೊತ್ತಿಲ್ಲ. ಅದೇನು ತಿಳುವಳಿಕೆ ಇಲ್ದೆ ಬರೀತಾರೋ, ಇಲ್ವೊ ಗೊತ್ತಿಲ್ಲ ಅಥ್ವಾ ಕಲ್ಚರಲ್ ಪಾಲಿಟಿಕ್ಸ್‌ನ ನೆಲೆಯಿಂದ ಹಾಗೆ ಬರೀತಿರಬಹುದೋ ಏನೋ ಗೊತ್ತಿಲ್ಲ. ನಮ್ಮ ಕಣ್ಣೆದುರಿಗೆ ಇರುವ ಸತ್ಯವನ್ನು ಹೀಗೆಲ್ಲ ಬದಲಿಸಿ ಬರೀತಾರಲ್ಲ, ಯಾಕೆ...? ಇಲ್ಲಿರುವ ನೀವೆಲ್ಲ ಇದನ್ನು ಒಪ್ಪುತ್ತೀರಾ ತಾನೆ. ಅಥ್ವಾ ನಾ ಹೇಳ್ತಿರೋದರದಲ್ಲಿ ತಪ್ಪಿದ್ರೆ ತಕ್ಷಣವೇ ನೀವು ಪ್ರಶ್ನೆ ಕೇಳಬಹುದು.

ಆದ್ದರಿಂದ ಅನುಸೂಚಿತ ಜಾತಿಗಳ ಒಕ್ಕೂಟವಾದ ಷೆಡ್ಯೂಲ್ಡ್ ಕ್ಯಾಸ್ಟ್ ಲಿಸ್ಟ್‌ನಲ್ಲಿ ಹೊಲೆಯರು-ಮಾದಿಗರು ಇರುವಂತೆ ವಡ್ಡರು, ಲಂಬಾಣಿಗಳು, ಕೊರಮ-ಕೊರಚರು ಇದ್ದಾರಲ್ವ, ಅವರಲ್ಲಿರುವ ಯಾರೇ ಹೊಡೆದಾಡಿಕೊಂಡರೂ ಅದು ಒಂದು ಜಾತಿಯವನ ಪರವಾಗಿ ಮತ್ತೊಂದು ಜಾತಿ ಹೋಗಲ್ಲ. ಈಗ ನೋಡಿ ಹೊಲೆಯರು-ಮಾದಿಗರು ಹೊಡೆದಾಡಿಕೊಳ್ಳುವಾಗ ವಡ್ಡರಿಗೆ, ಲಂಬಾಣಿಯವರಿಗೆ ಏನೂ ಆಗಬೇಕಾಗಿಲ್ಲ. ಸಾಮಾನ್ಯ ಜನ ಸುಮ್ಮನಿದ್ದರೂ ನಮ್ಮಂತಹ ಪ್ರಗತಿಪರರು, "ನೀವೆಲ್ಲ ಒಂದೇ, ಹೊಡೆದಾಡಬೇಡಿ" ಅಂತ ಮಧ್ಯಪ್ರವೇಶ ಮಾಡ್ತೀವಿ. ಆದರೆ ತಮಗೆ ಅನುಕೂಲವಾಗ್ತಿದೆ ಅನ್ನುವಾಗ ಈ ವಡ್ಡರು, ಲಂಬಾಣಿಗಳು ಅಸ್ಪೃಶ್ಯರ ವಿರುದ್ಧ ಹೊಡೆದಾಡಲು ಈ ಲಿಂಗಾಯ್ತರು ಮತ್ತು ಗೌಡರ ಜೊತೆ ಕೈ ಜೋಡಿಸ್ತಾರೆಯೇ ಹೊರ್ತು ಅನುಸೂಚಿತ ಜಾತಿಗಳ ಪಟ್ಟಿಯೊಳಗಿರುವ ಇತರರೊಂದಿಗಲ್ಲ. ಇದನ್ನು ಚರಿತ್ರೆಯಲ್ಲಿ ನಡೆದ ಅನೇಕ ಹಲ್ಲೆಗಳಲ್ಲಿ ನಾವು ಅರ್ಥಮಾಡಿಕೊಳ್ಳಬಹುದಾಗಿದೆ. ಇದರಲ್ಲಿ ಮುಖ್ಯವಾಗಿ ಲಂಬಾಣಿಗಳ-ಬೋವಿಗಳ ಪಾತ್ರವನ್ನು ನಾವು ಬೇರೆ ತರಹವೇ ಅರ್ಥಮಾಡಿಕೊಳ್ಳಬೇಕು. ಯಾಕಂದ್ರೆ ಹೊಲೆಯರ ಸಮಸ್ಯೇನೇ ಬೇರೆ, ಮಾದಿಗರ ಸಮಸ್ಯೇನೇ ಬೇರೆ. ಒಂದೊಂದು ಕಡೆ ಈ ವಡ್ಡರು ಮತ್ತು ಲಂಬಾಣಿಗರನ್ನು ಅಸ್ಪೃಶ್ಯರಂತೆ ಕಾಣುವುದನ್ನು ನೋಡಬಹುದು ಅಥವಾ ಕೆಲವು ಕಡೆ ಶ್ರೀಮಂತರಾಗಿರುವ ಈ ವರ್ಗಗಳು ಹೊಲೆಯರು ಮತ್ತು ಮಾದಿಗರನ್ನು ಕಡೆಗಣಿಸಿರುವುದನ್ನು ಸ್ಪಷ್ಟವಾಗಿ ನೋಡಬಹುದು. ಜಾತಿ ಅನ್ನುವುದನ್ನು ಅರ್ಥಮಾಡಿಕೊಳ್ಳುವುದು ಬಹಳ ಕಷ್ಟ. ಈಗ ನಮ್ಮ ಕಡೆ ದೇವಸ್ಥಾನಗಳಿಗೆ ಹೊಲೇರು ಬರ್ತಾರೆ. ವಾಲಗ ಮುಂತಾದ ಪರಿಕರವಿಟ್ಟುಕೊಂಡ ಅವರಿಗೆ ಅಲ್ಲಿ ಪ್ರವೇಶವಿದೆ. ಆದರೆ ಮಾದಿಗರಿಗಿಲ್ಲ. ಚಾಮರಾಜನಗರದ ಕಡೆ ಅಸ್ಪೃಶ್ಯತೆಯನ್ನು ಹೊಲೇರು ಅನುಭವಿಸ್ತಾರೆ. ಅಂದ್ರೆ ಯಾವ ಮೇಲ್ವರ್ಗದ ಜನಕ್ಕೆ ಸೇವೆಗೆ ಕೈಗೆಟಕುವ ಷೆಡ್ಯೂಲ್ಡ್ ಕ್ಯಾಸ್ಟ್‌ನವರನ್ನು ಬಗ್ಗುಬಡಿದು ಇಟ್ಟುಕೊಂಡಿರುತ್ತಾರೆ. ಅದು ಬೇರೆ ಬೇರೆ ಪ್ರದೇಶದಲ್ಲಿ ಬೇರೆ




ಬೇರೆಯಾಗಿರುತ್ತದೆ. ಕೆಲವೊಮ್ಮೆ ಬುಡಕಟ್ಟುಗಳನ್ನು ತಮ್ಮ ಅಧೀನಕ್ಕಿಟ್ಟುಕೊಂಡಿರುವ ಉದಾಹರಣೆಗಳಿವೆ. ಇದೆಲ್ಲವನ್ನು ಗಮನಿಸಿದಾಗ ಒಳ ಮೀಸಲಾತಿಯ ಅಗತ್ಯವನ್ನು ನಾವು ಒತ್ತಿ ಹೇಳಬೇಕಾಗುತ್ತದೆ. ಇಂತಹ ದೊಡ್ಡ ಹೋರಾಟ ಬೆಂಗಳೂರಿನ ಆರ್ಟ್ಸ್ ಕಾಲೇಜಿನ ಆವರಣದಲ್ಲಿ ನಡೆದಾಗ, ಎಲ್. ಹನುಮಂತಯ್ಯ ಮುಂತಾದವರ ಜೊತೆ ನಾನೂ ಇದ್ದೆ. ಒಳ ಮೀಸಲಾತಿಯನ್ನು ಕೊಡಲೇಬೇಕು. ಉದಾಹರಣೆಗೆ, ಕೃಷಿ ವಿಷಯದಲ್ಲಿ ಮಾದಿಗರಿಗೆ ಸ್ಕಿಲ್ ಇಲ್ಲ. ಆದರೆ ಹೊಲೆಯರಿಗಿದೆ. ಮಾದಿಗರಿಗೆ ಭೂಮಿ ಕೊಟ್ರೆ ಅದನ್ನು ಕೃಷಿ ಮಾಡಿ ಉಳಿಸಿಕೊಳ್ಳಲಾಗಲ್ಲ. ಯಾಕಂದ್ರೆ ಮಾದಿಗರದು 'ಕೌಶಲ್ಯ'ದ ಕುಲ, ಚರ್ಮ ಹದ ಮಾಡುವವರು. ತಮ್ಮ ಕೌಶಲ್ಯದ ಕಾರಣಕ್ಕೆ ಪ್ರಪಂಚದಲ್ಲೇ ಅವಮಾನಕ್ಕೊಳಗಾದ ಜಾತಿ ಅದೊಂದೆ. ಈ ಮೆರಿಟ್, ಸ್ಕಿಲ್ ಅಂತಾರಲ್ಲ ಹಂಗೇನಾದ್ರು ಮೆರಿಟ್ ಕೊಡಂಗಿದ್ರೆ ಮಾದಿಗರಿಗೆ ಹೈಯೆಸ್ಟ್ ಮೆರಿಟ್ ಕೊಡಬೇಕು. ಬಹುಸಂಖ್ಯಾತ ಹೊಲೆಯರು ಇಡೀ ಕರ್ನಾಟಕದಲ್ಲಿ ಕೃಷಿಕರಾಗೇ ಇದ್ದಾರೆ. ಒಂದು ವೇಳೆ ಭೂಮಿ ಇಲ್ಲದಿದ್ರೂ ಗೇಣಿಗಾದರೂ ಕೃಷಿಯನ್ನು ಮಾಡ್ತಾರೆ. ಆದ್ದರಿಂದ ರಾಜಕೀಯವಾಗಿ, ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ, ಸಮಾಜಶಾಸ್ತ್ರೀಯವಾಗಿ ನೀವು ಹೇಗೆ ನೋಡಿದರೂ ಹೊಲೆಯರು ಮತ್ತು ಮಾದಿಗರು ಒಂದೇ ಆಗಿರಲು ಸಾಧ್ಯವೇ ಇಲ್ಲ. ಒಂದಾಗಲೂ ಸಾಧ್ಯವಿಲ್ಲ. ಆದ್ದರಿಂದ ಇವರ ಜನಸಂಖ್ಯೆಗನುಗುಣವಾಗಿ ಮೀಸಲಾತಿಯನ್ನು ಹಂಚಿಕೊಡಲೇಬೇಕು. ಅಲ್ಲದೆ, ಈ ಜಾತಿಯ ಏಣಿಯಲ್ಲಿ ಮೇಲಿನಿಂದ ಬಂದರೆ ಬ್ರಾಹ್ಮಣರಿಗೆ ಉಳಿದೆಲ್ಲ ಜಾತಿಗಳು ಅಸ್ಪೃಶ್ಯ ಎಂದೇ ಕಾಣ್ತವೆ. ಲಿಂಗಾಯ್ತರಿಗೆ ತಮ್ಮ ಕೆಳಗಿರುವ ಎಲ್ಲರೂ ಹಾಗೇ ಕಾಣ್ತಾರೆ. ಇದು ಏರು-ಪೇರಾಗಲು ಸಾಧ್ಯವೇ ಇಲ್ಲ. ನಮಗೆ ಈ ಸತ್ಯ ಗೊತ್ತಿದ್ದರೂ ಧೈರ್ಯವಾಗಿ ಹೇಳ್ತಾ ಇಲ್ಲ. ಭಾವನಾತ್ಮಕವಾಗಿ ಈ ದೇಹದ ಎಡ-ಬಲ ಅಂತ ಹೊಲೆಯರನ್ನು-ಮಾದಿಗರನ್ನು ಕರೆದು ವಿಭಾಗಿಸಿ ಹೇಳುವಷ್ಟು ಸುಲಭದ ಕೆಲಸ ಅಲ್ಲ ಇದು. ಎಂ. ಎನ್. ಶ್ರೀನಿವಾಸ್ ಅಂತಹ ಸೆಲೆಬ್ರಿಟಿ ಸೋಷಿಯಾಲಿಜಿಸ್ಟ್‌ನಂತಹ ಬ್ರಾಹ್ಮಣ ಕಣ್ಣಿನವರಿಗೆ ಬ್ರಾಹ್ಮಣರನ್ನು ಹೊರತುಪಡಿಸಿ ಉಳಿದೆಲ್ಲ ಶೂದ್ರ ಜಾತಿಗಳು ಕುರಿಗಳ ತರಹ ಕಾಣಿಸುತ್ತಾರೆ. ಅವರಿಗೆ ಕರ್ನಾಟಕದ ಕುರುಬರ ಬಗ್ಗೆನೇ ತಿಳುವಳಿಕೆ ಇಲ್ಲದೆ ಸೋಷಿಯಲ್ ಇಂಜಿನಿಯರ್ ಆಗಿಬಿಡ್ತಾರೆ. ಅದೂ ಅಲ್ಲದೆ ಯಾವ ಜಾತಿಯವನಿಗೆ ತನ್ನದಲ್ಲದ ಜಾತಿಯ ತಿಳುವಳಿಕೆ ಇರಲು ಸಾಧ್ಯ? ಆದರೆ ಯಾರು ಸೋಷಿಯಲ್ ಇಂಜಿನಿಯರಿಂಗ್‌ನಲ್ಲಿ ತೊಡಗಿರ್ತಾರೋ ಅವರಿಗೆ ಈ ದೇಶದ ಜಾತಿಗಳ ಒಳ ರಚನೆ ಮತ್ತು ಸಾಂಸ್ಕೃತಿಕ ಚಹರೆಗಳು ಚೆನ್ನಾಗಿ ತಿಳಿದಿರಬೇಕು.

ಸೋಷಿಯಲ್ ಇಂಜಿನಿಯರಿಂಗ್ ಗೊತ್ತಿರಬೇಕು ಮತ್ತು ನಮ್ಮ ತಿಳಿವಳಿಕೆಯನ್ನು ಧೈರ್ಯವಾಗಿ ಸಾರ್ವಜನಿಕವಾಗಿ ಹೇಳಬೇಕು. ಹಿಂಜರಿಕೆಯ ಕಾಲ ಹೋಗಿದೆ. ನಾವು ಮಾದಿಗರು, ಹೊಲೆಯರು, ಕೊರಮ, ಕೊರಚ, ದಕ್ಲೇರು ಅಂತ ಧೈರ್ಯವಾಗಿ ಹೇಳಿಕೊಳ್ಳಲೇಬೇಕು. ಇದರಲ್ಲಿ ಯಾವ ಸಂಕೋಚವೂ ಬೇಕಿಲ್ಲ. ಅವಮಾನವನ್ನು ನೀಗಿಕೊಳ್ಳಲೇ ಬೇಕಾದ್ರೆ ಇದು ಸಾಧ್ಯವಾಗಬೇಕು. 'ದಲಿತ್ ಇಸ್ ಡಿಗ್ನಿಫೈಡ್' ಅಂತಿವಲ್ಲ ಹಾಗೆ. ಈಗ ಕರ್ನಾಟಕದಲ್ಲಿ ಕುರುಬರು ನೋಡಿ, ಸಿದ್ದರಾಮಯ್ಯನವರು ಮುಖ್ಯಮಂತ್ರಿ ಆದ ಕೂಡಲೇ ಅವರಲ್ಲಿ ಹೇಗೆ ಜಾತಿ ಸ್ವಾಭಿಮಾನ ಹೆಚ್ಚಾಗ್ತಿದೆ ಅಂತ. ಬೈಕ್ ಮೇಲೆಲ್ಲಾ ಹಾಯ್ ಕುರುಬ, ಕಿರುಬ, ಕುರುಬಾಸ್ ಅಂತ ಹಾಕ್ಕೊತ್ತಾರೆ. ಇದು ಸ್ವಲ್ಪ ಸಂಕೋಚ ಅನಿಸಿದರೆ ಕನಕದಾಸರ ಫೋಟೋ ಹಾಕ್ತಾರೆ. ಈ ಕುರುಬರಿಗೆ ಸಿದ್ದರಾಮಯ್ಯರಂತಹ ನಾಯಕ ಸಿಗುವವರೆಗೆ ಸಾಮಾಜಿಕವಾಗಿ ತಮ್ಮ ಜಾತಿಯ ಬಗ್ಗೆ ಹೇಳಿಕೊಳ್ಳಲು ಕಷ್ಟ ಪಡ್ತಿದ್ದರು. ಈ ಹೊತ್ತಿಗೆ, ಕುರುಬರಿಗಿಂತ ಕೆಳಹಂತದ ಜಾತಿಗಳು ತಮ್ಮ ಜಾತಿ ಹೇಳಿಕೊಳ್ಳಲು ಹಿಂಜರಿಯುವುದನ್ನು ನೋಡಬಹುದು. ಉದಾಹರಣೆಗೆ, ಈ ಗೊಲ್ಲರು ಜಾತಿ ಬದಲಿಗೆ ಕೃಷ್ಣನ ಫೋಟೋ ಹಾಕ್ಕೊಳ್ಳೋದು. ಹೀಗೆ ಉಳಿದ ಜಾತಿಗಳು ಕೂಡ ತಮ್ಮ ತಮ್ಮ ಜಾತಿಯ ಚಹರೆ-ಸಂಕೇತಗಳನ್ನು ಪ್ರದರ್ಶಿಸಿಕೊಳ್ಳುತ್ತಾರೆ. ಅದಲ್ಲ ಪ್ರಶ್ನೆ, ಪಂಜಾಬ್‌ನಲ್ಲಿ, ಆಂಧ್ರದಲ್ಲಿ ಒಳ ಮೀಸಲಾತಿಯ ದೊಡ್ಡ ಹೋರಾಟಗಳು ನಡೆದಿವೆ. ಆ ಚರಿತ್ರೆ ಬಲ್ಲ ಸಂಘಟನೆಗಳು ತಮ್ಮ ಪಾಲನ್ನು ಕೇಳುವುದರಲ್ಲಿ ತಪ್ಪಿಲ್ಲ. ಕರ್ನಾಟಕದಲ್ಲಿ

ಸಹಜವಾಗೇನೇ ಮಾದಿಗರು, ಹೊಲೆಯರಿಗಿಂತ ಮುಂದುವರಿದಿರುವ ಭ್ರಮೆ ಬಂದಿಲ್ಲ. ಯಾವುದೇ ಜಾತಿಗೆ ತಾವು ಮುಂದೆ ಬಂದಿವಿ ಅಂತ ಅನ್ನಿಸತೊಡಗುತ್ತದೆ ? ಆದರೆ ಮಾದಿಗರಿಗೆ ಮತ್ತು ಅದರಾಚೆಗಿರುವ ದಕ್ಲೇರಿಗೆ ಅಂತಹ ಭ್ರಮೆ ಇನ್ನೂ ಬಂದಿಲ್ಲ. ಕುರುಬರಿಗೆ ನಾಯಕತ್ವ ಸಿಕ್ತಲ್ಲ ಅದನ್ನು ಲಿಂಗಾಯ್ತರು ಒಪ್ತಾರ ? ಇಲ್ಲ. ಅದೇ ಕುರುಬರು ಬೇರೆ ಪಕ್ಷದ ಈಶ್ವರಪ್ಪನನ್ನು ನಮ್ಮ ನಾಯಕನೇ ಅಂತ ಒಪ್ಪಿಕೊಳ್ತಾರಲ್ಲ. ಹಾಗೆ ಅನಾದಿಯಿಂದ ಹೊಲೆಯರ ರಾಜಕೀಯ ನಾಯಕರೇ ಕರ್ನಾಟಕದ ಮುಂಚೂಣಿಯಲ್ಲಿರುವಾಗ ಮಾದಿಗರು ಅವರನ್ನು ತಮ್ಮ ನಾಯಕರು ಅಂತ ಒಪ್ಪಿಕೊಳ್ಳುವುದನ್ನು ನಾವು ಹೇಗೆ ಬಯಸಬಹುದು? ಸಿದ್ದರಾಮಯ್ಯನವರನ್ನು ಲಿಂಗಾಯ್ತರು ನಮ್ಮ ನಾಯಕ ಅಂತ ಒಪ್ಪದೇ ಇರುವುದನ್ನು ಒಪ್ಪುವ ನಾವು, ಮಾದಿಗರಿಗೆ, ಹೊಲೆಯರಿಗೆ ಮತ್ತು ಈ ಒತ್ತಾಯವನ್ನು ಯಾಕೆ ಹೇರ್ತೀವಿ? ಮಾದಿಗರ ರಾಜಕೀಯ–ಸಾಮಾಜಿಕ, ಶೈಕ್ಷಣಿಕ ಪ್ರಾತಿನಿಧ್ಯದಲ್ಲಿ ಹೊಲೆಯರು ಕೈ ಹಾಕಿರುವುದನ್ನು ಮಾದಿಗರು ಯಾಕೆ ಒಪ್ಪುತ್ತಾರೆ ? ಇದು ಚಾರಿತ್ರಿಕ ಮೋಸ ಅಲ್ವ? ಹೊಲೆಯರವನು ಪೊಲಿಟಿಕಲ್ ಲೀಡರ್ ಆದರೆ ಮಾದಿಗರವನು ಸಂಭ್ರಮಿಸೊಲ್ಲ, ಒಪ್ಪಿಕೊಳ್ಳುವುದೂ ಇಲ್ಲ. ಆದರೆ ಸಾಮಾಜಿಕ, ರಾಜಕೀಯ ಒತ್ತಡ ಹೇಗಿದೆ ಅಂದ್ರೆ ಅದು ಅವರನ್ನು ಒಪ್ಪಿಸೋಕೆ ಹಾತೊರೆಯುತ್ತದೆ. ಆಗ ಸಹಜವಾಗಿ ಮಾದಿಗರು ತಮ್ಮ ಹಕ್ಕನ್ನು ಮುಂದೊಡ್ಡಿ ನಿಲ್ತಾರೆ. ಈ ಸಲುವಾಗಿ 'ಒಳ ಮೀಸಲಾತಿಯ' ಕೂಗು ಹೆಚ್ಚುತ್ತಿದೆ. ಅದು ಸರಿ ಕೂಡ, ಮಾದಿಗರಿಗೆ ಸಲ್ಲಬೇಕಾದ ನ್ಯಾಯ ಸಲ್ಲಲಿಲ್ಲ. ಕಳೆದ ಸರ್ಕಾರದಲ್ಲಿ ಏಳು ಜನ ಬೋವಿ–ಲಂಬಾಣಿ ಜಾತಿಯ ಮಂತ್ರಿಗಳಿದ್ದರಲ್ಲ, ಅವರು ಪ್ರತಿನಿಧಿಸಿದ್ದು ಇಡೀ ಪರಿಶಿಷ್ಟ ಜಾತಿಯ ಸಮುದಾಯದವರನ್ನಲ್ಲ. ಬದಲಿಗೆ, ತಮ್ಮದೇ ಸಮುದಾಯವನ್ನ ಮಾತ್ರ. ಇಲ್ಲಿ ಎಸ್.ಸಿ.ಗಳು ಎಂಬುದನ್ನು ಬಿಟ್ಟು ಹೊಲೆಯರಿಗೆ ಎಷ್ಟು ಟಿಕೇಟ್ ಕೊಡುತ್ತೀರಿ, ಮಾದಿಗರಿಗೆಷ್ಟು ಅಂತ ಕೇಳಿದ್ರೆ ಅದರ ಇಕ್ವೇಷನ್ನೇ ಬೇರೆ ಆಗುತ್ತಿತ್ತು. ಬೋವಿ ಮತ್ತು ಲಂಬಾಣಿಗಳಿಗೆ ಈಗಾಗಲೇ ಸಾಮಾಜಿಕ ಸ್ಥಾನಮಾನ ಹಾಗೂ ಹಣ–ಬಣ್ಣ–ಅಧಿಕಾರ ಕೇಂದ್ರದ ತಿರುವು, ಎಲ್ಲಕ್ಕಿಂತ ಮಿಗಿಲಾಗಿ ಸ್ಪೃಶ್ಯ ಸಮುದಾಯವಾಗಿರುವುದರಿಂದ ಹೆಚ್ಚು ಹೆಚ್ಚು ಅವಕಾಶಗಳು ದೊರೆತವು. ಈ ಅವಕಾಶ ಎಸ್.ಸಿ.ಯ ಶೇ. ೧೫ ಮಂದಿಯಷ್ಟೇ ಪಡೆದುಕೊಂಡದ್ದು. ಅನಂತರದ ಸ್ಥಾನ ಹೊಲೆಯರದು. ನಂತರ ಮಾದಿಗ, ಇದಾದ ಮೇಲೆ ಕಟ್ಟಕಡೆಯ ಭಾಗವಾದ ದಕ್ಲೇರು–ಕೊರಗರು–ಅಲೆಮಾರಿಗಳು ತಮ್ಮ ಪಾಲನ್ನು ಕೇಳಬೇಕಾಗಿದೆ. ದಲಿತ ಸಂಘರ್ಷ ಸಮಿತಿ ಈ ಬಗೆಯ ಪ್ರಶ್ನೆಗಳನ್ನು ಮೊದಲಿಂದ್ಲೂ ಕೇಳಿಲ್ಲ. ಅಲ್ಲದೆ, ಸಂಘರ್ಷ ಸಮಿತಿ ಕೋಲಾರ ಮತ್ತು ಶಿವಮೊಗ್ಗದಂತಹ ಕಡೆ ಪ್ರಬಲವಾಗಿರುವುದರಿಂದ ಕೊರಗರ–ಅಲೆಮಾರಿಗಳ ಪ್ರಶ್ನೆಯನ್ನು ತನ್ನ ಹೋರಾಟದ ನೆಲೆಯಾಗಿಸಿಕೊಳ್ಳಲಿಲ್ಲ. ಈ ಎಲ್ಲ ಒತ್ತಡವನ್ನು ಆಗಿನ ಮುಖ್ಯಮಂತ್ರಿ ಧರ್ಮಸಿಂಗ್ ಕೈಗೆತ್ತಿಕೊಂಡು ಸದಾಶಿವ ಆಯೋಗವನ್ನು ನೇಮಿಸಿತು. ಪರಿಶಿಷ್ಟ ಪಟ್ಟಿಯಲ್ಲಿ ೧೦೧ ಜಾತಿಗಳಿವೆ. ಸಂವಿಧಾನಾತ್ಮಕವಾಗಿ ಸಮಾನವಾಗಿ ಮೀಸಲಾತಿಯ ಅವಕಾಶ ತಲುಪುತ್ತಿದೆಯೋ ಎನ್ನುವ ಮೂಲ ಪ್ರಶ್ನೆಗೆ ಉತ್ತರ ಹುಡುಕುವ ಪ್ರಯತ್ನವೇ ಆ ಆಯೋಗದ ಪ್ರಧಾನ ಕೆಲಸವಾಗಿತ್ತು. ಆಯೋಗಕ್ಕೆ ಹಣ ಬಿಡುಗಡೆ ಆದಮೇಲೆ ಕಿಯೋನಿಕ್ಸ್ ಸಂಸ್ಥೆಗೆ ಈ ಕಾರ್ಯವನ್ನು ವಹಿಸಿದ ಆಯೋಗ ಸುಮಾರು ೯೬ ಲಕ್ಷ ಜನರನ್ನು ಮಾತನಾಡಿಸಿ ವರದಿ ತಯಾರಿಸುತ್ತದೆ. ಶೇ. ೩೩.೪೧ರಷ್ಟು ಮಾದಿಗರು, ಶೇ. ೩೨ ಹೊಲೆಯರು, ಶೇ. ೨೩ ಬೋವಿ, ಲಂಬಾಣಿ, ಇತರೆ ಶೇ. ೪.೬, ೬ ಲಕ್ಷ ಜನ ತಮ್ಮ ಜಾತಿಯನ್ನು ಹೇಳಲು ನಿರಾಕರಿಸಿದ್ದಾರೆಂದು ವರದಿ ಮಾಡುತ್ತದೆ.

ಇದನ್ನೇ ಆರ್ಥಿಕತೆ ಆಧಾರದ ಮೇಲೆ ೪ ಗುಂಪುಗಳನ್ನಾಗಿ ವಿಭಾಗಿಸಿದ ಆಯೋಗವು ಈಗಿರುವ ಶೇ. ೧೮ರಷ್ಟು ಮೀಸಲಾತಿಯಲ್ಲಿ; ಶೇ. ೩ ಬುಡಕಟ್ಟುಗಳಿಗೆ, ಉಳಿದ ಶೇ. ೧೫ಅನ್ನು ೧೦೧ ಜಾತಿಗಳಿಗೆ ಹಂಚಬೇಕು. ಇದೇನು ಬಹಳ ದೊಡ್ಡ ಕೊಡುಗೆ ಅಲ್ಲ ಅಂತ ಬೆಳಿಗ್ಗೆ ಅಮೀನ್ ಮಟ್ಟು ಅವರು ಹೇಳಿದ್ರಲ್ಲ ಅದು ಸರಿಯಾಗೇ ಇದೆ. ಹೀಗೆ ನಾಲ್ಕು ಗುಂಪುಗಳನ್ನಾಗಿಸಿದ ಆಯೋಗವು ಹೊಲೆಯರಿಗೆ ಶೇ. ೫, ಮಾದಿಗರಿಗೆ ಶೇ. ೬, ಬೋವಿ–ಲಂಬಾಣಿ ಮತ್ತಿತರರಿಗೆ ಶೇ. ೩, ಆದಿವಾಸಿಗಳಿಗೆ ಶೇ. ೧, ಹೀಗೆ ಶೇ. ೧೫ರ ಮೀಸಲಾತಿಯನ್ನು ವರ್ಗೀಕರಿಸಿ ಕೊಡಲಾಯಿತು. ಈ ವರದಿಯನ್ನು ಸದಾನಂದ ಗೌಡ್ರು ಮುಖ್ಯಮಂತ್ರಿ ಆಗಿದ್ದಾಗ ಸರ್ಕಾರಕ್ಕೆ ಸಲ್ಲಿಸಲಾಯ್ತು. ಮಾದಿಗರಿಗೆ ಆಗ ಒಂದು ಶಕ್ತಿ ಬಂದಂತಾಯ್ತು. ಅಲ್ಲದೆ ಆಂಧ್ರದ ಮಾದಿಗ ದಂಡೋರದವರ ಒಳ ಮೀಸಲಾತಿ ಗೆಲುವು ಕರ್ನಾಟಕದ ಮಾದಿಗ ದಂಡೋರದವರನ್ನ ತೀವ್ರವಾಗಿ ಸಂಘಟಿಸಲು ಸಹಕಾರಿಯಾಯ್ತು. ಅಲ್ಲದೆ, ಇರುವ ಶೇ. ೧೫ ಸೌಲಭ್ಯವನ್ನು ಜನಸಂಖ್ಯೆಯ ಆಧಾರದ ಮೇಲೆ ಸಮಾನವಾಗಿ ಹಂಚಿಕೊಡುವ ಈ ವರದಿಗೆ ಹೊಲೆಯ ಮತ್ತಿತರ ಜಾತಿಗಳ ಪ್ರಬಲ ಪ್ರತಿರೋಧ ಶುರುವಾಯ್ತು; ದಲಿತ ಸಂಘಟನೆಗಳ ವಿವಿಧ ಬಣದ ನಾಯಕರೇ ಹೇಳುವಂತೆ ಇದರ ಪರಿಣಾಮ ಅಂದರೆ ದಲಿತ ಸಂಘಟನೆಗಳು ಒಡೆದುಹೋಗುತ್ತವೆ ಅಂತ. ಯಾಕೆ ಒಡೀತಾವೆ ? ದಲಿತ ಸಂಘರ್ಷ ಸಮಿತಿ ಇರೋದು ಸಮಗ್ರ ದಲಿತ ಸಮುದಾಯದ ಮೇಲೆ ಆಗುತ್ತಿರುವ ಅನ್ಯಾಯವನ್ನು ತಡೆಗಟ್ಟಲಿಕ್ಕೆ ಮತ್ತು ಸಮಾನ ಅವಕಾಶಕ್ಕೆ ಅನುಕೂಲ ಮಾಡುವ ಸಲುವಾಗಿ, ಸದಾಶಿವ ಆಯೋಗದ ಆದ್ಯತೆ ಕೂಡ ಇದೇ ಆಗಿತ್ತು. ಆದರೆ ಈ ಆಯೋಗದ ಸಲಹೆಯನ್ನು ಹೊಲೆಯರು ಸ್ವಲ್ಪಮಟ್ಟಿಗೆ, ಮಾದಿಗರು ಸಂಪೂರ್ಣವಾಗಿ ಒಪ್ಪಿಕೊಂಡರೆ ಬಂಜಾರ ಮತ್ತು ಬೋವಿ ಸಮುದಾಯದವರು ಪ್ರಬಲವಾಗಿ ಪ್ರತಿಭಟಿಸತೊಡಗಿದರು. ಏಕೆಂದರೆ ಇಡೀ ಶೇ. ೧೫ರಷ್ಟು ಮೀಸಲಾತಿಯಲ್ಲಿ ಅತಿ ಹೆಚ್ಚು ಲಾಭ ಪಡೆದವರೇ ಈ ಸಮುದಾಯದವರು, ಅದರಲ್ಲೂ ಬೋವಿ ಸಮುದಾಯಕ್ಕೆ ಈ ಅವಕಾಶ ತಪ್ಪಿಹೋಗುವ ಅಪಾಯ ಮೊದಲೇ ತಿಳಿದಿದ್ದರಿಂದ ಲಂಬಾಣಿಗಳೊಂದಿಗೆ ಕೈ ಜೋಡಿಸಿ ಮಾದಿಗರಿಗಿಂತ ಶೇ. ೧ರಷ್ಟು ಕಡಿಮೆ ಇರುವ ಹೊಲೆಯರನ್ನು ಹುರಿದುಂಬಿಸಿ ತಮ್ಮ ಹೋರಾಟವನ್ನು ತೀವ್ರಗೊಳಿಸಿದರು. ಆದರೆ ಹೊಲೆಯರಿಗೆ ಈ ಒಳಮುಸುಕಿನ ಮರ್ಮ ತಿಳಿಯಲಿಲ್ಲ. ಈ ಎಲ್ಲ ರಂಪಾಟದಿಂದ ಆ ಸರ್ಕಾರ ವರದಿಯನ್ನು ಜಾರಿಗೊಳಿಸಲಿಲ್ಲ. ಅಲ್ಲದೆ, ಆ ಸರ್ಕಾರದಲ್ಲಿ ಮೀಸಲಾತಿಯ ಅತಿ ಹೆಚ್ಚು ಲಾಭ ಪಡೆದವರೇ ಲಂಬಾಣಿ–ಬೋವಿ ಸಮುದಾಯವಾಗಿದ್ದರಿಂದ ಸದಾನಂದ ಗೌಡ್ರು ಮೌನ ವಹಿಸಿದರು. ಈಗಿನ ಸಿದ್ದರಾಮಯ್ಯನವರ ಸರ್ಕಾರ ತಾತ್ವಿಕವಾಗಿ ಈ ವರದಿಯನ್ನು ಸಂಪೂರ್ಣವಾಗಿ

ಕಾವ್ಯಲೋಕ

# ಬಾಡಿಹೋದ ಹೂ

**ನಿ**ನಗಾಗಿ ಪ್ರೀತಿಯ ಮಹಲು
ಕಟ್ಟದಿದ್ದರೆ ಏನಾಯಿತು ಪ್ರಿಯೇ
ನಿನಗಾಗಿ ನನ್ನ ಮನದ
ಗುಡಿಸಲಲ್ಲಿ ಗುಡಿ
ಕಟ್ಟಿ ದೇವತೆಯಂತೆ ಪೂಜಿಸುವೆ
ಆದರೂ ಈ ಪ್ರೀತಿ ನಿನ್ನ
ಕಣ್ಣಿಗೆ ಕಾಣದೆ
ಆ ಗೋಡೆಯ ಮಹಲಿಗೆ ಆಸೆ
ಪಟ್ಟು ಬಿಟ್ಟು ಹೋಗಿರುವೆ ಏಕೆ ?

ಬೇಡಿದ ವರವೆಲ್ಲ ಸಿಗುವುದಿಲ್ಲ
ಬಯಸದೆ ಸಿಕ್ಕ ವರ ನೀನು
ನಾ ಕೊಟ್ಟ ಹೂ ಬಾಡುವ
ಮೊದಲೇ ನೀ ನನ್ನ ಬಿಟ್ಟು ಹೋದೆ

**ನಿವೇದಿತಾ ಸು. ಸೋಲಾಪುರ**
ಪತ್ರಿಕೋದ್ಯಮ ಮತ್ತು ಸಮೂಹ ಸಂವಹನ ವಿಭಾಗ
ಕ.ರಾ.ಮ.ವಿ.ವಿ., ಜ್ಞಾನಶಕ್ತಿ ಆವರಣ, ವಿಜಯಪುರ

ಒಪ್ಪಿದೆ. ಆದರೆ ಇದನ್ನು ಜಾರಿಗೊಳಿಸಲಾಗುವುದಿಲ್ಲ. ಏಕೆಂದರೆ ಇದನ್ನು ಕೇಂದ್ರ ಸರ್ಕಾರದಲ್ಲಿಟ್ಟು ರಾಷ್ಟ್ರಪತಿಗಳ ಅಂಕಿತವಾದ ಮೇಲೆ ಜಾರಿಗೊಳ್ಳಬೇಕಾಗುತ್ತದೆ. ಇದು ಸದಾಶಿವ ಆಯೋಗದ ಕತೆ. ಇನ್ನು ನನ್ನ ಆರ್ಗ್ಯುಮೆಂಟ್ ಏನಂದ್ರೆ ವೈಜ್ಞಾನಿಕವಾಗಿ ಇದನ್ನು ನಾವು ಅರ್ಥ ಮಾಡಿಕೊಳ್ಳಬೇಕು. ಈ ಪ್ರಶ್ನೆಯನ್ನು ನಿಮಗೇ ಬಿಡ್ತೇನೆ. ಈ ವರದಿ ಜಾರಿಗೆ ಬಂದರೆ ದಲಿತರ ನಡುವೆ ಒಡಕು ಹೇಗಾಗುತ್ತೆ? ಹೊಲೆಯರು ಮತ್ತು ಮಾದಿಗರ ನಡುವಿನ ಎಡ-ಬಲ ಎಂಬ ಪ್ರಶ್ನೆಯನ್ನು ಜಗಳ ಅಂತ ಕರೀಬಹುದೇ? ಅದು ಅವರವರ ಹಕ್ಕಿನ ಹೋರಾಟ ಮಾತ್ರ. ಇವರಿಬ್ರೂ ಒಂದಾಗಿದ್ರು ಅನ್ನೋದೇ ಸುಳ್ಳು. ಯಾವ ಕಾರಣಕ್ಕೂ ಸಾಂಸ್ಕೃತಿಕವಾಗಿ ಅವರು ಬೇರೆ ಬೇರೆ ಜಾತಿಗಳೇ. ಇಂತಹ ಅವೈಜ್ಞಾನಿಕವಾದ ಸೈದ್ಧಾಂತಿಕ ತಳಹದಿ, ಪುರಾವೆ ಇಲ್ಲದ ಮಾತುಗಳನ್ನು ಆಡೋದನ್ನು ನಿಲ್ಸಿ, ಒಂದು ಇಂಟರ್‌ನಲ್ ಡೆಮಾಕ್ರಸಿ ಅಂತ ಏನಾದ್ರು ಇದ್ರೆ, ತಕ್ಷಣವೇ ನಮ್ಮಂತಹ ತಳಸಮುದಾಯದ ಜಾತಿಯವರೆಲ್ಲಾ ಸೇರಿ ಸದಾಶಿವ ಆಯೋಗದ ವರದಿಯನ್ನು ಜಾರಿಗೊಳಿಸಲು ಒತ್ತಾಯಿಸಬೇಕು. ಯಾವ ಹಿತಾಸಕ್ತಿಗಾಗಿ ಇದನ್ನು ತಡೆಯಲಾಗುತ್ತಿದೆ? ದಲಿತ ಸಂಘರ್ಷ ಸಮಿತಿಗೂ ಇದಕ್ಕೂ ಯಾಕೆ ತಳಕುಹಾಕಬೇಕು? ದಸಂಸ ಹಾಸ್ಟೆಲ್ ಸೌಲಭ್ಯ, ಮೀಸಲಾತಿ, ದೌರ್ಜನ್ಯ ವಿರೋಧಿ ಹೋರಾಟ ಅಂತ ಸದಾ ಸಿದ್ಧವಾಗಿರುತ್ತೆ ಮತ್ತು ಮಾಡ್ತಾನೆ ಇದೆ. ಒಳ ಮೀಸಲಾತಿ ಹೋರಾಟದಿಂದ ಡಿ.ಎಸ್.ಎಸ್. ಒಡೆದುಹೋಗಲ್ಲ. ಈ ಜಾತಿಗಳಿಗೆ ಒಂದು ಸಾಮಾಜಿಕತೆ ಇರಬೇಕು. ಕಾಂಪಿಟಿಷನ್ ಇಲ್ಲ ಅಂತ ಮಾತಾಡುತ್ತಾರೆ. ಹೊಲೆಯರಿಗೆ ಸಾಮಾಜಿಕ ಬಂಡವಾಳ ಮಾದಿಗರಿಗಿಂತ ಜಾಸ್ತಿ ಇದೆ. ಏನು ಸಾಮಾಜಿಕ, ಸಾಂಸ್ಕೃತಿಕ ಬಂಡವಾಳ ಅಂದ್ರೆ. ಒಬ್ಬ ವ್ಯಕ್ತಿಗೆ ಸಮಾಜದೊಳಗಿರುವ ಸಂಪರ್ಕ. ಎಲ್ಲರೂ ಮಾತಾಡುವಂತೆ ಬ್ರಾಹ್ಮಣರು ಬುದ್ಧಿವಂತರು ಅಂತ ಹೇಳ್ತಾರಲ್ಲ ಹಾಗೆ. ಅದು ಬುದ್ಧಿವಂತಿಕೆ ಅಲ್ಲ, ಸಾಮಾಜಿಕ ಮತ್ತು ಸಾಂಸ್ಕೃತಿಕ ಬಂಡವಾಳ. ಅವರ ಈ ಬಂಡವಾಳವನ್ನು 'ಬುದ್ಧಿವಂತಿಕೆ' ಅಂತ ಕರೆಯಲಾಗಿದೆ. ಒಂದು ಉದಾಹರಣೆ ತಗೊಳ್ಳಿ. ಒಂದು ಪಾಸ್‌ಪೋರ್ಟ್‌ಗೆ ಸಹಿ ಹಾಕಲು ಡಿ.ಸಿ. ಬೇಕು. ಆದ್ರೆ ನನ್ನಂತಹ ಒಬ್ಬ ಮೇಷ್ಟ್ರಿಗೆ ಯಾವ ಡಿ.ಸಿ.ಯೂ ಪರಿಚಯ ಇರಲ್ಲ. ನಾನು ದುಡ್ಡಿನ ಬಗ್ಗೆ, ಬಂಡವಾಳದ ಬಗ್ಗೆ ಮಾತನಾಡುತ್ತಿಲ್ಲ. ಸಾಂಸ್ಕೃತಿಕ ಮತ್ತು ಸಾಮಾಜಿಕ ಬಂಡವಾಳ ಅಂದ್ರೆ 'ವ್ಯಕ್ತಿ ಸಂಪರ್ಕ'ದ ಬಗ್ಗೆ ಹೇಳ್ತಿದೀನಿ. ಮಾದಿಗರಿಗೆ ಇರುವ ಈ ವ್ಯಕ್ತಿ ಸಂಪರ್ಕದ ಸಾಮಾಜಿಕ ಮತ್ತು ಸಾಂಸ್ಕೃತಿಕ ಬಂಡವಾಳ ಹೊಲೆಯರಿಗೆ ಹೋಲಿಸಿದರೆ ಕಡಿಮೇನೇ. ಆದರೆ ಅವರು ತಮ್ಮ ಈ ಕೊರತೆಯನ್ನು ಸರಿಪಡಿಸಿಕೊಳ್ಳಬೇಕಾಗಿದೆ. ಅದಕ್ಕೆ ಬೇಕಿರುವುದು ಈ ಒಳ ಮೀಸಲಾತಿಯ ಸೌಲಭ್ಯ ಅಲ್ವೆ? ಹಾಗಾಗಿ ಇರುವ ಕಿಂಚಿತ್ ಪ್ರಮಾಣದ ಕೇಕನ್ನು ನಾಲ್ಕು ಭಾಗ ಮಾಡಿ ಹಂಚಿಕೊಂಡು ತಿನ್ನುವುದರಿಂದ ಯಾರಿಗೂ ಯಾವುದೇ ತೊಂದರೆ ಆಗುವುದಿಲ್ಲ. ಇದು ನನ್ನ ಅಭಿಪ್ರಾಯ.

ಮತ್ತೊಂದು ಮಗ್ಗುಲಿಂದಲೂ ಯೋಚಿಸೋಣ. ಈಗ ಇಂಟರ್‌ನಲ್ ರಿಸರ್ವೇಶನ್ (ಒಳ ಮೀಸಲಾತಿ) ಜಾರಿಗೆ ಬಂದಿದೆ ಅಂತ್ಲೆ ಇಟ್ಕೊಳ್ಳಿ. ಏನಾಗತ್ತೆ? ಸಂಘಟನೆಗೆ ಯಾವ ಧಕ್ಕೆನೂ ಇಲ್ಲ. ಅಥವಾ ಸವರ್ಣೀಯರು ಮೇಲುಗೈ ಸಾಧಿಸ್ತಾರೆ ಅಂತಾರೆ. ಅವರು ಈಗಾಗಲೇ ಮೇಲುಗೈ ಸಾಧಿಸಿಲ್ವ? ಮಾನಸಿಕವಾಗಿ, ಸಾಂಸ್ಕೃತಿಕವಾಗಿ ಈಗಾಗಲೇ ಎಲ್ಲ ಅವಕಾಶವನ್ನು ಪಡೆದಿದ್ದಾರೆ. ಅವರ ಕೈ ನಮ್ಮ ತಲೆಮೇಲೆ ಚಾಚದಂತೆ ತಡೆಯೊಡ್ಡುವಲ್ಲೇ ನಮ್ಮ ಜೀವನದ ಹೋರಾಟ ನಡೆದುಕೊಂಡುಬಂದಿದೆ. ಹಾಗಾಗಿ, ಇರುವ ಶೇ. ೧೫ರಷ್ಟು ಮೀಸಲಾತಿ ಒಳ ಮೀಸಲಾತಿ ಮೂಲಕ ಜಾರಿಯಾದರೆ ಈಗಾಗಲೇ ಬಲೂನ್ ತರಹ ಒಂದು ಭ್ರಮೆ ಕಟ್ಟಿಕೊಂಡಿದ್ದೀವಲ್ಲ, ಅಂತಹ ಗುಣಾತ್ಮಕ ಬದಲಾವಣೆ ಆಗಲ್ಲ. ಯಾಕಂದ್ರೆ ಸರ್ಕಾರಿ ನೌಕರೀನೇ ೧ ಕೋಟಿ ಇದೆ ಅಂತ ಇಟ್ಕೊಳ್ಳಿ. ಇಡೀ ಭಾರತದಲ್ಲಿ ಇರಬಹುದಾದ ಮೀಸಲಾತಿ ನಿಜವಾಗಲೂ ಜಾರಿಯಾಗಿದೆಯಾ? ಈ ಜಾಗತೀಕರಣ, ಖಾಸಗೀಕರಣದ ಜೊತೆಯಲ್ಲಿ ಮುಚ್ಚಿಹೋಗುತ್ತಿರುವ ಸರ್ಕಾರಿ ನೌಕರಿಗಳಲ್ಲಿ ಈ ಮೀಸಲಾತಿಯ ಗೋಳನ್ನು ನಿಭಾಯಿಸುವುದು ಹೇಗೆ? ಕೆ.ಇ.ಬಿ.ಯಂತಹ ನಿಗಮವನ್ನೇ ತಗೊಳ್ಳಿ, ಎಲ್ಲವೂ ಔಟ್‌ಸೋರ್ಸಿಂಗ್ ಆಗುತ್ತಿವೆ. ಎಲ್ಲ ಕಡೆ ಸಂಪೂರ್ಣವಾಗಿ ಮೀಸಲಾತಿಯನ್ನು ಅಳಿಸಿಹಾಕಲಾಗುತ್ತಿದೆ. ಹಾಗಾಗಿ ನಮ್ಮ ಯುದ್ಧ ಒಳ ಮೀಸಲಾತಿಗಾಗಿ, ಸರ್ಕಾರಿ ಮೀಸಲಾತಿಗಾಗಿ ಬಡಿದಾಡುವುದು ಮುಖ್ಯವಲ್ಲ. ನಾವೆಲ್ಲರೂ ಬೇರೆ ಬೇರೆ ಎಂಬುದು ಎಷ್ಟು ನಿಜವೋ ಇದು ಜಾತಿಗಳ ಒಕ್ಕೂಟ ರಾಜ್ಯ ಎಂಬುದೂ ಅಷ್ಟೇ ನಿಜ. ಓಬಿಸಿಗಳದ್ದು ಇನ್ನಷ್ಟು ಗೋಳಿದೆ. ಅವರು ಆರು ಬಿದ್ರೆ ಅತ್ತೆ ಕಡೆ, ಮೂರು ಬಿದ್ರೆ ಸೊಸೆ ಕಡೆ ಅನ್ನೋ ತರಹ. ತುಂಬ ಅಭದ್ರ ಮನಃಸ್ಥಿತಿಯುಳ್ಳವರು. ಅವರಿಗೆ ಯಾರ ಜೊತೆ ಇರಬೇಕು ಅನ್ನೋ ಸ್ಪಷ್ಟತೇನೂ ಇಲ್ಲ. ಸಾಮಾಜಿಕವಾಗಿ ಹೊಂದಾಣಿಕೆ ಮಾಡಿಕೊಳ್ಳುವ ಧೈರ್ಯ್ಯಾನೂ ಇಲ್ಲ. ಲಿಂಗಾಯ್ತರ-ಬ್ರಾಹ್ಮಣರ ಬಾಲ ಹಿಡ್ಕಂಡು ಹೋಗೋಕೆ ಯಾವಾಗಲೂ ತಯಾರಾಗಿದ್ದಾರೆ. ಮೀಸಲಾತಿ ಮತ್ತೊಂದು ಅಂತ ಹೋರಾಟ ಮಾಡಬೇಕಾದಾಗ ಓಬಿಸಿಗಳಿಗೆ ದಲಿತರು ನೆನಪಾಗುತ್ತಾರೆ. ಆಗ ಮಾತ್ರ ಭಾಳ ಫ್ರೆಂಡ್ಲಿಯಾಗಿ ಬರ್ತಾರೆ. ಇಷ್ಟು ಬೆಸ್ಟ್ ಫ್ರೆಂಡ್‌ಶಿಪ್ ಅವರದು. ಹೊಡೆದಾಟ-ಹಲ್ಲೆ ಮಾಡುವ ಈ ಓಬಿಸಿಗಳು ಗೌಡ್ರು-ಲಿಂಗಾಯ್ತರ ಜೊತೆ ಸೇರ್‍ಕಂಡುಬಿಡ್ತಾರೆ. ಇವರೆಲ್ಲ ಅರ್ಥ ಮಾಡಿಕೋಬೇಕು. ಖಂಡಿತವಾಗಿ ಸಾಂಸ್ಕೃತಿಕವಾಗಿ ನಾವೆಲ್ಲ ಬೇರೆ ಬೇರೇನೆ. ಇದರಿಂದ ಜಾತಿಗಳ ಒಕ್ಕೂಟವನ್ನು ಮಾಡಬೇಕು. ಡಿಎಸ್‌ಎಸ್ ಅಂದ್ರೆ ಎಲ್ರನ್ನು ಒಟ್ಟು ಮಾಡಿಕೊಂಡಿರೋದು. ಹಾಗೆ ಒಟ್ಟುಗೂಡಿಸಿ ಅದರ ಮೇಲೆ ಒಂದು ದೊಡ್ಡ ಬಟ್ಟೆ ಹಾಕಿಬಿಡೋದು. ಅದರೊಳಗೆ ಯಾರೋ ಉಸುರು ಕಟ್ಟಿತ್ತಿದ್ದಾರೆ, ಯಾರು ಯಾರು ವಿಲವಿಲ ಒದ್ದಾಡ್ತಾರೋ, ಯಾರಿಗೆ ಹಾರ್ಟ್ ಅಟ್ಯಾಕ್ ಆಗಿದೆಯೋ ಅದ್ಯಾವುದನ್ನೂ ಕೇಳುವಂತಿಲ್ಲ. ಕೇಳಿದರೆ ಡಿ.ಎಸ್.ಎಸ್. ಒಡೆದುಹೋಗುತ್ತೆ ಅಂದುಬಿಡ್ತಾರೆ. ಕೊರಚರು, ಕೊರಮರು, ಹೊಲೆಯರು-ಮಾದಿಗರು... ಹೀಗೆ ಒಂದೇ ರಾಷ್ಟ್ರೀಯತೆ ಅಡಿಯಲ್ಲಿ ಬಹುತ್ವ ಸಂಸ್ಕೃತಿ ಇದೆಯಲ್ಲ ಇಂಡಿಯಾದಲ್ಲಿ, ಹಾಗೆ ನಮ್ಮ ಡಿ.ಎಸ್.ಎಸ್.ಗಳಿವೆ. ಇವೆಲ್ಲ ಒಕ್ಕೂಟವಾಗಿ ಬೇರೆ ಬೇರೆಯ ಹೊಡೆತವನ್ನು ತಡೆಯಲು ಸಾಧ್ಯವಿಲ್ಲ. ಆದ್ದರಿಂದ ಜಾತಿಗಳ ಒಕ್ಕೂಟ ರಚನೆಯಿಂದ ಜಾತಿ ವಿನಾಶ ಮಾಡಬಹುದೇ ಹೊರತು, ಅಂಬೇಡ್ಕರ್ ಹೇಳಿದಂತೆ ಜಾತಿಗಳ ನಡುವಿನ ತಾರತಮ್ಯ ತಪ್ಪಿಸಬಹುದು. ಹಾಗಾಗಿ ಮೀಸಲಾತಿ ಅನ್ನುವುದು ಶಾಶ್ವತ ಪರಿಹಾರವಲ್ಲ. ಈ ಖಾಸಗೀಕರಣ, ಜಾಗತೀಕರಣಗಳ ದೊಡ್ಡ ಹೊಡೆತದ ನಡುವೆ ನಾವು ಕಿಂಚಿತ್ ಶೇ. ೧೫ದಕ್ಕಾಗಿ ಬಡಿದಾಡುವುದು ನಗೆಪಾಟಲಿಗೀಡಾದಂತೆ ಅಲ್ಲವೆ? ಇದಕ್ಕೆ ಬೇಕಿರುವುದು ಅಗತ್ಯವಾದ ಕೌಶಲ್ಯವನ್ನು ರೂಢಿಸಿಕೊಳ್ಳುವುದು. ಇದಕ್ಕೆ ಬೆಸ್ಟ್ ಮಾಡೆಲ್ ನಾರಾಯಣಗುರು ಅಂತ ತಿಳಿಯೋಣ. ಡಿ.ಎಸ್.ಎಸ್. ಈ ಬಗೆಯಲ್ಲಿ ಮೊದಲಿಂದ ಯೋಚಿಸಿದ್ರೆ ಚೆನ್ನಾಗಿತ್ತು. ಯಾವುದೇ ಕೌಶಲ್ಯಯುತ ಆರ್ಥಿಕ ಶಿಸ್ತನ್ನು ಸಣ್ಣ-ಸಣ್ಣ ಜಾತಿಗಳು ಹೊಂದಲು ಅನುಕೂಲ ಮಾಡಬಹುದಿತ್ತು. ಆದರೆ ಓ.ಬಿ.ಸಿ.ಗಳು, ಸಣ್ಣ ಸಣ್ಣ ಜಾತಿಗಳು, ತಮ್ಮ ಜಾತಿ ಹೆಸರಿನ ಹಾಸ್ಟೆಲ್ ಸ್ಕೂಲ್‌ಗಳನ್ನು ತೆರೆದುಕೊಳ್ಳುತ್ತವೆ. ಆದರೆ ಮಾದಿಗರು-ಹೊಲೆಯರು ಇದರಲ್ಲಿ ಭಾಳ ಹಿಂದಿದ್ದಾರೆ, ಸಣ್ಣ ಪುಟ್ಟದಕ್ಕೂ ಡಿಪೆನ್‌ಡೆನ್ಸಿ ಸಿಂಡ್ರೋಮ್‌ಗಳಾಗಿ ಸರ್ಕಾರವೇ ಎಲ್ಲವನ್ನೂ ಮಾಡ್ಲಿ ಅಂತ ಕಾಯ್ತಾರೆ. ಆರ್ಥಿಕ ಶಿಸ್ತು-ಜವಾಬ್ದಾರಿ ಬೇಕು. ಹೊಲೆಯ-ಮಾದಿಗ-ಓ.ಬಿ.ಸಿ.ಗಳಲ್ಲಿ ಈಗ ದುಡ್ಡಿರುವ ಒಂದು ಮಧ್ಯಮ ವರ್ಗ ಬಂದಿದೆ. ಅವರೆಲ್ಲ ಸೇರಿ ಈ ಬಗೆಯ ಆರ್ಥಿಕ ಹೊಣೆಗಾರಿಕೆಯನ್ನು, ಚಟುವಟಿಕೆಯನ್ನು ಹೆಚ್ಚು ಹೊರಬೇಕಾಗಿದೆ. ಅವರದೇ ಜಾತಿಯ ಬಡವರ ಕುರಿತು ಕಾರ್ಯಕ್ರಮ ರೂಪಿಸಿಕೊಳ್ಳಬೇಕಾಗಿದೆ.

ಎಲ್ಲ ಸರ್ಕಾರಿ ಶಾಲೆಗಳು ಮುಚ್ಚಿದ ಮೇಲೆ ಮಕ್ಕಳೆಲ್ಲ ಎಲ್ಲಿ ಸೇರಬೇಕು? ಖಾಸಗಿ ಶಾಲೆಗಳೇ ಅಲ್ವ, ಎಲ್ಲ ಸರ್ಕಾರಿ ಕಚೇರಿಗಳು ಹೊರಗುತ್ತಿಗೆ ಆದಮೇಲೆ ಮೀಸಲಾತಿ ಪ್ರಶ್ನೆ ಎಲ್ಲಿಂದ ಬರುತ್ತೆ? ಆದ್ದರಿಂದ ಆರ್ಥಿಕ ಕೌಶಲ್ಯವನ್ನು ಎಲ್ಲ ಜಾತಿಗಳು ಒಕ್ಕೂಟಗಳಾಗಿ ಸೇರಿಕೊಂಡು ಆ ಚಟುವಟಿಕೆಗಳನ್ನು ಹೆಚ್ಚಿಸಿಕೊಂಡಾಗ ಮಾತ್ರ ಚೈತನ್ಯ ಬರಲು ಸಾಧ್ಯ. ಆದ್ದರಿಂದ ಈ ಒಳ ಮೀಸಲಾತಿಯ ಸದಾಶಿವ ಆಯೋಗ ಜಾರಿಯಾಗಿ ಬಂದೇ ಬಿಡ್ತು ಅಂದ್ರೂ ಅಂತಹ ಮಹತ್ತರ ಬದಲಾವಣೆ ಆಗಲ್ಲ. ಆದ್ರೆ ಅದು ಜಾರಿಯಾಗಬೇಕು. ಧನ್ಯವಾದಗಳು.

*('ಒಳ ಮೀಸಲಾತಿ ಸಾಮಾಜಿಕ ಪ್ರಶ್ನೆಗಳು' ವಿಚಾರ ಸಂಕಿರಣದಲ್ಲಿ ಡಾ॥ ಸಿ. ಜಿ. ಲಕ್ಷ್ಮೀಪತಿಯವರು ಮಾಡಿದ ಭಾಷಣದ ಅಕ್ಷರ ರೂಪ)*

**ಡಾ॥ ಕುಂಸಿ ಉಮೇಶ್**
ಸಂಯೋಜಕರು
ಅಲ್ಲಮ ಕನ್ನಡ ಸ್ನಾತಕೋತ್ತರ ಅಧ್ಯಯನ ವಿಭಾಗ
ಶಿಕಾರಿಪುರ - ೫೭೭ ೪೨೭, ಶಿವಮೊಗ್ಗ ಜಿಲ್ಲೆ

# ವೃತ್ತಿರಂಗಭೂಮಿಯಲ್ಲಿ ಉತ್ತರ ಕರ್ನಾಟಕದ ಸಂಗೀತಗಾರ್ತಿಯರು

ಡಾ॥ ದೇವಿಕಾ ಡಿ. ನಗರಕರ

**ಕ**ರ್ನಾಟಕದ ವೃತ್ತಿರಂಗಭೂಮಿಯ ಇತಿಹಾಸ ಕೇವಲ ೧೫೦ ವರ್ಷದ್ದು. ಆರಂಭದ ಮೂವತ್ತೈದು ವರ್ಷಗಳು ಕೇವಲ ಪುರುಷರ ಪಾರುಪತ್ಯಕ್ಕೆ ಒಳಪಟ್ಟಿದ್ದರೆ, ನಂತರ ೧೧೫ ವರ್ಷದ ವೃತ್ತಿರಂಗಭೂಮಿಯ ಇತಿಹಾಸದಲ್ಲಿ ಮಹಿಳೆಯರೇ ಧ್ರುವತಾರೆಯರಾಗಿ ಕಂಡುಬರುತ್ತಾರೆ. ಪ್ರಾರಂಭದ ವೃತ್ತಿರಂಗಭೂಮಿ ವಾರದಲ್ಲಿ ಮೂರು ದಿನ ನಾಟಕ ಪ್ರದರ್ಶನ ಮಾಡಿದರೆ, ನಾಲ್ಕು ದಿನ ಪ್ರವಚನಕ್ಕೆ ಮೀಸಲಾಗಿರುತ್ತಿತ್ತು. ಆದರೆ ಯಾವಾಗ ವೃತ್ತಿರಂಗಭೂಮಿಗೆ ಮಹಿಳೆಯರು ಕಾಲಿಟ್ಟರೋ ಆಗಿನಿಂದ ವೃತ್ತಿರಂಗಭೂಮಿಯ ಖದರ್ ಬೇರೆ ಆಯಿತು. ವಾರವಿಡೀ ನಾಟಕ ಪ್ರದರ್ಶನಗಳು ನಡೆಯತೊಡಗಿದವು. ಈ ಕ್ಷೇತ್ರದಲ್ಲಿ ಮಹಿಳೆಯರ ಪ್ರವೇಶದ ನಂತರ ಆದ ಬದಲಾವಣೆಗಳು ಒಂದೇ ಎರಡೇ ? ಇವರೆಲ್ಲ ಪಾತ್ರಗಳಿಗೆ ಸಹಜತೆ ತಂದವರು (ಅದುವರೆಗೆ ಪುರುಷರೇ ಸ್ತ್ರೀ ಪಾತ್ರ ನಿರ್ವಹಿಸುತ್ತಿದ್ದರು), ಶರೀರ–ಶಾರೀರ–ಸೌಂದರ್ಯಗಳಿಂದ ಪ್ರೇಕ್ಷಕರನ್ನು ಸೆರೆಹಿಡಿದವರು, ಹೊಸ ವೃತ್ತಿರಂಗ ಮಂಡಳಿಗಳು ಹುಟ್ಟಿಕೊಳ್ಳುವುದಕ್ಕೆ ಪ್ರೇರಣೆಯಾದವರು, ನಟನೆಯನ್ನು ಒಂದು ವೃತ್ತಿಯನ್ನಾಗಿ ಪರಿವರ್ತಿಸಿದವರು, ವೃತ್ತಿರಂಗಭೂಮಿಯ ಕೀರ್ತಿಯನ್ನು ಉತ್ತುಂಗಕ್ಕೇರಿಸಿದವರು; ವೃತ್ತಿರಂಗಭೂಮಿಯ ಪುರುಷ ಪ್ರಧಾನ ವ್ಯವಸ್ಥೆಯ ವಿರುದ್ಧ ಬಂಡೆದ್ದು ತಾವೇ ಕಂಪನಿಗಳನ್ನು ಕಟ್ಟಿದವರು, ವೃತ್ತಿರಂಗಭೂಮಿಯಲ್ಲಿ ಅಸಮಾನತೆ ಮತ್ತು ಜಾತೀಯತೆಯನ್ನು ನಿರ್ಮೂಲನ ಗೊಳಿಸಿದವರು, ಹಲವಾರು ಮಹಾನ್ ನಟರನ್ನು ವೃತ್ತಿರಂಗಕ್ಕೆ ಪರಿಚಯಿಸಿದವರು ಮತ್ತು ಸಂಗೀತವನ್ನು ಜನಸಾಮಾನ್ಯರಿಗೆ ತಲುಪಿಸಿದವರು.



*ಗೋಹರಜಾನ್ ಅಮೀರಜಾನ್ ಕರ್ನಾಟಕಿ*

ಸಕ್ಕರಿ ಬಾಳಾಚಾರ್ಯರಂತಹ ಮಡಿವಂತರಿಂದ ಆರಂಭವಾದ ಉತ್ತರ ಕರ್ನಾಟಕದ ವೃತ್ತಿರಂಗಭೂಮಿ ನಂತರದ ದಿನಗಳಲ್ಲಿ ದಲಿತ ಮಹಿಳೆಯರ ಪ್ರಭಾವಕ್ಕೆ ಒಳಗಾಯಿತು.

ಇದು ಅತಿಶಯೋಕ್ತಿಯಲ್ಲ, ವಾಸ್ತವ. ವೃತ್ತಿರಂಗಭೂಮಿಯ ಇತಿಹಾಸ ಬಲ್ಲವರಿಗೆ ಗೊತ್ತಿರುವ ಸಂಗತಿ. ಇವರು ಅಭಿನೇತ್ರಿಯರಾಗುತ್ತಾರೆ, ಉತ್ತಮ ಸಂಗೀತಗಾರ್ತಿಯ ರಾಗುತ್ತಾರೆ, ತಾವೇ ಸ್ವತಃ ಮಂಡಳಿಗಳನ್ನು ಕಟ್ಟಿ ಒಡತಿಯರೆನಿಸಿಕೊಳ್ಳುತ್ತಾರೆ, ವಿಶೇಷ ಪಾತ್ರಗಳಿಗೆ ಹೆಸರಾಗುತ್ತಾರೆ, ನೋಡನೋಡುತ್ತಿದ್ದಂತೆಯೇ ವೃತ್ತಿರಂಗ ಭೂಮಿಯನ್ನು ಉತ್ತುಂಗಕ್ಕೊಯ್ಯುತ್ತಾರೆ. ಹೀಗೆ ವೃತ್ತಿರಂಗಭೂಮಿಯಲ್ಲಿ ಮಹಿಳೆಯರ ಭಾಗವಹಿಸುವಿಕೆ ಅನೇಕ ಆಯಾಮಗಳನ್ನೊಳಗೊಂಡಿದ್ದು, ಇಲ್ಲಿ ನಾನು ಸಂಗೀತಗಾರ್ತಿಯರ ಕುರಿತು ಪ್ರಸ್ತಾಪಿಸುತ್ತಿದ್ದೇನೆ. ಇವರಲ್ಲಿ ಪ್ರಮುಖರಾದವರೆಂದರೆ, ಲಕ್ಷ್ಮೇಶ್ವರದ ಬಚ್ಚಾಸಾನಿ, ಗಂಗೂಬಾಯಿ ಗುಳೇದಗುಡ್ಡ, ಸೋನು ಬಾಯಿ ದೊಡ್ಡಮನಿ, ಅಮೀರಜಾನ್ ಗೋಹರಜಾನ್ ಕರ್ನಾಟಕಿ ಸಹೋದರಿಯರು, ಜುಬೇದಾಬಾಯಿ ಸವಣೂರ, ಸುಭದ್ರಮ್ಮ ಮನಸೂರು ಮತ್ತು ಸರೋಜಮ್ಮ ಧುತ್ತರಗಿ.

**ಲಕ್ಷ್ಮೇಶ್ವರದ ಬಚ್ಚಾಸಾನಿ**

ಲಕ್ಷ್ಮೇಶ್ವರದ ಲಕ್ಷ್ಮೀಲಿಂಗಕ್ಕೆ ಕಲಾಸೇವೆಯನ್ನು ಸಲ್ಲಿಸುತ್ತಿದ್ದ ದೇವದಾಸಿ ಮನೆತನ ಬಚ್ಚಾಸಾನಿಯವರದು. ಅಂತೆಯೇ ಶಾಸ್ತ್ರೋಕ್ತ ಸಂಗೀತಾಭ್ಯಾಸ ಇವರಿಗಿತ್ತು. ಗ್ವಾಲಿಯರ್ ಘರಾನದ ಅಭಿಜಾತ ಗಾಯಕಿಯ ಕುಟುಂಬ ತುಂಬ ದೊಡ್ಡದಾಗಿತ್ತು. ಅದಕ್ಕಾಗಿಯೇ ದೊಡ್ಡಮನಿ ಎಂಬ ರೂಢನಾಮ ಅಂಕಿತನಾಮವೂ ಆಗಿರಬೇಕು. ಲಕ್ಷ್ಮೀಲಿಂಗದ ಕಲಾಸೇವೆಯಿಂದ ದೊಡ್ಡ ಕುಟುಂಬವನ್ನು ಸಲಹುವುದು ಕಷ್ಟವೇ. ಈ ಸಂದರ್ಭದಲ್ಲಿ ಹೊಟ್ಟೆಪಾಡಿಗಾಗಿ ಬಚ್ಚಾಸಾನಿ ಆಯ್ಕೆಮಾಡಿಕೊಂಡದ್ದು ವೃತ್ತಿರಂಗಭೂಮಿಯನ್ನು. ಆ ಹೊತ್ತಿಗಾಗಲೇ ಶಿವಮೂರ್ತಿಸ್ವಾಮಿ ಕಣಬರ್ಗಿಮಠದ ಶಿರಹಟ್ಟಿ ವೆಂಕೋಬರಾಯರ ಮಂಡಳಿಗಳು ಕ್ಷಿಪ್ರಗತಿಯಲ್ಲಿ ಜನಮನ್ನಣೆ ಗಳಿಸಿದ್ದವು. ಹಿಂದುಮುಂದು ಯೋಚಿಸದೆ ಬಚ್ಚಾಸಾನಿ 'ಸ್ತ್ರೀ ನಾಟಕ ಮಂಡಳಿ, ಲಕ್ಷ್ಮೇಶ್ವರ' ಎಂಬ ಮಂಡಳಿಯನ್ನು ಆರಂಭಿಸಿಯೇ ಬಿಟ್ಟಳು (೧೯೦೮). ಇದು ಮಹಿಳೆಯೊಬ್ಬಳು ಕಟ್ಟಿದ ಮೊದಲ ಮಂಡಳಿಯಾಯಿತು. ಇನ್ನೂ ವಿಶೇಷವೆಂದರೆ ಹೆಸರಿಗೆ ತಕ್ಕಂತೆ ಈ ಮಂಡಳಿ ಸ್ತ್ರೀಯರದೇ ಆಗಿತ್ತು. ಪಾತ್ರಗಳಿಂದ ಹಿಡಿದು, ಟಿಕೆಟ್ ಕೊಡಲಿಕ್ಕೆ, ಹ್ಯಾಂಡ್‌ಬಿಲ್ ಹಂಚಲಿಕ್ಕೆ, ಕೊನೆಗೆ ಗೇಟ್‌ಕೀಪರ್‌ಗಳವರೆಗೆ... ಹೀಗೆ ಎಲ್ಲ ಕೆಲಸವನ್ನು ಇಲ್ಲಿ ಮಹಿಳೆಯರೇ ನಿರ್ವಹಿಸುತ್ತಿದ್ದರು. ಕಾರಣ ಬಚ್ಚಾಸಾನಿಯ ಕುಟುಂಬವೇ ಅಷ್ಟು ದೊಡ್ಡದಿತ್ತು. ಅವಳ ತಂಗಿಯರೇ ಏಳು ಜನ ಇದ್ದರು. ಶ್ರೇಷ್ಠ ಗಾಯಕಿ ಬಚ್ಚಾಸಾನಿ ರಂಗದಮೇಲೆ ಪುರುಷ ಪಾತ್ರಗಳನ್ನೂ ನಿರ್ವಹಿಸುತ್ತಿದ್ದಳು. ತನ್ನ ಕಂಠಶ್ರೀಮಂತಿಕೆಯಿಂದ ಕಲಾರಸಿಕರಿಗೆ ರಸದೌತಣವನ್ನು ಉಣಬಡಿಸುವುದ ರೊಂದಿಗೆ, ಪುರುಷರ ನೆರಳಿಲ್ಲದೆ ಮಂಡಳಿಯನ್ನು ಕಟ್ಟಿದ್ದು ಒಂದು ಇತಿಹಾಸವೇ ಸರಿ.

**ಗಂಗೂಬಾಯಿ ಗುಳೇದಗುಡ್ಡ**

'ಗಾನರತ್ನ' ಎಂಬ ಬಿರುದು ಪಡೆದ ಗಂಗೂಬಾಯಿ, ವೃತ್ತಿರಂಗಭೂಮಿಯ ಮೊದಲ ನಟಿ ಎಂಬ ಖ್ಯಾತಿಗೆ ಪಾತ್ರಳಾದ ಎಲ್ಲೂಬಾಯಿ ಗುಳೇದಗುಡ್ಡಳ ಸಾಕುಮಗಳು.

ಓದುಬರಹ ಬಾರದ ಗಂಗೂಬಾಯಿ ೧೯೨೫ರಲ್ಲಿ ಶ್ರೀಕೃಷ್ಣ ನಾಟಕ ಮಂಡಳಿ ಗುಳೇದಗುಡ್ಡ ಎಂಬ ಹೆಸರಿನಡಿ ಕಂಪನಿ ಪ್ರಾರಂಭಿಸುತ್ತಾಳೆ. ಬಸವರಾಜ ಮನಸೂರು ಹಾಗೂ ಗಂಗೂಬಾಯಿಯವರ ಸಂಗೀತಾಭಿನಯಗಳಿಂದ ಬಾಲಚಂದಿರನಂತಿದ್ದ ಮಂಡಳಿ ಪೂರ್ಣಚಂದ್ರನಂತೆ ದೇದೀಪ್ಯಮಾನವಾಗಿತ್ತು. ಮರಾಠಿಯ ಪ್ರಸಿದ್ಧ ನಾಟಕ 'ಮಾನಾಪಮಾನ' ಎಂಬ ನಾಟಕವನ್ನು ಮದ್ವರಾಜ ದೇಶಪಾಂಡೆಯವರು ಕನ್ನಡಕ್ಕೆ ಅನುವಾದಿಸಿ ಆಡಿಸಿದರು. ಗಾನ ಕೋಗಿಲೆ ಗಂಗೂಬಾಯಿಯ ಕಂಠಶ್ರೀಮಂತಿಕೆ

ಹಾಗೂ ಅಭಿನಯಗಳಿಂದ ನಾಟಕ ಒಳ್ಳೆಯ ಪ್ರದರ್ಶನವನ್ನು ಕಂಡುಕೊಂಡಿತು. ಇವಳು ಆ ಕಂಪನಿಯ ಆಸ್ತಿಯೇ ಆಗಿದ್ದಳು. ಇವಳ ಸಹಜ ಅಭಿನಯ ಹಾಗೂ ಕಂಠಶ್ರೀಮಂತಿಕೆಯಿಂದ, ಉತ್ತರ ಕರ್ನಾಟಕವೇ ಅಲ್ಲದೆ, ಬೆಂಗಳೂರಿನಿಂದ ಹಳೇ ಮೈಸೂರಿನವರೆಗೂ ಕಂಪನಿ ಕ್ಯಾಂಪ್ ಹೂಡಿತು.

ಶ್ರೀನಿವಾಸರಾವ ಕೌಜಲಗಿಯವರ ಹಿರಿತನದಲ್ಲಿ ಗಂಗೂಬಾಯಿಗೆ ವಿಜಯಪುರದಲ್ಲಿ 'ಗಾನರತ್ನ' ಎಂಬ ಬಿರುದು ನೀಡಿ ಸನ್ಮಾನಿಸಿದರು. ಇದೇ ಸಂದರ್ಭದಲ್ಲಿ ರಂಗಭೂಮಿಯ ಭೀಷ್ಮನೆಂಬ ಉಪಾಧಿಗೆ ಒಳಗಾದ ಕಂದಗಲ್ಲ ಹನುಮಂತರಾಯರನ್ನು ಕರೆಯಿಸಿ, 'ಸಂಧ್ಯಾರಾಗ' ನಾಟಕದ ತಾಲೀಮು ಪ್ರಾರಂಭಿಸಿದರು. ಮುಂದೆ ಅವರನ್ನೇ ಕಂಪನಿಯ ವ್ಯವಸ್ಥಾಪಕರನ್ನಾಗಿ ಮಾಡಿಕೊಂಡಳು. ಗಂಗೂಬಾಯಿಗೆ ವ್ಯವಹಾರ ನೈಪುಣ್ಯತೆಯೂ ಇತ್ತು. ಹಂದಿಗನೂರ ಸಿದ್ರಾಮಪ್ಪನವರು ಇದೇ ಕಂಪನಿಯಲ್ಲಿ ಬಣ್ಣ ಹಚ್ಚಿದವರು. ಮುಂದೊಂದು ದಿನ ಅದ್ಭುತ ನಟರಾಗಿ ಬೆಳೆದರು. ವಾಮನರಾವ್ ಮಾಸ್ತರರ 'ವಿಶ್ವಗುಣಾದರ್ಶಿ ಮಂಡಳಿ'ಯನ್ನು ಗಂಗೂಬಾಯಿ ತ್ಯಜಿಸಿ ಬಂದಮೇಲೆ ಆ ಕಂಪನಿ ನಿಂತೇಹೋಯಿತಂತೆ. ಈಕೆ ಆ ಕಂಪನಿಯ ಉಸಿರೇ ಆಗಿದ್ದಳು.




**ಸೋನುಬಾಯಿ ದೊಡ್ಡಮನಿ**

ಮಹಿಳೆಯರಲ್ಲಿ ಮೊದಲ ಮಂಡಳಿ ಕಟ್ಟಿದ ಹೆಗ್ಗಳಿಕೆಗೆ ಪಾತ್ರಳಾದವಳು ಲಕ್ಷ್ಮೇಶ್ವರದ ಬಚ್ಚಾಸಾನಿ. ಈ ಬಚ್ಚಾಸಾನಿಯ ಸಹೋದರಿ ಪೀರವ್ವನ ಮಗಳೇ ಈ ಸೋನುಬಾಯಿ. ಬಚ್ಚಾಸಾನಿಯದು ದೊಡ್ಡ ಕುಟುಂಬ. ಇವರು ಸಪ್ತಸ್ವರದಂತೆ ಏಳು ಮಂದಿ ಅಕ್ಕತಂಗಿಯರು. ಇವರ ಹೆಸರುಗಳು ಸಣ್ಣರಾಜವ್ವ, ದೊಡ್ಡಸಾಬವ್ವ, ಸಣ್ಣಸಾಬವ್ವ, ದೊಡ್ಡದಾದವ್ವ, ಸಣ್ಣದಾದವ್ವ, ಮುಂಜೆವ್ವ, ಪೀರವ್ವ. ಈ ಕುಟುಂಬದ ಕುಡಿಯೇ ಸೋನುಬಾಯಿ. ತನ್ನ ಮಗಳು, ತನ್ನ ಸಹೋದರಿ ಬಚ್ಚಾಸಾನಿಯಂತೆ ಒಬ್ಬ ಸಂಗೀತಗಾರ್ತಿಯಾಗಬೇಕೆಂಬ ಕನಸು ಕಂಡವಳು ಪೀರವ್ವ.

ಸಂಗೀತವನ್ನು ಕಲಿಸಲೆಂದೇ ಪೀರವ್ವ ತನ್ನ ಮಗಳನ್ನು ಕರೆದುಕೊಂಡು ಹಾವೇರಿಗೆ ಬರುತ್ತಾಳೆ. ತಾಯಿಯ ಬಯಕೆಯಂತೆ, ಶ್ರದ್ಧೆಯಿಂದ ಸಂಗೀತ ಕಲಿಯುತ್ತಿರುವಾಗಲೇ, ಅಬ್ಬಿಗೇರಿ ಕಂಪನಿಯ ಮಾಲೀಕರಾದ ಬಸನಗೌಡರ ಕಣ್ಣು ಈ ಹುಡುಗಿಯ ಮೇಲೆ ಬಿದ್ದಿರಬಹುದು. ಅವಳ ಶರೀರ, ಶಾರೀರಕ್ಕೆ ಮಾರುಹೋದ ಗೌಡರು ತಮ್ಮ ಕಂಪನಿಯ 'ಪಾದುಕಾ ಪಟ್ಟಾಭಿಷೇಕ', 'ಲಂಕಾದಹನ' ಎಂಬ ನಾಟಕಗಳಲ್ಲಿ ಚಿಕ್ಕಚಿಕ್ಕ ಕಂಪನಿ ಪಾತ್ರಗಳನ್ನು ಕಲ್ಪಿಸಿಕೊಡುತ್ತಾರೆ. 'ನಂತರ ಅಂಬಾಪ್ರಸಾದಿಕಾ' ಕಂಪನಿಯಲ್ಲಿ ಬಾಲನಟಿಯಾಗಿ ನಟಿಸುತ್ತಿರುವಾಗಲೇ ರಂಗನಾಥ ಭಟ್ಟರು ಅವಳಿಗೆ ನಾಯಕಿಯ ಪಾತ್ರವನ್ನು ಕೊಡುತ್ತಾರೆ. ಸೋನುಬಾಯಿಗೆ ಆಗ ಹದಿನಾಲ್ಕರ ಹರೆಯ. ಇವಳೇ ಆ ಕಂಪನಿಗೆ ಆದಾಯದ ಮೂಲವಾಗುತ್ತಾಳೆ. ಅದಕ್ಕೆ ಅವಳ ಶಾರೀರವೇ ಆಸ್ತಿ.

ಸಂಗೀತ ಕಲಿಯಬೇಕೆಂಬ ಅದಮ್ಯ ಆಶೆಯಿಂದ ರಂಗಭೂಮಿಯನ್ನು ಪ್ರವೇಶಿಸಿದ ಸೋನುಬಾಯಿ ಒಬ್ಬ ನಟಿಯಾಗಿ, ಕಂಪನಿ ಒಡತಿಯಾಗಿ, ಬೆಳೆದದ್ದು ಅಸಾಮಾನ್ಯ ಸಂಗತಿ. ವೃತ್ತಿರಂಗಭೂಮಿಗೆ ರಂಗಗೀತೆಗಳಿಂದ, ಶಾಸ್ತ್ರೀಯ ಸಂಗೀತದ ಮೂಲಕ ಒಂದು ಹೊಸ ಆಯಾಮವನ್ನು ತಂದುಕೊಟ್ಟ ಶ್ರೇಯಸ್ಸು ಸೋನುಬಾಯಿಯದು.

**ಗೋಹರಜಾನ್ ಕರ್ನಾಟಕಿ**

ಒಂದು ಕಾಲಕ್ಕೆ ತನ್ನ ಮೋಹಕ ಮೈಮಾಟ, ಕಂಚಿನ ಕಂಠದಿಂದ, ನಾಡಿನಾದ್ಯಂತ ಜನತೆಯ ಮನಕ್ಕೆ ಕಿಚ್ಚು ಹಚ್ಚಿದ ಬೆಡಗಿ ಅಮೀರಜಾನ್ ಕರ್ನಾಟಕಿ. ಅವಳ ಸಹೋದರಿಯೇ ಈ ಗೋಹರಜಾನ್. ತಂದೆ ಹುಸೇನಸಾಬ ಹಾರ್ಮೋನಿಯಂ ವಾದಕ. ಸಂಗೀತದ ಜೋಗುಳವನ್ನೇ ಕೇಳುತ್ತ ಬೆಳೆದ ಗೋಹರಜಾನಳ ರಕ್ತದಲ್ಲಿ ಅದಾಗಲೇ ಸಪ್ತಸ್ವರಗಳ ನಾದ ಹರಿಯುತ್ತಿತ್ತು.

ಸಂಗೀತಪ್ರಧಾನವಾದ ಪೌರಾಣಿಕ ನಾಟಕಗಳೇ ಅಂದು ಚಾಲ್ತಿಯಲ್ಲಿದ್ದವು. ಹೀಗಾಗಿ ಸಂಗೀತ ಬಲ್ಲವರಿಗೆ ರಂಗಭೂಮಿ ಆಶ್ರಯ ತಾಣವಾಗಿತ್ತು. ೧೯೨೩ರಲ್ಲಿ ಪ್ರಾರಂಭವಾದ ಏರಾಶಿಭರಮಪ್ಪನವರ 'ಶ್ರೀವಾಣಿವಿಲಾಸ' ಕಂಪನಿಯಲ್ಲಿ ಅಕ್ಕ ಅಮೀರಜಾನ್ ಕರ್ನಾಟಕಿ, ಕಿತ್ತೂರ ರುದ್ರಮ್ಮ ನಾಟಕದಲ್ಲಿ ರುದ್ರಮ್ಮನ ಪಾತ್ರವನ್ನು ಮಾಡುತ್ತಿದ್ದಳು. ಅವಳು ಮುಂಬಯಿ ಚಿತ್ರಜಗತ್ತಿಗೆ ಕಾಲಿಟ್ಟಾಗ, ಅಲ್ಲಿ ತೆರವಾದ ಆ ಸ್ಥಾನವನ್ನು ಗೋಹರಜಾನ್ ತುಂಬಿದಳು. ಮನಸೂರ ಹಾಗೂ ನೀಲಕಂಠಬುವಾ ಮಿರಜಕರ ಅವರ ಚಾಲ್, ಇವಳ ಮೋಹಕ ಕಂಠಸಿರಿ, ಪ್ರೇಕ್ಷಕರಿಗೆ ಮೋಡಿ ಮಾಡುವುದರೊಂದಿಗೆ, ರಂಗಮಂದಿರ ಕಿಕ್ಕಿರಿದು ತುಂಬಿರುತ್ತಿತ್ತಂತೆ. ಇದೇ ಕಂಪನಿಯ ಇನ್ನೊಂದು ನಾಟಕ 'ವರ ಪ್ರಧಾನ'ದಲ್ಲಿ ಗೋಹರಜಾನ್ ಲಲಿತಾಳ ಪಾತ್ರವನ್ನು ನಿಭಾಯಿಸುತ್ತಿದ್ದಳಂತೆ. ಈ ನಾಟಕವೂ ಇವಳು ಹಾಡಿದ ರಂಗಗೀತೆಗಳಿಂದ ರಂಗೇರುತ್ತಿತ್ತು. ಬಹಳ ಕಾಲ ಇವಳು ಕನ್ನಡ ರಂಗಭೂಮಿಯಲ್ಲಿ ಉಳಿಯದಿದ್ದರೂ ಇದ್ದಷ್ಟು ದಿನ ರಂಗಭೂಮಿಯ ಆಸ್ತಿಯೇ ಆಗಿದ್ದಳು.

ಮುಂದೊಂದು ದಿನ ಸಂಗೀತದ ಮೇರುಪರ್ವತವೇ ಆಗಿದ್ದ, ಬಾಲಗಂಧರ್ವರ ಒಡನಾಟ ಸಿಕ್ಕಾಗ, ಮರಾಠಿ ರಂಗಭೂಮಿಯಲ್ಲಿ ಬಾಲಗಂಧರ್ವರು ಅಭಿನಯಿಸುತ್ತಿದ್ದ ಎಲ್ಲ ಸ್ತ್ರೀ ಪಾತ್ರಗಳನ್ನು ಗೋಹರಜಾನ್ ಮಾಡಿ ಮರಾಠಿಗರ ಮನ ಗೆದ್ದಳು. ಅದಕ್ಕೆ ಅವಳ ಅದ್ಭುತ ನಟನೆ, ಮೋಹಕ ಕಂಠವೇ ಕಾರಣ. ಈಕೆ ಬಾಲಗಂಧರ್ವರ ಕಂಪನಿ ಸಾಲದಲ್ಲಿದ್ದಾಗ ಒಂದು ಲಕ್ಷ ರೂಪಾಯಿ ಕೊಟ್ಟು, ಮುಳುಗುವ ಕಂಪನಿಯನ್ನು ತೇಲಿಸುತ್ತಾಳೆ. ಆ ಮೂಲಕ ಒಬ್ಬ ಕನ್ನಡದ ಹೆಣ್ಣುಮಗಳು ಮರಾಠಿ ಕಂಪನಿಯ ಉಳಿವಿಗೆ ಕಾರಣಳಾಗುತ್ತಾಳೆ. ದೇಶ ಭಾಷೆಯನ್ನು ಮೀರಿ ಬೆಳೆಯುತ್ತಾಳೆ. ಬಾಲಗಂಧರ್ವರು ಅನಾರೋಗ್ಯದಿಂದ ಹಾಸಿಗೆ ಹಿಡಿದಾಗ ಅವರಿಗೆ ಹಾಡಲಿಕ್ಕಾಗದೆ ಅರ್ಧದಲ್ಲಿ ನಿಲ್ಲಿಸಿದರೆ, ಆ ರಾಗವನ್ನು ಸ್ವತಃ ಗೋಹರಜಾನ್ ಪೂರ್ಣಗೊಳಿಸುತ್ತಿದ್ದಳಂತೆ. ಒಬ್ಬ ಮುಸ್ಲಿಂ ಮಹಿಳೆಯಾಗಿ ಕನ್ನಡ ಹಾಗೂ ಮರಾಠಿ ರಂಗಭೂಮಿಯನ್ನು ಉತ್ತುಂಗಕ್ಕೇರಿಸಿದ ಶ್ರೇಯಸ್ಸು ಇವಳದು.

**ಅಮೀರಜಾನ್ ಕರ್ನಾಟಕಿ**

ಬೀಳಗಿಯ ಕಲಾವಂತರ ಮನೆತನದಲ್ಲಿ ಹುಟ್ಟಿ ಬೆಳೆದ ಅಮೀರಜಾನ್ ಸ್ಫುರದ್ರೂಪಿ ಹೆಣ್ಣುಮಗಳು. ತಂದೆ ಹುಸೇನ್ ಸಾಬರಿಂದ ಬಳುವಳಿಯಾಗಿ ಬಂದ ಸಂಗೀತ ಆಕೆಯ ಮೋಹಕ ರೂಪಕ್ಕೆ ಕಳೆಗಟ್ಟಿತ್ತು. ಬೀಳಗಿಯ ಸುತ್ತಲಿನ ಗ್ರಾಮಗಳಲ್ಲಿ ನಡೆಯುವ ಹನುಮಂತ ದೇವರ ಓಕುಳಿಯಲ್ಲಿಯೂ ಇವಳು ಹಾಡುತ್ತಿದ್ದಳಂತೆ, ಹಿಂದೂ ದೇವರುಗಳಿಗೂ ಸಂಗೀತ ಸೇವೆಯನ್ನು ಸಲ್ಲಿಸುವುದನ್ನು ನೋಡಿದರೆ, ಗುಡಿಸಂಸ್ಕೃತಿಗೆ ಸೇರಿದ ಜಾತ್ಯತೀತ ಕುಟುಂಬದ ಹರಿಕಾರಳಿವಳು ಎನ್ನುವುದರಲ್ಲಿ ಉತ್ಪ್ರೇಕ್ಷೆಯಿಲ್ಲ.

ಬೀಳಗಿಯಿಂದ ವಿಜಯಪುರಕ್ಕೆ ಬಂದು ನೆಲೆಸಿದ, ಅಮೀರಜಾನಳ ಬಣ್ಣದ ಬದುಕು ಆರಂಭವಾದದ್ದೇ ರಂಗಭೂಮಿಯಿಂದ. ರಂಗಭೂಮಿಗೆ ಬೇಕಾದ ಸುಂದರ ಮೈಮಾಟ, ಒಳ್ಳೆಯ ಕಂಠಶ್ರೀಮಂತಿಕೆ ಆಕೆಯಲ್ಲಿತ್ತು. ೧೯೨೩ರಲ್ಲಿ ಏರಾಶಿಭರಮಪ್ಪನವರ ಮಾಲೀಕತ್ವದಲ್ಲಿ ಪ್ರಾರಂಭವಾದ 'ಶ್ರೀವಾಣಿವಿಲಾಸ ಸಂಗೀತ ನಾಟಕ ಮಂಡಳಿ'ಯಲ್ಲಿ ನಟಿಸಿದ್ದೇ ಇವಳ ಮುಂದಿನ ಭವಿಷ್ಯಕ್ಕೆ ಭದ್ರ ಬುನಾದಿಯಾಯ್ತು. ಆಗಿನ್ನೂ ಅವಳಿಗೆ ಹದಿನೇಳರ ಹರೆಯ.

ಪ್ರತಿಭೆ ಇದ್ದರೆ ಅವಕಾಶಗಳಿಗೇನು ಕೊರತೆ ? ಮುಂಬೈ ಶಹರ ಇವಳನ್ನು ಕೈಬೀಸಿ ಕರೆಯಿತು. ನಾಲ್ವತ್ತರ ದಶಕದಲ್ಲಿ 'ಆವಾರ', 'ಕಿಸ್ಮತ್' ಚಲನ ಚಿತ್ರಗಳು ಪಡ್ಡೆ ಹುಡುಗರಿಗೆ ಹುಚ್ಚು ಹಿಡಿಸಿದ್ದವು. ಅದಕ್ಕೆ ಅಲ್ಲಿರುವ ಡೈಲಾಗಿಗಾಗಿ ಅಥವಾ ಹೀರೋ ಹೀರೋಯಿನ್ ಕಾರಣ ಎಂದರು ? ಅದ್ಯಾವುದೂ ಅಲ್ಲ; ಆ ಚಿತ್ರದಲ್ಲಿನ ಹಾಡು ಗಳಿಗಾಗಿ; ಆ ಹಿನ್ನೆಲೆ ಹಾಡುಗಳನ್ನು ಹಾಡಿದವರು ಬೇರೆ ಯಾರೂ ಅಲ್ಲ, ಅದ್ಭುತ ಕಂಠಸಿರಿಯ ಅಮೀರಜಾನ್. ಚಿತ್ರಜಗತ್ತಿನಲ್ಲಿ ಬಹುಕಾಲದವರೆಗೆ ಬಹು ಬೇಡಿಕೆ ಇದ್ದ ಸಂಗೀತಗಾರ್ತಿಯಾಗಿದ್ದಳು. ಯಾವಾಗ ಚಿತ್ರಜಗತ್ತಿನಲ್ಲಿ ಲತಾಮಂಗೇಶ್ಕರರ ಆಗಮನವಾಯ್ತೋ ಆವಾಗ ಅಮೀರಜಾನ್ ತೆರೆಮರೆಗೆ ಸರಿಯುತ್ತಾಳೆ.



*ಗಂಗೂಬಾಯಿ ಗುಳೇದಗುಡ್ಡ*



*ಅಮೀರಜಾನ್ ಕರ್ನಾಟಕಿ*



*ಜುಬೇದಾಬಾಯಿ ಸವಣೂರ*



*ರೇಣುಕಮ್ಮ ಮುರುಗೋಡ*

ರಂಗಭೂಮಿಯ ಚಿತ್ರಜಗತ್ತಿನ ನಕ್ಷತ್ರವೊಂದು ೧೯೬೫ರಲ್ಲಿ ಕಳಚಿಬಿತ್ತು.

**ಸುಭದ್ರಮ್ಮ ಮನಸೂರು**

ಬಳ್ಳಾರಿಯಂತಹ ಬಿರುಬಿಸಿಲಿನ ನಾಡಿನಲ್ಲಿ, ತುಂಗೆಯ ಮಡಿಲಲ್ಲಿ, ದೇವದಾಸಿ ಕುಟುಂಬದ ಭಾಗ್ಯಮ್ಮ ರಂಗಭೂಮಿಯ ನಟಿಯಲ್ಲ. ಆದರೂ ಶಾಸ್ತ್ರೀಯ ಸಂಗೀತದಲ್ಲಿ ಅಪಾರವಾದ ಪಾಂಡಿತ್ಯವನ್ನು ಹೊಂದಿದ್ದವಳು. ಅವಳ ಕಂಠ ಎಷ್ಟು ಸುಂದರವಾಗಿತ್ತೋ ಅವಳ ರೂಪವೂ ಕೂಡ ಅಷ್ಟೇ ಮೋಹಕವಾಗಿತ್ತು. ಇಂಥ ಒಬ್ಬ ಮಹಾನ್ ಸಂಗೀತಗಾರಳ ಮಗಳೇ ಸುಭದ್ರಮ್ಮ. ಸಂಗೀತಲೋಕದ, ಕಲಾ ಜಗತ್ತಿನ ಮೇರುಪ್ರತಿಭೆ ಇದು.

ಸುಭದ್ರಮ್ಮ ಬೆಳೆಯುತ್ತಿದ್ದಂತೆ, ತಾಯಿಯ ಸಹಜ ಗುಣಗಳು ಇವಳಲ್ಲಿಯೂ ಅರಳತೊಡಗಿದ್ದವು. ನಾಟಕ ಸಂಗೀತ ಕುರಿತಂತೆ ವಿಶೇಷ ಒಲವನ್ನು ಬೆಳೆಯಿಸಿಕೊಂಡಳು ಸುಭದ್ರಮ್ಮ. ಮಗಳ ಮನದಿಂಗಿತವನ್ನರಿತ ಭಾಗ್ಯಮ್ಮ ನಾಟಕ ಕಂಪನಿಗೆ ಸೇರಿಸುವ ಆಲೋಚನೆ ಮಾಡುತ್ತಾಳೆ. ಶ್ರೀಧರ ಎಂಬುವರ ಮಾಲೀಕತ್ವದಲ್ಲಿ ನಡೆಯುತ್ತಿದ್ದ 'ಸುಮಂಗಲಿ ನಾಟ್ಯಸಂಘ'ದ ಮೂಲಕ ಇವಳ ಬಣ್ಣದ ಬದುಕು ಶುರುವಾಗುತ್ತದೆ. ಶ್ರೀಧರ ಅವರು ಒಂದು ಹಾಡು ಹೇಳಲು ಕೇಳಿದಾಗ, ಪುಟ್ಟ ಬಾಯಿಂದ ಬಂದ ಆ ಹಾಡು ಬ್ರಹ್ಮಾಂಡವನ್ನೇ ಜೋಗುಳ ಹಾಡಿ ಮಲಗಿಸಿದಂತಿತ್ತು. ಪ್ರೇಕ್ಷಕರ ಮನಗೆದ್ದ ಬೆಡಗಿಯಲ್ಲಿ ತೀರದ ದಾಹವಿತ್ತು.

ಮಾಸ್ಟರ್ ಹಿರಣ್ಣಯ್ಯನವರ 'ಲಂಚಾವತಾರ' ನಾಟಕದಿಂದ ಸುಭದ್ರಮ್ಮನವರ ಅದೃಷ್ಟವೇ ಬದಲಾಯಿತು. 'ಲಂಚಾವತಾರ' ನಾಟಕಕ್ಕೆ ಸಂಗೀತ ಸಂಯೋಜನೆ ಮಾಡಿದವರು ಯೋಗಾನರಸಿಂಹರು. ಅಕ್ಕಮಹಾದೇವಿಯ 'ಬೆಟ್ಟದಾ ಮೇಲೊಂದು ಮನೆಯ ಮಾಡಿ' ಎಂಬ ವಚನವನ್ನು ಸುಭದ್ರಮ್ಮನಿಂದ ಮೇಲಿಂದ ಮೇಲೆ ಹಾಡಿಸುತ್ತಿದ್ದರಂತೆ. ಸುಭದ್ರಮ್ಮ ತನ್ನ ಅದ್ಭುತ ಅಭಿನಯ ಹಾಗೂ ಕಂಠಸಿರಿಯಿಂದ ಇವತ್ತಿಗೂ ಜನಮಾನಸದಲ್ಲಿ ಹಚ್ಚಹಸಿರಾಗಿ ಉಳಿದಿದ್ದಾಳೆ. ಕಂದಗಲ್ ಹನುಮಂತರಾಯರ 'ರಕ್ತರಾತ್ರಿ' ನಾಟಕದ ದ್ರೌಪದಿಯ ಪಾತ್ರದ ಅವರ ಸಂಭಾಷಣೆಯನ್ನು, ನಟನೆಯನ್ನು ನೋಡಿದರೆ ಈಗಲೂ ಮೈನವಿರೇಳುತ್ತದೆ. ಅವರ ದೇಹಕ್ಕೆ ವಯಸ್ಸಾಗಿರಬಹುದು. ಆದರೆ ಅವರ ಮನಸ್ಸಿಗೆ, ಕಂಠಕ್ಕೆ ಇನ್ನೂ ಮುಪ್ಪು ಆವರಿಸಿಲ್ಲ. ವಯಸ್ಸು ದೇಹಕ್ಕೆ, ಮನಸ್ಸಿಗಲ್ಲ ಎಂಬುದನ್ನು ಸಾಬೀತುಪಡಿಸಿ ತೋರಿಸಿದ್ದಾರೆ ಸುಭದ್ರಮ್ಮ. ಹಲವಾರು ಪ್ರಶಸ್ತಿಗಳು ಅವರನ್ನು ಅರಸಿಕೊಂಡು ಬಂದಿವೆ.

**ಜುಬೇದಾಬಾಯಿ ಸವಣೂರ**

೧೯೩೧ರಲ್ಲಿ ಕಟ್ಟಾ ಸಂಪ್ರದಾಯಸ್ಥ ಕುಟುಂಬದಲ್ಲಿ ಜನಿಸಿದ ಜುಬೇದಾ ಸುಖವಾಗಿಯೇ ಬೆಳೆದವಳು. ಹೆತ್ತವರನ್ನು ಕಳೆದುಕೊಂಡ ಮೇಲೆ ಆ ಸುಖ ಅವಳಿಗೆ ಮರೀಚಿಕೆಯಾಯ್ತು. ತನ್ನ ಎಂಟನೆಯ ವಯಸ್ಸಿನಲ್ಲಿಯೇ ಬದುಕಿನ ನೊಗಕ್ಕೆ ಹೆಗಲು ಕೊಡಬೇಕಾಯ್ತು. ಅಜ್ಜ ಅಮಲ್ ದಿವಾನ ಒಳ್ಳೆಯ ನಟ ಹಾಗೂ ಕವ್ವಾಲಿ ಗಾಯಕರಾಗಿದ್ದರಂತೆ. ಆ ಕಾರಣದಿಂದಲೋ ಏನೋ ಇವಳಿಗೂ ಸಂಗೀತದ ಗೀಳು ಅಂಟಿಕೊಂಡಿತ್ತು. ಹುಲಿಮನಿ ಸೀತಾರಾಮ ಶಾಸ್ತ್ರಿಯವರು ಹಾವೇರಿಯಲ್ಲಿ ನಾಟಕದ ಕ್ಯಾಂಪ್ ಹಾಕಿದ್ದರು. ಹಿರಿಯರ ಕಣ್ತಪ್ಪಿಸಿ ನಾಟಕ ನೋಡಲು ಹೋಗತೊಡಗಿದಳು. ಬಣ್ಣದ ಬದುಕು ಅವಳನ್ನು ಕೈ ಬೀಸಿ ಕರೆಯಿತು.

ಅವಳಿಗೆ ನಟನೆಯ ಬಗ್ಗೆ ಗೊತ್ತಿರದಿದ್ದರೂ, ರಾಗಗಳ ಬಗ್ಗೆ ಸ್ವಲ್ಪ ಜ್ಞಾನವಿತ್ತು. ಎಲ್ಲ ಶೃಂಖಲೆಗಳನ್ನು ಕಿತ್ತೊಗೆದು ನರೇಗಲ್ಲ ಚನ್ನಬಸವಯ್ಯನವರ ಕಂಪನಿಯನ್ನು ಪ್ರವೇಶಿಸಿದಳು. ಅದೇ ವೇಳೆಗೆ ಬಸವಲಿಂಗಶಾಸ್ತ್ರಿ ಬಾಳೀಮಠರ ನಾಟಕವೊಂದಕ್ಕೆ ನಟಿಯ ಅವಶ್ಯಕತೆಯಿತ್ತು, ಇವಳೇನೂ ಅಂಥ ಸ್ಫುರದ್ರೂಪಿ ಯುವತಿ ಅಲ್ಲ. ಆದರೆ ಒಳ್ಳೆಯ ಕಂಠಸಿರಿ ಇತ್ತು. ತನ್ನ ಕಂಚಿನ ಕಂಠದಿಂದ ರಂಗಗೀತೆಗಳಿಗೆ ಮೆರಗನ್ನು ತಂದಳು. ಅವಳ ಸ್ಥೂಲ ಶರೀರ ನಟನೆಗೆ ಅಡ್ಡಿಯಾದರೆ, ಅವಳ ಕೋಗಿಲೆಯ ಕಂಠ ಅವಳನ್ನು ಸಪ್ತಸ್ವರದ ಆಲಾಪದಲ್ಲಿ ತೇಲಾಡಿಸಿದ್ದು ಸತ್ಯ.

ಸ್ವಾಭಿಮಾನಿಯಾದ, ಅನ್ಯಾಯದ ವಿರುದ್ಧ ಸಿಡಿದೇಳುವ ಜುಬೇದಾ ರಂಗಭೂಮಿಯ ಕೋಗಿಲೆಯಾಗಿ ಮೆರೆದವಳು. 'ರಂಗಭೂಮಿಯ ರತ್ನ' ಎಂಬ ಬಿರುದನ್ನು ಪಡೆದಳು. ೧೯೯೩ರಲ್ಲಿ ಬದುಕಿನ ಪಯಣ ಮುಗಿಸಿದಳು.

**ಸರೋಜಮ್ಮ ಧುತ್ತರಗಿ**

ಕವಿ ವಿ. ಬಿ. ಧುತ್ತರಗಿಯವರ ಕೈಹಿಡಿದ ಸರೋಜಮ್ಮ ಒಂದು ಕಾಲಕ್ಕೆ ರಂಗಭೂಮಿಯ ರಾಣಿಯಾಗಿ ಮೆರೆದವಳು. ಸಂಗೀತ, ನೃತ್ಯ ಎಂದರೆ ಮೂಗು ಮುರಿಯುವ ಸಮಾಜಕ್ಕೆ ಸವಾಲಾಗಿ ನಿಂತವಳು. ಸಂಪ್ರದಾಯದ ಬೇಲಿಯನ್ನು ದಾಟಿ, ತನಗೆ ಇಷ್ಟವಾದ ಕ್ಷೇತ್ರದಲ್ಲಿ ಸಾಧನೆ ಮಾಡಿದವಳು. ಜಯಲಕ್ಷ್ಮಿ ಪಾಟೀಲ, ಪ್ರೇಮಾ ಗುಳೇದಗುಡ್ಡ, ಪ್ರೇಮಾ ಬದಾಮಿ ಇವರೆಲ್ಲಾ ಇವರ ಗರಡಿಯಲ್ಲಿ ನೃತ್ಯಪಟುಗಳಾದವರು. ರಂಗಗೀತೆಗಳಿಂದ ರಂಗಭೂಮಿಯನ್ನು ರಂಗೇರಿಸಿದ ಪ್ರತಿಭಾನ್ವಿತ ನಟಿ ಈಕೆ. ಈಕೆಯದು ಕಂಚಿನ ಕಂಠ. 'ಕಿತ್ತೂರ ಚನ್ನಮ್ಮ' ನಾಟಕದಲ್ಲಿನ ಚನ್ನಮ್ಮನ ಪಾತ್ರದ ಒಂದು ಸಂಭಾಷಣೆಯನ್ನು (೨೦೦೯) ಕೇಳಿದಾಗ ಪ್ರೇಕ್ಷಕರ ಮೈನವಿರೆದ್ದಿತು. ರಂಗಗೀತೆಗಳನ್ನು ಕೇಳುತ್ತಾ ಇದ್ದರೆ, ಇನ್ನೂ ಕೇಳಬೇಕೆನಿಸುತ್ತಿತ್ತು. ಅದ್ಭುತ ನಟಿಯಾಗಿ, ಸಂಗೀತಗಾರ್ತಿಯಾಗಿ, ನೃತ್ಯಗಾರ್ತಿಯಾಗಿ, ಕಂಪನಿಯ ಒಡತಿಯಾಗಿ ಬಹು ಬೇಡಿಕೆಯ ನಟಿಯಾಗಿದ್ದಳು ಸರೋಜಮ್ಮ. ಕೊನೆಗೂ ೨೦೧೪ರಲ್ಲಿ ವೀಣೆಯ ತಂತಿಯೊಂದು ಕಳಚಿಬಿತ್ತು.

ಸಂಗೀತ ಪ್ರಧಾನವಾದಂತಹ, ಸಂಗೀತದಿಂದಲೇನೆ ತಮ್ಮನ್ನು ತಾವು ಗುರುತಿಸಿಕೊಳ್ಳುವಂತಹ, ನಾಟಕ ಕಂಪನಿಗಳು ಅಂದು ಚಾಲ್ತಿಯಲ್ಲಿದ್ದವು. ಬಚ್ಚಾಸಾನಿಯ 'ಸ್ತ್ರೀ ಸಂಗೀತ ನಾಟಕ ಮಂಡಳಿ', ಸೋನುಬಾಯಿ ದೊಡ್ಡಮನಿಯ 'ನೂತನ ಸಂಗೀತ ನಾಟಕ ಮಂಡಳಿ', ವಾಮನರಾವ ಮಾಸ್ತರರ 'ವಿಶ್ವಗುಣಾದರ್ಶ ಸಂಗೀತ ನಾಟಕ ಮಂಡಳಿ', ಗೋಕಾಕದ 'ಶಾರದಾ ಸಂಗೀತ ನಾಟಕ ಮಂಡಳಿ' ಗರುಡ ಸದಾಶಿವರಾಯರ 'ದತ್ತಾತ್ರೇಯ ಸಂಗೀತ ನಾಟಕ ಮಂಡಳಿ'... ಹೀಗೆ ಉತ್ತರ ಕರ್ನಾಟಕದ ವೃತ್ತಿರಂಗಭೂಮಿಯಲ್ಲಿ ತಮ್ಮ ಅಮೋಘ ಅಭಿನಯದಿಂದ, ಅದ್ಭುತ ಕಂಠಶ್ರೀಮಂತಿಕೆಯಿಂದ ಒಂದು ಹೊಸ ಸಂಚಲನವನ್ನು ಮೂಡಿಸಿದವರು ಈ ಎಲ್ಲ ಕಲಾವಿದೆಯರು; ಉಪೇಕ್ಷೆಗೊಳಗಾದ ಮಹಿಳೆಯರು, ತಮ್ಮ ಕಂಠಶ್ರೀಮಂತಿಕೆಯಿಂದ ಬೆಳಕಿಗೆ ಬಂದದ್ದೂ ನಿಜವೇ.

**ಡಾ॥ ದೇವಿಕಾ ಡಿ. ನಗರಕರ**
ಮುಖ್ಯಸ್ಥರು, ಕನ್ನಡ ವಿಭಾಗ, ಶಿವಾನಂದ ಮಹಾವಿದ್ಯಾಲಯ
ಕಾಗವಾಡ – ೫೯೧ ೨೨೩, ಬೆಳಗಾವಿ ಜಿಲ್ಲೆ







# ಮಿತಿಮೀರುವ ಛಲ

## ಪಿ. ಜಯರಾಮ್



ತನ್ನೆಲ್ಲಾ ಭಾವಲಹರಿಗಳನ್ನು ಭಾವಚಿತ್ರ ಮತ್ತು ಭೂದೃಶ್ಯ ಚಿತ್ರಗಳ ಮೂಲಕ ಅದ್ಭುತವಾಗಿ ಬಿಂಬಿಸುತ್ತಿರುವ ಪಿ. ಜಯರಾಮ್ ಮಂಡ್ಯ ಜಿಲ್ಲೆ, ಮಳವಳ್ಳಿ ತಾಲೂಕಿನ ಮಿಕ್ಕೇರಿ ಗ್ರಾಮದಲ್ಲಿ ಚಿತ್ರಕಲಾ ಶಿಕ್ಷಕರಾಗಿದ್ದಾರೆ. ಬಾಲ್ಯದಲ್ಲಿಯೇ ಪೋಲಿಯೊ ಕಾಯಿಲೆಗೆ ತುತ್ತಾಗಿ ತಮ್ಮ ಎರಡೂ ಕಾಲುಗಳು ಸ್ವಾಧೀನ ಕಳೆದುಕೊಂಡಿದ್ದರೂ ಧೃತಿಗೆಡದೆ ತೆವಳುತ್ತಾ ಪ್ರಾಥಮಿಕ ಶಾಲೆಯವರೆಗೆ ಓದಿದ್ದಾರೆ. ನಡೆಯಲು ಬಾರದಿದ್ದರೂ ಹೆತ್ತವರ ಪ್ರೀತಿ ಮತ್ತು ಗೆಳೆಯರ ಸಹಕಾರದಿಂದ ಓದುವುದರಲ್ಲಿ ಆಸಕ್ತಿ ವಹಿಸಿ ಚಿತ್ರಕಲೆಯಲ್ಲಿ ಪದವಿ ಪಡೆದು ಕ್ರಿಯಾಶೀಲ ಕಲಾವಿದರಾಗಿ ಗುರುತಿಸಿಕೊಂಡಿದ್ದಾರೆ.

ಹಾಳೆ, ಪೆನ್ಸಿಲ್, ಪೆನ್ನು, ಬಣ್ಣ, ಕ್ಯಾನ್‌ವಾಸ್ ನಿತ್ಯ ಇವುಗಳೊಂದಿಗೆ ಸಂವಾದಿಸುತ್ತಾ ಹೊಸ ಹೊಸ ಕಲಾ ಹೊಳಹುಗಳನ್ನು ಶೋಧಿಸಿಕೊಳ್ಳುವುದರ ಜೊತೆಗೆ ಮಂಡ್ಯ, ಮೈಸೂರು, ಶ್ರೀರಂಗಪಟ್ಟಣ ಮತ್ತು ಶ್ರವಣಬೆಳಗೊಳದಲ್ಲಿ ನಡೆದ ರಾಜ್ಯಮಟ್ಟದ ಕಲಾಶಿಬಿರಗಳಲ್ಲಿ ಪಾಲ್ಗೊಂಡು, ನಾಡಿನ ಹಲವೆಡೆ ತಮ್ಮ ಕಲಾಕೃತಿಗಳನ್ನು ಪ್ರದರ್ಶಿಸಿದ್ದಾರೆ.



ಆರ್ಥಿಕವಾಗಿ ಮತ್ತು ದೈಹಿಕವಾಗಿ ಜಯರಾಮ್ ಅನುಭವಿಸಿದ ನೋವುಗಳಿಗೆ ಅವರ ಕಲಾಕೃತಿಗಳೇ ಸಾಂತ್ವನ ಹೇಳುತ್ತವೆ ಮತ್ತು ಅವರ ಅಂತರಂಗವನ್ನು ತೆರೆದಿಡುತ್ತವೆ. ತಮ್ಮ ಅಂಗವಿಕಲತೆಯನ್ನು ಮೀರಿ ನಿಂತು, ಚಿತ್ರಕಲೆಯಲ್ಲಿ ಇನ್ನಷ್ಟು ವಿಶಿಷ್ಟವಾದುದನ್ನು ಸಾಧಿಸಬೇಕೆಂಬ ಹಂಬಲವುಳ್ಳವರು. ಸೃಜನಶೀಲತೆಯತ್ತ ತೆರೆದುಕೊಂಡು ವಿಭಿನ್ನ ಶೈಲಿಯಲ್ಲಿ ರೇಖೆ ಎಳೆಯುತ್ತಿರುವ ಜಯರಾಮ್ ಹೊಸತಲೆಮಾರಿನ ಕಲಾವಿದರಿಗೆ ಮಾದರಿಯಾಗಿದ್ದಾರೆ.

**ಕೆ. ಬಿ. ವೀರಲಿಂಗನಗೌಡ್ರ**






Edited, printed and published by Dr. Siddanagouda Patil, Managing Director, Navakarnataka Publications (P) Ltd., Embassy Centre, Crescent Road, Bengaluru-560 001. Printed at Sri Vinayaka Printers, No. 738/10, 60th Cross, 5th Block, Rajajinagar, Bengaluru-560 010.

